ಕಾಣಿಕೆ

# ಶ್ರೀ ಪೃಥ್ವೀ ವಲ್ಲಭ

[ರೇಡಿಯೋ ನಾಟಕ ರೂಪಾಂತರ]

[ಬೆಂಗಳೂರು ಆಕಾಶವಾಣಿಯಲ್ಲಿ ಹದಿಮೂರು ಕಂತುಗಳಾಗಿ ಪ್ರಸಾರಗೊಂಡಿದೆ]

**ಡಾ.ವಿಜಯಾ ಸುಬ್ಬರಾಜ್**

ಕಾಲ ಪ್ರಕಾಶನ
ಬೆಂಗಳೂರು

**SRI PRITHVI VALLABHA**

By
**Dr. Vijaya Subbaraj**
# 51, Hamsi, 1-A Cross
35th Main, Banagirinagara
Banashankari 3rd Stage
Bangalore - 560085
Phone : 080-26793219

Published by
**Kaala Prakashana**
No.23/A, 2nd Floor
10th Cross, 1st 'N' Block
Rajajinagar
Bangalore - 560 010
Ph : 080-23426778



First Impression : 2010
Price : Rs.120/-
Pages : VIII+184=192
ISBN : 978-93-81071-02-1

Paper Used : **70 GSM Maplitho**
Book Size : **Demy 1/8**

Printed At
**Akshara Printers**
Bangalore

# ಶ್ರೀ ಪೃಥ್ವೀ ವಲ್ಲಭ

[ರೇಡಿಯೋ ನಾಟಕ ರೂಪಾಂತರ]

ಶ್ರೀ. ಸಿ.ಕೆ. ನಾಗರಾಜ್‌ರಾವ್ ಅವರ 'ಶ್ರೀ ಪೃಥ್ವೀ ವಲ್ಲಭ' ಐತಿಹಾಸಿಕ ಕಾದಂಬರಿಯ ರೇಡಿಯೋ ರೂಪಾಂತರವಾಗಿದೆ. ಈ ಶತಮಾನದ ೫ ನೇ ದಶಕದಲ್ಲಿ ಶ್ರೀ ಮುನ್ಷಿಯವರ ಕಾದಂಬರಿ ಪೃಥ್ವೀ ವಲ್ಲಭ ಆಧಾರಿತ ಅದೇ ಹೆಸರಿನ ಚಲನಚಿತ್ರದಲ್ಲಿ ಕರ್ನಾಟಕ ಇತಿಹಾಸ ಪರಂಪರೆಗೆ ಅನ್ಯಾಯವೆನಿಸುವಂತಹ ರೀತಿಯಲ್ಲಿ ಚಿತ್ರಿತವಾದ ಚಾಲುಕ್ಯ ಚಕ್ರವರ್ತಿ ತೈಲಪನ ವ್ಯಕ್ತಿತ್ವದ ಸರಿಯಾದ ಚಿತ್ರವನ್ನು ಕಟ್ಟಿ ಕೊಡುವ ಪ್ರಯತ್ನದ ಫಲವಾಗಿ ರಚಿಸಿರುವ ಶ್ರೀ ಪೃಥ್ವೀವಲ್ಲಭ ಕಾದಂಬರಿಯ ರೇಡಿಯೋ ನಾಟಕ ರೂಪಾಂತರ ಇದಾಗಿದೆ.

# ನನ್ನ ಮಾತು

ಸುಮಾರು ವರ್ಷಗಳಿಂದ ಆಕಸ್ಮಿಕವಾಗಿ ಆಕಾಶವಾಣಿಯ ಆಗಿನ ಸಹ ನಿರ್ದೇಶಕರಾಗಿದ್ದ ಶ್ರೀ ಗುಣಶೇಖರ್ ಅವರು ನನಗೆ ಸಿ.ಕೆ.ನಾಗರಾಜರಾವ್ ಅವರ ಶ್ರೀಪೃಥ್ವೀವಲ್ಲಭ ಕಾದಂಬರಿಯನ್ನು ಸಂಸ್ಕೃತಿ ಇಲಾಖೆಯ ಪ್ರಾಯೋಜಕತ್ವದಲ್ಲಿ ಪ್ರಸಾರವಾಗುತ್ತಿದ್ದ ಕಾದಂಬರಿಗಳ ನಾಟಕ ರೂಪಾಂತರಗಳ ಸರಣಿಗಾಗಿ, ಹದಿಮೂರು ಕಂತುಗಳಲ್ಲಿ ಬರೆದುಕೊಡಬೇಕೆಂದು ಕೇಳಿದಾಗ, ನನಗೆ ನಿಜಕ್ಕೂ ದಿಗ್ಭ್ರಮೆಯಾಯಿತು. ಇಂತಹ ಮಹತ್ವದ ಕೆಲಸಕ್ಕೆ ಅವಕಾಶ ದೊರೆತದ್ದು ಸಂತೋಷವೆನಿಸಿತಾದರೂ, ನಾಟಕ ರೂಪಕ್ಕೆ, ಅದೂ ಆಕಾಶವಾಣಿ ಪ್ರಸಾರಕ್ಕೆ ಯೋಗ್ಯವೆನಿಸುವ ರೀತಿಯಲ್ಲಿ ಮತ್ತು ಶ್ರವಣಮಾಧ್ಯಮಕ್ಕೆ ತಕ್ಕ ರೀತಿಯಲ್ಲಿ ಅಳವಡಿಸುವುದೇ ಒಂದು ಸವಾಲಾಗಿ ಗೋಚರವಾಯಿತು. ಆದರೂ ಅಷ್ಟು ಹೊತ್ತಿಗೆ ಆಕಾಶವಾಣಿಗೆ ಅನೇಕ ಶಬ್ದಚಿತ್ರಗಳನ್ನು ರೂಪಿಸಿಕೊಟ್ಟಿದ್ದರ ಅನುಭವ ಮತ್ತು ಸ್ವತಃ ರಂಗಭೂಮಿಗೆಂದೇ ಬರೆದ ನಾಟಕಗಳ ಅನುಭವ ಇದ್ದುದರಿಂದ, ಈ ಕೆಲಸಕ್ಕೆ ಮನಃಪೂರ್ವಕವಾಗಿ ಒಪ್ಪಿಕೊಂಡೆ. ಒಂದು ತಿಂಗಳ ಅವಧಿಯಲ್ಲಿ ಅರ್ಧಗಂಟೆಯ ಪ್ರಸಾರಕ್ಕೆ ಅನುಕೂಲವಾಗುವಂತೆ, ಹದಿಮೂರು ಕಂತುಗಳಲ್ಲಿ ನಾಟಕವನ್ನು ಪೂರೈಸಿದೆ.

ಆಕಾಶವಾಣಿಯ ಕಾರ್ಯಕ್ರಮ ನಿರ್ವಾಹಕರಾಗಿದ್ದ ಶ್ರೀಮತಿ ಶೇಷಪ್ರಭ.ಎಸ್. ಅವರ ನಿರ್ದೇಶನದಲ್ಲಿ ನಿರ್ಮಾಣಗೊಂಡ ಈ ಬಾನುಲಿ ಧಾರಾವಾಹಿ ಸಂಧ್ಯಾ ಕಲಾವಿದರಿಂದ ಅದ್ಭುತವಾಗಿ ಮೂಡಿ ಬಂತು. ಶ್ರೋತೃಗಳ ಪ್ರಶಂಸೆಯನ್ನೂ ಪಡೆಯಿತು.

ಇಂತಹ ಬಾನುಲಿ ನಾಟಕ ರೂಪಾಂತರ ಈಗ ಪುಸ್ತಕ ರೂಪದಲ್ಲಿ ಬರುತ್ತಿದೆ. ಇದಕ್ಕೆ ಕಾರಣ ಕಾಲ ಪ್ರಕಾಶನದ ಪ್ರಕಾಶಕರು. ಅವರಿಗೆ ಮೊದಲು ನನ್ನ ಕೃತಜ್ಞತೆಗಳು. ಆದರೆ ಇದಕ್ಕೂ ಹೆಚ್ಚಿಗೆ ಋಣಿಯಾಗಿರುವುದೆಂದರೆ ಈಗ ನಿರ್ದೇಶಕರಾಗಿರುವ ಶ್ರೀ ಗುಣಶೇಖರ್ ಮತ್ತು ತುಂಬ ಅಚ್ಚುಕಟ್ಟಾಗಿ, ಅದ್ಭುತವಾಗಿ ಕಾರ್ಯಕ್ರಮ ರೂಪಿಸಿದ ಶ್ರೀಮತಿ ಶೇಷಪ್ರಭ ಎಸ್. ಅವರಿಗೆ. ಶ್ರೀ ಗುಣಶೇಖರ್ ಅವರು ಕಾದಂಬರಿಯನ್ನು ಬಾನುಲಿ ರೂಪಾಂತರಕ್ಕೆ ಅವಕಾಶ ಕಲ್ಪಿಸಿಕೊಡುವುದರ ಮೂಲಕ ಈ ನಾಟಕ ರಚನೆಗೆ ಹೆಚ್ಚಿನ ಪ್ರಚೋದನೆ, ಪ್ರೇರಣೆ ನೀಡಿದ್ದಾರೆ. ಅವರಿಗೆ ಮತ್ತೊಮ್ಮೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

**ಡಾ.ವಿಜಯಾ ಸುಬ್ಬರಾಜ್**

# ಪಾತ್ರಗಳು

| | | |
|---|---|---|
| ನಿರೂಪಕ | (ಇತಿಹಾಸಕಾರ) | |
| ವಿಕ್ರಮಾದಿತ್ಯ | – | ರಾಷ್ಟ್ರಕೂಟ ಸಾಮಂತ |
| ಬೊಂತಾದೇವಿ | – | ವಿಕ್ರಮಾದಿತ್ಯನ ಮಡದಿ |
| ತೈಲಪ | – | ವಿಕ್ರಮಾದಿತ್ಯನ ಮಗ |
| ಖೊಟ್ಟಿಗ | – | ರಾಷ್ಟ್ರಕೂಟ ಚಕ್ರವರ್ತಿ |
| ಕರ್ಕ | – | ಖೊಟ್ಟಿಗನ ತಮ್ಮನ ಮಗ |
| ಪಂಡಿಗ | – | ಸಾಮಂತ |
| ಜಕ್ಕಿ ಸುಂದರಿ | – | ಪಂಡಿಗನ ಮಡದಿ |
| ಜಕ್ಕಲೆ (ಜಯಲಕ್ಷ್ಮಿ) | – | ಕರ್ಕನ ಮಗಳು |
| ಗಬ್ಬೀಂದ್ರ | – | ಸಾಮಂತ |
| ಚಟ್ಟಯ್ಯ | – | ರಾಷ್ಟ್ರಕೂಟ ಆಡಳಿತಾಧಿಕಾರಿ |
| ಕಾಳಲದೇವಿ | – | ಚಟ್ಟಯ್ಯನ ಮಡದಿ |
| ವಿನಯಾ | – | ಚಟ್ಟಯ್ಯನ ಮಗಳು |
| ಕೃಷ್ಣ | – | ಖೊಟ್ಟಿಗನ ಮಗ |
| ವಾಡುಗಿ | – | ಸೇವುಣ ದೊರೆ |
| ಭಿಲ್ಲಮ | – | ವಾಡುಗಿಯ ಮಗ |
| ಮುಂಜ | – | ಪರಮಾರ ದೊರೆ |
| ಮಲ್ಲಪ | – | ದಂಡನಾಯಕ |
| ಅತ್ತಿಮಬ್ಬೆ | – | ಮಲ್ಲಪನ ಮಗಳು |
| ಅಣ್ಣಿಗ | – | ಅತ್ತಿಮಬ್ಬೆಯ ಮಗ, ಪಡೆವಳ ತೈಲ |
| ಅಮ್ಮುಗಿ | – | ತೈಲಪನ ಸೋದರ ಮಾವ |
| ರನ್ನಮಯ್ಯ | – | ಅತ್ತಿಮಬ್ಬೆ ಆಶ್ರಿತ ಕವಿ<br>ತೈಲಪ ಚಕ್ರವರ್ತಿಯ ಆಸ್ಥಾನ ಕವಿ |
| ಕೇಶಿ ದಂಡನಾಥ | – | ದಂಡನಾಯಕ |
| ಅಂಕಕಾರ ಸೇವಕಿ | – | ಚಂದಲೆ |

ಪುರೋಹಿತ ಭಟ, ಸೈನಿಕರು ಮೊದಲಾದವರು

# ದೃಶ್ಯ – ೧

**ನಿರೂಪಕ :** (ಇತಿಹಾಸಕಾರ)

ಕರ್ನಾಟಕದ ಇತಿಹಾಸ ಪರಂಪರೆಯಲ್ಲಿ ಅನೇಕ ಪ್ರಮುಖ ರಾಜವಂಶಗಳು ಆಗಿ ಹೋಗಿವೆ. ಅಂತಹ ರಾಜವಂಶಗಳಲ್ಲಿ ಚಾಲುಕ್ಯ ವಂಶ ಬಹಳ ಪ್ರಮುಖವಾಗಿದೆ. ವಿಕ್ರಮಾದಿತ್ಯನ ಪುತ್ರ ತೈಲಪ ಕುಮಾರರು ತಮ್ಮ ವಂಶದ ಗತ ವೈಭವವನ್ನು ಮರಳಿ ಪಡೆಯುವ ಪ್ರತಿಜ್ಞೆಯನ್ನು ಎದೆಯಲ್ಲಿ ತುಂಬಿಕೊಂಡಿದ್ದಾರೆ. ತಂದೆಯ ಮಾತನ್ನು ಉಳಿಸುವ ಕನಸುಗಳಲ್ಲಿರುವ ತೈಲಪರಿಗೆ ತಾಯಿ ತಂದೆಯರಿಂದ ಕರೆ ಬಂದಿದೆ.

**ತೈಲಪ** : (ಪ್ರವೇಶಿಸಿ) ಅಪ್ಪಾಜಿ ಇಷ್ಟು ತುರ್ತಾಗಿ ನನಗೆ ಬರಹೇಳಿದಿರಂತೆ. ನನ್ನಿಂದ ಏನಾಗಬೇಕು. ಅಪ್ಪಣೆ ಕೊಡಿಸಿ.

**ವಿಕ್ರಮಾದಿತ್ಯ** : ಇಷ್ಟೊಂದು ಆತುರವೇಕೆ ಮಗು. ಬಂದು ನಿನ್ನ ಅವ್ವೆಯ ಸಮಕ್ಷಮದಲ್ಲಿ ಕುಳಿತುಕೋ....... ಬೊಂತಾ ನಮ್ಮ ಕುಮಾರರು ನಮ್ಮ ಮಾತಿಗೆ ಮನ್ನಣೆ ಕೊಟ್ಟು ಆಗಮಿಸಿದ್ದಾರೆ. ವಿಷಯವೇನೆಂಬುದನ್ನು ನೀನೇ ಹೇಳುವೆಯಾ?

**ಬೊಂತಾದೇವಿ** : ವಿಷಯ ಯಾರು ಹೇಳಿದರೇನು ಸ್ವಾಮಿ? ನೀವೇ ಹೇಳಿಬಿಡಿ.

**ವಿಕ್ರಮಾದಿತ್ಯ** : ಬೇಡ. ಸಂಸಾರಕ್ಕೆ ಸಂಬಂಧಪಟ್ಟ ವಿಷಯವಾದ್ದರಿಂದ ನಾನು ಹೇಳುವುದಕ್ಕಿಂತ ನೀನು ಹೇಳಿದರೇನೇ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ.

**ಬೊಂತಾದೇವಿ** : ಆಯಿತು. ನಾನೇ ನಮ್ಮ ಕುಮಾರರಿಗೆ ತಿಳಿಸಿ ಹೇಳುತ್ತೇನೆ........(ತೈಲಪನ ಕಡೆ ತಿರುಗಿ) ಕುಮಾರ ನಾನೂ ಮತ್ತು ನಿಮ್ಮ ತಂದೆಯವರು ನಿನ್ನ ಲಗ್ನದ ಬಗ್ಗೆ ಆಲೋಚಿಸುತ್ತಿದ್ದೇವೆ.

**ತೈಲಪ** : ಮದುವೆಗಿಂತ ಮುಖ್ಯ ವಿಚಾರಗಳು ಆಲೋಚಿಸಲು ಸಾಕಷ್ಟು ಇರುವಾಗ, ಈಗಲೇ ಅದರ ಚಿಂತೆ ಬೇಡವೆನಿಸುತ್ತಿದೆ ಅವ್ವೆ.

**ಬೊಂತಾದೇವಿ** : ಅಂತಹ ಮುಖ್ಯ ವಿಚಾರಗಳು, ಸಮಸ್ಯೆಗಳು ಸದ್ಯದಲ್ಲಿ ಏನಿವೆ ಮಗು?

**ತೈಲಪ** : ಅವ್ವೆ. ನಮ್ಮದಾಗಿದ್ದುದೆಲ್ಲವನ್ನೂ ದೋಚಿಕೊಂಡು ಮೆರೆಯುತ್ತಿರುವವರ ಕೃಪಾನ್ನವನ್ನು ತಿನ್ನುತ್ತ, ಅವರ ದಾಸ್ಯದಲ್ಲಿ ದುಡಿಯುತ್ತಾ ಇನ್ನೆಷ್ಟು ಕಾಲ ಬಾಳಬೇಕು?

**ಬೊಂತಾದೇವಿ** : ಮಗು ದಾಸ್ಯದ ನೋವು ನಿನ್ನೊಬ್ಬನಿಗೇ ಅಲ್ಲ. ಆ ನೋವಿನ ಹುಳು ನಿಮ್ಮಪ್ಪಾಜಿ ಅವರನ್ನೂ ಒಳಗಿಂದೊಳಗೇ ತಿನ್ನುತ್ತಿದ್ದರೂ, ಅನುಕೂಲ ಅವಕಾಶಗಳಿಗಾಗಿ ಕಾಯುತ್ತಿದ್ದಾರೆ. ನಿನ್ನ ಮತ್ತು ನಿನ್ನ ತಂದೆಯವರ ನೋವು ದೂರವಾಗಬೇಕಾದರೆ ಮತ್ತು ನಿಮ್ಮ ಕನಸುಗಳು ಸಾಕ್ಷಾತ್ಕಾರಗೊಳ್ಳಬೇಕಾದರೆ, ಮೊದಲಿಗೆ ಬಲಸಂವರ್ಧನೆಯು ಅಗತ್ಯವಿದೆ ಮಗು. (ಅದನ್ನು ಈಗಾಗಲೇ ನಿಮ್ಮ ತಂದೆಯವರು ಸಾಧಿಸಲು ಹೊರಟಿದ್ದಾರೆ. ನನ್ನ ತವರು ಮನೆಯ ನೆರವು ಪಡೆದಾಗಿದೆ.) ನಿನ್ನ ಲಗ್ನದ ಮೂಲಕವಾಗಿ ಇನ್ನಷ್ಟು ಬಲ ಸಂಪಾದನೆಯಾಗುವ ಯೋಜನೆ ರೂಪಿಸಿದ್ದಾರೆ. ನಿಧಾನವಾಗಿ ನಿನ್ನ ಅಪ್ಪಾಜಿಯವರು ನಿನಗೆ ಎಲ್ಲವನ್ನೂ ಸವಿಸ್ತಾರವಾಗಿ ತಿಳಿಸುತ್ತಾರೆ. ಈಗ ನಾವು ನೋಡಿರುವ ಹೆಣ್ಣು ನಿನ್ನ ಕನಸಿನ ಸಸಿಗಳಿಗೆ ನೀರೆರೆದು ಹೆಮ್ಮರವಾಗಿಸಬಲ್ಲವಳು.

**ತೈಲಪ** : ಅವ್ವೆ (ಆಶ್ಚರ್ಯದ ದನಿಯಲ್ಲಿ) ಹಾಗಾದರೆ ಅಂತಹ ಹೆಣ್ಣು ಯಾರಿರಬಹುದು! ಬೇಗ ತಿಳಿಸಿ.

**ಬೊಂತಾದೇವಿ** : ಪ್ರಭು ನೀವೇ ಆರಿಸಿರುವ ಆ ಅದೃಷ್ಟಜಾತಕದ ಹೆಣ್ಣು ಯಾರೆಂಬುದನ್ನು ಹೇಳಿ ಬಿಡಿ. ನಮ್ಮ ಮಗನ ಕುತೂಹಲ ಮಿತಿ ಮೀರುತ್ತಿದೆ. (ನಗು)

**ವಿಕ್ರಮಾದಿತ್ಯ** : ರಾಷ್ಟ್ರಕೂಟ ಮಹಾರಾಜ ಖೊಟ್ಟಿಗನ ಸೋದರ ನಿರುಮನ ಮಗ ಕರ್ಕನ ಮಗಳು ಜಯಲಕ್ಷ್ಮಿ.

**ತೈಲಪ** : (ಸಿಟ್ಟಿನಿಂದ) ಅಪ್ಪಾಜಿ, ನಮ್ಮನ್ನು ದೋಚಿ ಈ ಸ್ಥಿತಿಗೆ ತಂದವರ ಮನೆಯ ಹೆಣ್ಣನ್ನು ಮದುವೆಯಾಗಬೇಕೇ?...... ಖಂಡಿತ ಸಾಧ್ಯವಿಲ್ಲ.

**ವಿಕ್ರಮಾದಿತ್ಯ** : ಮಗು ಆವೇಶದಲ್ಲಿ ಅವಿವೇಕಿಯಾಗಬೇಡ. ಪೂರ್ವಾಪರಗಳನ್ನು ವಿಚಾರಮಾಡಿಯೇ ಈ ನಿರ್ಧಾರಕ್ಕೆ ಬಂದಿದ್ದೇವೆ. ರಾಜಕೀಯ ಚದುರಂಗದಾಟದಲ್ಲಿ ನಿರೀಕ್ಷೆಗಳಿಗಿಂತ ಭಿನ್ನವಾದ ಹಾದಿಗಳಲ್ಲಿಯೇ ನಮ್ಮ ಸ್ವಾರ್ಥದ ಕಾಯಿಗಳನ್ನು ನಡೆಸಬೇಕಾಗುತ್ತದೆ. ನಿನಗೆ ತಂದುಕೊಳ್ಳುತ್ತಿರುವ ಹೆಣ್ಣು ನಿನ್ನ ಅಭಿವೃದ್ಧಿಯ ಮೆಟ್ಟಿಲಾಗುತ್ತಾಳೆ.

ತೈಲಪ : ಅಪ್ಪಾಜಿ ಅವರೂ ಚದುರಂಗದಾಟದಲ್ಲಿ ಪಳಗಿದವರೇ ಅಲ್ಲವೇ? ನೀವು ನಿರೀಕ್ಷಿಸಿದ್ದಕ್ಕಿಂತ ಭಿನ್ನವಾಗಿ ಆ ಹೆಣ್ಣು ನಮಗೆ, ನಮ್ಮ ಕನಸುಗಳಿಗೆ ಮುಳುವಾದರೆ?....

ವಿಕ್ರಮಾದಿತ್ಯ : ಆ ಭಯ, ಆತಂಕಗಳು ಬೇಡ. ನಿನಗೇ ಗೊತ್ತಿರಬಹುದು. 'ಕೊಟ್ಟ ಹೆಣ್ಣು ಕುಲಕ್ಕೆ ಹೊರತು' – ಎಂಬ ನಾಣ್ಣುಡಿ. ಕೈ ಹಿಡಿದು ಬಂದವಳು ಗಂಡನ ಶ್ರೇಯೋಭಿಲಾಷಿಯನ್ನೇ ಉಸಿರಾಗಿಸಿಕೊಳ್ಳುತ್ತಾಳೆ. ಕೈ ಹಿಡಿದವನನ್ನು ಬೆಳಗಿಸುತ್ತಲೇ ಅವಳ ನಡವಳಿಕೆ ರೂಪುಗೊಳ್ಳುತ್ತದೆ.

ತೈಲಪ : ಹೀಗೆಲ್ಲ ಭಾವಿಸಿಕೊಂಡು ಸಮಾಧಾನ ಪಟ್ಟುಕೊಳ್ಳಬಹುದು. ಆದರೆ ತವರುಮನೆಯ ಗೀಳು ಯಾವ ಹೆಣ್ಣಿಗೂ ತಪ್ಪಿದ್ದಲ್ಲ.

ವಿಕ್ರಮಾದಿತ್ಯ : ನನ್ನ ಮಾತಿನ ಸತ್ಯ ಹೊಳೆಯಬೇಕಾದರೆ ನಿನ್ನ ಅವ್ವೆಯನ್ನು ಕೇಳು.... ಅವಳಿಗೆ ಯಾವ ಕಡೆ ಗೀಳಿತ್ತೆಂಬುದು ನಿನಗೇ ತಿಳಿಯುತ್ತದೆ.

ತೈಲಪ : ಅಪ್ಪಾಜಿ ಅವ್ವೆಯನ್ನು ಕೇಳಿ ಅವರ ಮನಸ್ಸನ್ನು ಅರಿತುಕೊಳ್ಳಬೇಕಾದ್ದಿಲ್ಲ. ನನಗೆ ಬುದ್ಧಿ ಬಂದಾಗಿನಿಂದಲೂ ಅವ್ವೆಯ ತುಡಿತ ಯಾವ ಕಡೆಗಿದೆಯೆಂದು ನಾನು ಬಲ್ಲೆ.

ವಿಕ್ರಮಾದಿತ್ಯ : ಅಲ್ಲದೆ ಮಗು ತಾಯ್ತನದ ಶಕ್ತಿ ಅವಳ ದೃಷ್ಟಿ, ಮನಸ್ಸು ಯಾವ ಕಡೆಗಿದೆಯೆಂದು ಪರೀಕ್ಷಿಸುವ ಅಗತ್ಯವೇ ಬೀಳದಂತೆ ನಡೆದುಕೊಂಡಿರುವುದೇ ಅವಳ ವ್ಯಕ್ತಿತ್ವದ ಔನ್ನತ್ಯಕ್ಕೆ ಸಾಕ್ಷಿ ಅಲ್ಲವೆ?........... ಆದ್ದರಿಂದಲೇ ರಾಷ್ಟ್ರಕೂಟ ಕರ್ಕದೇವರ ಪುತ್ರಿ ಜಯಲಕ್ಷ್ಮಿಯನ್ನು ಸೊಸೆಯಾಗಿಸಿಕೊಳ್ಳಲು ಹಾತೊರೆದದ್ದು. ಅವಳಿಗೆ ಭರವಸೆಯಿದೆ. ಸೊಸೆಯ ಅಂತರ್ಯವನ್ನು ಹೊಕ್ಕು ಮೆಟ್ಟಿದ ಮನೆಯ ಕ್ಷೇಮ ಕಾತರತೆಗೆ ಸಿದ್ಧಪಡಿಸಬಲ್ಲೆನೆಂಬ ಬಲವಾದ ವಿಶ್ವಾಸವಿದೆ.

ತೈಲಪ : ಅವಳ ಮನಃ ಪರಿವರ್ತನೆ ಆದ ಮಾತ್ರಕ್ಕೆ ಸಾಮ್ರಾಜ್ಯವನ್ನು ಗೆದ್ದು ಕೊಡಬಲ್ಲಳೇನು?

ವಿಕ್ರಮಾದಿತ್ಯ : ಮಗು ಇಂತಹ ವಿಚಾರಗಳಲ್ಲಿ ಹಿರಿಯರಾದ ನಮಗೆ ನಿನಗಿಂತ ಹೆಚ್ಚಿನ ದೂರದೃಷ್ಟಿಯಿದೆ. ಒದಗಿ ಬರುವ ಸಮಯ, ಸಂದರ್ಭಾನುಕೂಲಗಳ ಪ್ರಯೋಜನವನ್ನು ಲೆಕ್ಕಾಚಾರ ಹಾಕಿ ಇರಿಸಿದ್ದೇವೆ. ನೀನು ರಾಷ್ಟ್ರಕೂಟ ಹೆಣ್ಣನ್ನು ಮದುವೆಯಾಗುವುದರಲ್ಲಿ ಎರಡು ಪ್ರಯೋಜನಗಳಿವೆ. ಒಂದು ಅರಮನೆಯ ಅಳಿಯನೆಂಬ ಗೌರವ ಪಡೆಯುವುದರಿಂದ ಉಳಿದ ಸಾಮಂತರಿಗಿಂತ ಹೆಚ್ಚಿನ ಸ್ವಾತಂತ್ರ್ಯ ಸಿಗುತ್ತದೆ. ಈಗ ಕರ್ಕ ಮಹಾರಾಜರು ಏರಬಹುದಾಗಿರುವ

ರಾಷ್ಟ್ರಕೂಟ ಸಿಂಹಾಸನಕ್ಕಾಗಿ ಅವರ ವಾವೆಯ ಸೋದರ ಗೋವಿಂದನ ಮಗ ಇಂದ್ರ ತನ್ನದಾಗಿಸಿಕೊಳ್ಳಲು ಹೊಂಚುತ್ತಿದ್ದಾನೆ. ಇದರಿಂದ ಅವರಲ್ಲಿಯೇ ಒಳ ಕದನದ ಬೀಜಾಂಕುರವಾಗಿದೆ. ಈ ಎರಡೂ ಕಾರಣಗಳು ನಿನ್ನ ಆಸೆಗೆ ಇಂಬು ದೊರಕಿಸಿಕೊಡುತ್ತವೆ.

**ತೈಲಪ** : (ಸಂತೋಷದಿಂದ) ಅಂದರೆ ಇನ್ನು ಮುಂದೆ ನಮ್ಮ ರಾಜ್ಯ ನಮ್ಮದಾಗುತ್ತದೆ, ಎಂದಲ್ಲವೇ?

**ವಿಕ್ರಮಾದಿತ್ಯ** : ಈಗಲೇ ಇಷ್ಟೊಂದು ಅತ್ಯುತ್ಸಾಹ ಬೇಡ. ಕಳೆದುಕೊಂಡದ್ದನ್ನು ಪಡೆದುಕೊಳ್ಳಲು ಒಂದು ಹದ ನಿರ್ಮಾಣವಾಗುವ ಸಾಧ್ಯತೆಗಳು ಕಾಣುತ್ತಿವೆ ಎಂಬುದಷ್ಟೇ ನಮ್ಮ ವಿಚಾರ. ಮುಂದೆ ಮುಂದೆ ನಿನಗೇ ಕ್ರಮೇಣ ಎಲ್ಲವೂ ಮನದಟ್ಟಾಗುತ್ತದೆ. ಆದರೆ ಮಗು ನಮ್ಮ ಮನಸ್ಸಿನ ಕವಾಟಗಳು ಮಾತ್ರ ಬಿಗಿದುಕೊಂಡಿರಬೇಕೆಂಬುದನ್ನು ಮಾತ್ರ ಸದ್ಯಕ್ಕೆ ಮರೆಯಬೇಡ.

**ತೈಲಪ** : ಆಯಿತು ಅಪ್ಪಾಜಿ.

**ವಿಕ್ರಮಾದಿತ್ಯ** : ಈಗ ನನ್ನ ಮತ್ತು ನಿನ್ನ ತಾಯಿಯ ಆಸೆಗಳನ್ನು ಒಪ್ಪಿಕೊಂಡಿರುವೆಯೆಂದು ಭಾವಿಸಬಹುದಲ್ಲವೇ?

**ತೈಲಪ** : (ಮೌನ)

**ವಿಕ್ರಮಾದಿತ್ಯ** : ಏಕೆ ಮಗು ಉತ್ತರಿಸುತ್ತಿಲ್ಲ..... ಹೇಳು ಹುಡುಗಿ ನಿನಗೆ ಒಪ್ಪಿಗೆಯಿಲ್ಲವೆ?

**ತೈಲಪ** : ಹುಡುಗಿಯನ್ನು ನಾನು ನೋಡಿದ್ದರಲ್ಲವೇ?

**ಬೊಂತಾದೇವಿ** : ಮಗೂ ಹಾಗಾದರೆ ನೋಡಿಯೇ ಒಪ್ಪಿಕೊಳ್ಳುವೆಯೇನು?...........ನಾನೂ ನಿಮ್ಮ ತಂದೆಯವರು ಪರಸ್ಪರ ನೋಡಿಕೊಂಡದ್ದು ಮದುವೆ ಮಂಟಪದಲ್ಲಿಯೇ?

**ತೈಲಪ** : ಅವ್ವ, ನೀವು ಒಪ್ಪಿದರೆ ಮುಗಿಯಿತು. ನಿಮ್ಮಿಷ್ಟವೇ ನನ್ನ ಇಷ್ಟ.

(ಊಳಿಗದ ಹೆಣ್ಣು ಚಂದಲೆಯ ಪ್ರವೇಶ)

**ಚಂದಲೆ** : ಪ್ರಭುಗಳು, ಮಾತೆಯವರು ಮನ್ನಿಸಬೇಕು.

(ಹೇಳುತ್ತ ಪ್ರವೇಶ)

**ಬೊಂತಾದೇವಿ** : ಬಾ ಚಂದಲೆ. ಏನು ವಿಷಯ?

**ಚಂದಲೆ** : ತಾಯಿ, ಸೇವುಣ ದೊರೆಗಳು ಪ್ರಭುಗಳನ್ನು ಕಾಣಲು ಬಂದಿರುವರಂತೆ.

ವಿಕ್ರಮಾದಿತ್ಯ : ಅವರನ್ನು ಗೌರವದಿಂದ ಬರಮಾಡಿಕೊಂಡು ಸತ್ಕರಿಸಬೇಕೆಂದು ಮಂತ್ರಿಗಳವರಿಗೆ ತಿಳಿಸು. ನಾನು ಕೆಲವೇ ಕ್ಷಣಗಳಲ್ಲಿ ಬರುತ್ತೇನೆಂದು ತಿಳಿಸು.

ಚಂದಲೆ : ಅಪ್ಪಣೆ ಪ್ರಭು.

ವಿಕ್ರಮಾದಿತ್ಯ : ಜೊಂತಾ ನಾನಿನ್ನು ಹೊರಡುತ್ತೇನೆ. ಏನು ರಾಜಕಾರ್ಯವಿದೆಯೋ ಹೋಗಿ ಮಾತನಾಡಿಸುತ್ತೇನೆ. ತಾಯಿ ಮಕ್ಕಳು ನಿಮ್ಮಿಬ್ಬರ ಏಕಾಂತಕ್ಕೆ ಭಂಗ ಬರದಿರಲಿ (ನಗುವನು).

– – ವಿರಾಮ – –

ತೈಲಪ : ಅವ್ವೆ!

ಜೊಂತಾದೇವಿ : ಏನು ಮಗು? ಮತ್ತೇನಾದರೂ ಸಂಶಯ ಕಾಡುತ್ತಿದೆಯೇನು?

ತೈಲಪ : (ಅನುಮಾನದಿಂದ) ನೀವಂದುಕೊಂಡಂತೆ ಈ ಲಗ್ನದ ಮೂಲಕ ನಿಜವಾಗಿಯೂ ನಮಗೆ ಒಳಿತಾಗುವುದೇ!

ಜೊಂತಾದೇವಿ : ಮಗು, ನಾವು ಕೇವಲ ಮನುಷ್ಯರು ಆಲೋಚನೆಗಳು ಮತ್ತು ಪ್ರಯತ್ನಗಳಷ್ಟೆ ನಮ್ಮದು. ಭವಿಷ್ಯವಾಗಲೀ, ಪರಿಣಾಮಗಳಾಗಲೀ, ನಮ್ಮ ಕೈಯಲ್ಲಿ ಇಲ್ಲ. ಇದು ಸತ್ಯ. ಆದರೂ ನಾವು ಕೈ ಚೆಲ್ಲಿ ಕುಳಿತುಕೊಳ್ಳುವುದಕ್ಕಿಂತ ನಮ್ಮ ರೀತಿಯಿಂದ ಗುರಿಯ ಬೆನ್ನೇರಿ ಹೋಗುವುದು ಒಳಿತಲ್ಲವೇ?

ತೈಲಪ : ಹೌದು ಅವ್ವೆ, ನೀವು ಹೇಳುವುದು ಸರಿ.

ಜೊಂತಾದೇವಿ : ಮಗು ತಂದೆಯವರನ್ನು ನೀನೂ ಗಮನಿಸುತ್ತಿರಬೇಕು. ಅವರ ಮನಸ್ಸಿನಲ್ಲಿ ದುಗುಡದ ಅಗ್ನಿಜ್ವಾಲೆಯೇ ಉರಿಯುತ್ತಿದೆ. ತಮ್ಮ ತಂದೆಯವರಿಗೆ ಕೊಟ್ಟ ಮಾತನ್ನು ನಡೆಸಿಕೊಡಲು ಆಗಲಿಲ್ಲವೆಂಬ ವೇದನೆ ಅವರೆದೆಯನ್ನು ಹಿಂಡುತ್ತಿದ್ದರೂ ಅದನ್ನು ತೋರಿಸಿಕೊಳ್ಳದೆ ನಗುಪಿನ ಮುಖವಾಡ ಏರಿಸಿಕೊಂಡು ಕಾಣಿಸಿಕೊಳ್ಳುತ್ತಿದ್ದಾರೆ.

ತೈಲಪ : ಅಪ್ಪಾಜಿಯವರ ಯೋಚನೆ, ಗುರಿಗಳೆಲ್ಲವೂ ಹಾಗಾದರೆ ಸಾಮ್ರಾಜ್ಯ, ಸ್ವಾತಂತ್ರ್ಯ, ಸಾರ್ವಭೌಮತ್ವದ ಕಡೆಗೇ ಎಂದಾಯಿತು.

ಜೊಂತಾದೇವಿ : ನನ್ನನ್ನು ಅವರು ವರಿಸಿದ್ದೂ ಕೂಡಾ ತಮ್ಮ ಬಲ ಸಂವರ್ಧನೆಗೆಂದೇ.

ತೈಲಪ : ಮತ್ತೇಕೆ ಸಾಧಿಸಲಾಗಲಿಲ್ಲ?

ಜೊಂತಾದೇವಿ : ನಿಜವಾದ ಕಾರಣವನ್ನು ಅವರೇ ಬಲ್ಲರು. ಒಳಗೆಲ್ಲೋ ಹಳಿ ತಪ್ಪಿದೆ. ದ್ರೋಹ ನಡೆದಿದೆ. ಅಲ್ಲದೆ ರಾಷ್ಟ್ರಕೂಟ ದೊರೆ ಕನ್ನರದೇವ ಕೃಷ್ಣರು

ಮಹಾ ಬಲಶಾಲಿಗಳು, ಪ್ರಜಾನುರಾಗಿಗಳು, ಏಳೂವರೆ ಲಕ್ಷ ಗ್ರಾಮಗಳನ್ನೊಳಗೊಂಡ ನಾಡಿನಲ್ಲಿ ಅವರಿಗೆ ವಿಶೇಷ ಗೌರವವಿತ್ತು. ಪ್ರಜೆಗಳು ಅವರನ್ನು ಆರಾಧಿಸುತ್ತಿದ್ದರು. ಒಟ್ಟಿನಲ್ಲಿ ಅವರು ಆದರ್ಶ ಪ್ರಭುಗಳಾಗಿದ್ದರು. ಆದರೆ ಅವರು ತೀರಿಕೊಂಡ ಮೇಲೆ ಕತೆಯೇ ಬೇರೆಯಾಯಿತು. (ನಿಟ್ಟುಸಿರು)

**ತೈಲಪ** : ಯಾಕೆ? ಆಗಿನ ಸ್ಥಿತಿ ಈಗಿಲ್ಲವೇನು?

**ಬೊಂತಾದೇವಿ** : ಏನನ್ನೇ ಆಗಲಿ ಸಂಪಾದಿಸುವುದು ಬಹಳ ಕಷ್ಟ. ಅದನ್ನು ಉಳಿಸಿಕೊಳ್ಳುವುದು ಇನ್ನೂ ಕಷ್ಟ ಮಗು. ಕನ್ನರದೇವರು ಸಂಪಾದಿಸಿದ್ದೆಲ್ಲವೂ ಅತ್ಯಲ್ಪ ಕಾಲದಲ್ಲಿ ಹಾಳಾಗಿ ಹೋಯಿತು. ಅವರ ತಮ್ಮ ಖೊಟ್ಟಿಗ ದೇವರ ಆಡಳಿತ ಅರಾಜಕವಾಯಿತು. ಪ್ರಜೆ. ಪ್ರಭುಗಳ ಸಂಬಂಧವೇ ಶಿಥಿಲಗೊಂಡಿತು. ಪ್ರಜೆಗಳು ಒಳಗೊಳಗೇ ಅಸಮಾಧಾನಗೊಂಡಿದ್ದಾರೆ. ಈ ಪರಿಸ್ಥಿತಿ ಕರ್ಕದೇವರ ಎದೆಯೊಳಗೆ ಸಿಂಹಾಸನವೇರುವ ಆಸೆ ಮೊಳೆಸಿದೆ.

**ತೈಲಪ** : ಅದರಿಂದ ಅವರಿಗೆ ಲಾಭವೇ ಹೊರತು ನಮಗೆ ಬಂದುದೇನು?

**ಬೊಂತಾದೇವಿ** : ನಾವು ಕರ್ಕದೇವರಿಗೆ ನೆರವು ನೀಡಿ ಮೊದಲಿಗೆ ಸಿಂಹಾಸನವೇರಿಸುವುದು. ನಂತರ ಮುಂದಿನದು. ಅವರು ನಮ್ಮ ಬಗ್ಗೆ ಕೃತಜ್ಞರಾಗಿರುತ್ತಾರೆ. ಹಾಗೆಯೇ ಹಿಡಿತದಲ್ಲಿಯೂ ಇರುತ್ತಾರೆ. ನಿನ್ನ ಲಗ್ನವೇ ಇದೆಲ್ಲಕ್ಕೂ ನಾಂದಿಯಾಗುತ್ತದೆ.

**ತೈಲಪ** : ಲಗ್ನಕ್ಕೂ ರಾಜಕೀಯಕ್ಕೂ ಗಂಟು ಹಾಕುವುದು ಸರಿಯಲ್ಲವೇನೊ! ಪತಿ ಪತ್ನಿಯರ ನಡುವಿನ ಸೌಹಾರ್ದ ಆತ್ಮೀಯತೆಗಳು ರಾಜಕೀಯ ಪ್ರವೇಶದೊಂದಿಗೆ ಹದಗೆಡಬಹುದಲ್ಲವೇ?

**ಬೊಂತಾದೇವಿ** : ನಮ್ಮ ಮದುವೆಯ ಹಿನ್ನಲೆಯಲ್ಲೂ ರಾಜಕೀಯ ಉದ್ದೇಶವೇ ಇತ್ತು. ಆದರೂ ನಾವಿಬ್ಬರೂ ಅನ್ಯೋನ್ಯವಾಗಿ ಬಾಳ್ವೆ ಮಾಡುತ್ತಿಲ್ಲವೇ? ಒಗೆತನವು ಫಲಿಪ್ರದವಾಗಲಿಲ್ಲವೇ? ಅನೋನ್ಯತೆ, ಒಗೆತನಗಳು ಒಡಕಿಲ್ಲದೆ ಸಾಗುವಲ್ಲಿ ಹೆಂಗಸಿನ ಪಾತ್ರ ಬಹಳ ಮಹತ್ವದ್ದು. ಅದರ ಚಿಂತೆ ನನಗೆ ಬಿಡು. ನನ್ನ ಸೊಸೆಯನ್ನು ಹೇಗೆ ನಡೆಸಿಕೊಳ್ಳಬೇಕು; ಹೇಗೆ ರೂಪಿಸಬೇಕು ಎಂಬುದನ್ನು ನನಗೆ ಬಿಟ್ಟು ನಿಶ್ಚಿಂತೆಯಿಂದ ಇರು. ಮದುವೆಯಾದ ಎರಡು ಮೂರು ವರ್ಷಗಳಲ್ಲಿ ಮಾನ್ಯಖೇಟದಲ್ಲಿರುವ ಚಾಲುಕ್ಯ ಸಿಂಹಾಸನವನ್ನು ಮತ್ತೆ ನಮ್ಮದಾಗಿಸಿಕೊಳ್ಳುವುದು ಹೇಗೆಂಬುದರ ಕಡೆ ಗಮನವಿರಲಿ. ನಿನ್ನ

ತಂದೆಯವರು ಆಗಾಗ ನಿನಗೆ ವಿಷಯವನ್ನು ಮನದಟ್ಟು ಮಾಡುವರು. ನೀನು ಮಾತ್ರ ಯಾವುದನ್ನು ಹಚ್ಚಿಕೊಳ್ಳದೇ ಕರವಾಳ ಶಿಕ್ಷಣವನ್ನು ನನ್ನ ತಮ್ಮ ಅಮ್ಮಗಿಯಿಂದ ಪಡೆದು ಕರವಾಳ ಚತುರನೆಂದು ಹೆಸರು ಗಳಿಸಿಕೊಳ್ಳಬೇಕು.

**ತೈಲಪ** : ಅವ್ವೆ, ಹೆಣ್ಣಾಗಿಯೂ ನೀವು ಎಷ್ಟೆಲ್ಲ ವಿಷಯಗಳನ್ನು ರಾಜಕೀಯ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡಿದ್ದೀರಿ. ನಿಮ್ಮ ರಾಜಕೀಯ ಪರಿಜ್ಞಾನವನ್ನು ಕಂಡು ನಿಜಕ್ಕೂ ನನಗೆ ಅಚ್ಚರಿ ಎನಿಸಿದೆ.

**ಬೊಂತಾದೇವಿ** : ನಾನು ಕರವಾಳ ಚತುರ ವಂಶದಲ್ಲಿ ಜನಿಸಿದ್ದರೂ ಕರವಾಳ ಹಿಡಿದು ಯಾವ ಯುದ್ಧದಲ್ಲಿಯೂ ಭಾಗವಹಿಸಿಲ್ಲ. ಆದರೆ ನಿನ್ನ ತಂದೆಯವರಿಂದ ಹಲವಾರು ರಾಜಕೀಯ ಪಾಠಗಳನ್ನು ಕಲಿತು ಪರಿಣತಳಾಗಿದ್ದೇನೆ. ನಿನ್ನ ತಂದೆಯವರು ಯಾವುದನ್ನೂ ನನ್ನಿಂದ ಮರೆ ಮಾಚುವುದಿಲ್ಲ. ನನ್ನ ರಾಜಕೀಯ ಪ್ರಜ್ಞೆಯ ವಿಕಾಸದ ಶ್ರೇಯಸ್ಸು ಅವರಿಗೇ ಸಲ್ಲಬೇಕು. ನಾವಿಬ್ಬರೂ ದೇಹವೆರಡು ಆತ್ಮವೊಂದೇ ಎಂಬಂತೆ ಬಾಳಿದೆವು. ನಿಮ್ಮಿಬ್ಬರ ಬದುಕೂ ಹಾಗೆಂಯೇ ಇರಬೇಕೆಂಬುದು ನಮ್ಮ ಅಭಿಲಾಷೆ.

**ತೈಲಪ** : ಅಧಿಕಾರ, ಅಂತಸ್ತುಗಳಿಗಾಗಿ ಮಾಡಿಕೊಳ್ಳುವ ಮದುವೆಯಿಂದ ಆದರ್ಶ ದಾಂಪತ್ಯ ಸಾಧ್ಯವೇ ಅವ್ವೆ?

**ಬೊಂತಾದೇವಿ** : ಅಧಿಕಾರ, ಅಂತಸ್ತುಗಳ ಆಸೆ ಯಾರಿಗಿಲ್ಲ ಹೇಳು? ಎಲ್ಲರಿಗೂ ಅವುಗಳ ಆಸೆ ಇದ್ದರೂ ಅದು ದಕ್ಕುವುದು ಬಿಡುವುದು ದೇವರಿಗೆ ಬಿಟ್ಟದ್ದು. ಆದರೆ ಇಂತಹ ಆಸೆ ನಿರಾಸೆಗಳ ನಡುವೆಯೂ ದಾಂಪತ್ಯದಲ್ಲಿ ಅನ್ಯೋನ್ಯತೆಯನ್ನು ಸಾಧಿಸಿಕೊಳ್ಳಬಹುದು. ಮನಸ್ಸು ಮಾಡಿದರೆ ಮಾತ್ರ!......ನಿನ್ನ ತಂದೆಯವರನ್ನು ಈ ಕುರಿತು ವಿಚಾರಿಸು............ನಿನ್ನ ತಾತನವರ ಜೀವನವೇ ನನ್ನ ಮಾತಿಗೆ ಸಾಕ್ಷಿಯಾಗಿತ್ತು ಎಂದು ತಿಳಿಯುತ್ತದೆ.

**ತೈಲಪ** : ಏನು ನನ್ನ ತಾತನವರ ಜೀವನವೇ? ಅದು ಹೇಗೆ ಅವ್ವೆ? ನನಗೂ ಸ್ವಲ್ಪ ತಿಳಿಸಿ. ನಮ್ಮ ನಮ್ಮ ಬದುಕುಗಳನ್ನು ಅಂತಹ ಹಿರಿಯ ಚೇತನರ ಮಾದರಿಗಳಲ್ಲಿಯೇ ರೂಪಿಸಿಕೊಳ್ಳಬೇಕಲ್ಲವೇ?

**ಬೊಂತಾದೇವಿ** : ಖಂಡಿತವಾಗಿಯೂ............ನಿನ್ನ ಹಾಗೂ ನಮ್ಮ ಈಗಿನ ಆಸೆಯಂತೆ ನಿನ್ನ ತಾತನವರಿಗೂ ಇತ್ತು. ಪರಮ ಭಟ್ಟಾರಕ, ಶ್ರೀ ಪೃಥ್ವೀ ವಲ್ಲಭ, ಮಹಾರಾಜಾಧಿರಾಜ ಮೊದಲಾದ ಬಿರುದಾವಳಿಗಳಿಂದ ಖ್ಯಾತವಾಗಿದ್ದ ತಮ್ಮ ಚಾಲುಕ್ಯ ವಂಶೀಯರಂತೆ ಸ್ವತಂತ್ರರಾಗಿ ಹಿಂದಿನ

ಸಾಮ್ರಾಜ್ಯವನ್ನು ಗಳಿಸಿ ಆಳಬೇಕೆಂಬ ಗುರಿಯಿಂದಲೇ ಅವರು ಅವರ ಕಾಲದಲ್ಲಿ ಈ ಸಿಂಹಾಸನದ ಮೇಲೆ ಇದ್ದ ರಾಷ್ಟ್ರಕೂಟ ಶುಭತುಂಗ ಕೃಷ್ಣನ ಕಡೆ ಮಗಳು ಕೃಷ್ಣನಂದನೆಯನ್ನು ಲಗ್ನವಾಗಿದ್ದರು. ಆದರೆ ಅದೃಷ್ಟ ಒದಗಿ ಬರಲಿಲ್ಲ. ಸಿಂಹಾಸನವನ್ನು ಸೆಳೆದುಕೊಳ್ಳಲು ಆಗಲಿಲ್ಲವಾದರೂ ಸಂಸಾರ ಸುಖದಲ್ಲಿ ಎಷ್ಟು ಸಂತೃಪ್ತರಾಗಿದ್ದರು. ಗೊತ್ತಾ ಮಗು!

**ತೈಲಪ** : ಯಾಕೆ ಸಾಧ್ಯವಾಗಲಿಲ್ಲ?

**ಬೊಂತಾದೇವಿ** : ಹುಂ! (ನಿಟ್ಟುಸಿರು) ನಿರೀಕ್ಷಿಸಿದ್ದ ನೆರವು ಸಕಾಲದಲ್ಲಿ ಒದಗಿ ಬರಲಿಲ್ಲ. ಆದುದರಿಂದಲೇ ನಿನ್ನ ತಂದೆ ಮೊದಲು ಬಲಸಂವರ್ಧನೆಯ ಕಾರ್ಯದಲ್ಲಿ ನಿರತರಾಗಿದ್ದಾರೆ. ಅವರ ಒಳಮರ್ಮ ಇನ್ನೂ ಯಾರಿಗೂ ಬಹಿರಂಗವಾಗಿಲ್ಲ. ಎರಡು ಶತಮಾನಗಳಿಗೂ ಮೀರಿ ಸಾಮಂತರಾಗಿ ಬಾಳುತ್ತಿರುವ ನಾವು ಆದಷ್ಟು ಬೇಗನೆ ಚಕ್ರೇಶ್ವರರಾಗಿ ಮೆರೆದು ನಮ್ಮ ವೈಭವದ ದಿನಗಳನ್ನು ಮರಳಿ ಪಡೆಯಲೇ ಬೇಕು.

**ತೈಲಪ** : ಅವ್ವ. ನಿಮ್ಮ ಛಲ. ನಿಮ್ಮ ಆದರ್ಶ ನಿಮ್ಮ ಸಾಮರ್ಥ್ಯಗಳೇ ನನಗೆ ದಾರಿದೀಪವಾಗಲೀ, ನಿಮ್ಮ ಪಾದದಾಣೆಗೂ ಹೇಳುತ್ತಿದ್ದೇನೆ. ಈ ಚಾಲುಕ್ಯ ಸಿಂಹಾಸನ ನಮ್ಮದಾಗುವವರೆಗೂ ಹೋರಾಡುತ್ತೇನೆ. ನಿಮ್ಮಿಬ್ಬರ ಕನಸುಗಳನ್ನು ದೈವಸಾಕ್ಷಿಯಾಗಿ ಸಾಕಾರಗೊಳಿಸುತ್ತೇನೆ. ನನ್ನ ಮಾತನ್ನು ನಂಬಿ. ಪೂಜ್ಯ ತಂದೆಯವರ ಆದೇಶವೇ ನನ್ನನ್ನು ಸರಿಹಾದಿಯಲ್ಲಿ ನಡೆಸುತ್ತದೆ.

**ಬೊಂತಾದೇವಿ** : (ಸಂತೋಷದಿಂದ) ನಿನ್ನಂತಹ ವೀರ, ಪರಾಕ್ರಮಿ ಪುತ್ರನನ್ನು ಪಡೆದ ನಾನೇ ಧನ್ಯಳು. ನಿನ್ನ ಮಾತುಗಳನ್ನು ಕೇಳುತ್ತಿದ್ದರೆ ಹೃದಯ ತುಂಬಿ ಬರುತ್ತಿದೆ. .......... ಆಯಿತು. ಮುಂದೇನೆಂಬುದನ್ನು ನಿನ್ನ ತಂದೆಯವರೇ ತಿಳಿಸುತ್ತಾರೆ. ಆದಷ್ಟು ಬೇಗ ಲಗ್ನದ ವ್ಯವಸ್ಥೆಯಾಗಲಿ. ಹೋರಾಟದ ರೀತಿ, ಅನುಕೂಲ ಸಮಯಗಳು ಖಚಿತವಾಗುವವರೆಗೆ ನೀನು ರಾಷ್ಟ್ರಕೂಟ ಸಾಮಂತ ಚಾಲುಕ್ಯ ರಾಜ್ಯದ ವಿನಯಶಾಲಿ ಮಗನೆಂದಷ್ಟೇ ತೋರಿಸಿಕೊಳ್ಳಬೇಕು. ತಿಳಿಯಿತೇ ಮಗು?

**ತೈಲಪ** : ತಿಳಿಯಿತು ಅವ್ವ. ಈಗ ನನಗೇನಪ್ಪಣೆ? ತಂದೆಯವರು ಬರುವವರೆಗೆ ಕಾಯಬೇಕೆ ಹೇಗೆ?

**ಬೊಂತಾದೇವಿ** : ಬೇಡ, ನೀನು ಹೋಗಬಹುದು. ಈಗ ನಿನ್ನ ಲಗ್ನದ ವಿಚಾರವಂತೂ ಖಚಿತವಾಯಿತಲ್ಲ. ಮುಂದಿನ ಕಾರ್ಯಗಳ ಬಗೆಗೆ ನಿನ್ನ ತಂದೆಯವರು ನಿನಗೆ ಸೂಚನೆಗಳನ್ನು ನೀಡುತ್ತಿರುತ್ತಾರೆ.

(ತೈಲಪ ಹೋಗುತ್ತಾನೆ. ವಿಕ್ರಮಾದಿತ್ಯರು ಒಳ ಬರುತ್ತಾರೆ)

**ವಿಕ್ರಮಾದಿತ್ಯ** : (ಪ್ರವೇಶಿಸುತ್ತಾ) ತಾಯಿ ಮಕ್ಕಳ ಮಂತ್ರಾಲೋಚನೆಗೆ ಭಂಗ ಬರಲಿಲ್ಲ ತಾನೇ ದೇವಿ? ನಿಮ್ಮ ಅಪ್ಪಣೆ ಇಲ್ಲದೆ ಪ್ರವೇಶ ಮಾಡಿ ಬಿಟ್ಟೆವು. ಕ್ಷಮೆಯಿರಲಿ.

**ಬೊಂತಾದೇವಿ** : (ನಗುತ್ತಾ) ಸಾಕು ಸುಮ್ಮನಿರಿ ಪ್ರಭು. ನಿಮಗೆ ತಿಳಿಯದಂತೆ ನಮ್ಮೊಳಗೆ ಏನು ರಹಸ್ಯಗಳಿರಲು ಸಾಧ್ಯ........ನೀವು ಆದೇಶಿಸಿದ್ದಂತೆ ನಾನು ನಮ್ಮ ಮಗನಿಗೆ ಎಲ್ಲವನ್ನು ವಿಶದವಾಗಿ ವಿವರಿಸಿ ತಿಳಿಸಿದ್ದೇನೆ. ಅವನೊಳಗೂ ಛಲದ ಬೆಂಕಿಯನ್ನು ಹೊತ್ತಿಸಿದ್ದೇನೆ. ಅದು ಖಂಡಿತವಾಗಿ ಭುಗಿಲೆದ್ದು, ನಮ್ಮ ಗುರಿಯನ್ನು ಸಾಧಿಸಿಯೇ ಸಾಧಿಸುತ್ತಾನೆಂದು ನನಗೆ ನಂಬಿಕೆಯುಂಟಾಗಿದೆ.

**ವಿಕ್ರಮಾದಿತ್ಯ** : ದೇವಿ ನಿನ್ನ ಜಾಣ್ಮೆಯನ್ನು ಅರಿಯದವನೇನು? ನನಗಿಂತಲೂ ಸಮರ್ಥವಾಗಿ ನಿರ್ವಹಿಸಬಲ್ಲರೆಂದೇ ಅಲ್ಲವೆ, ಈ ಕೆಲಸ ಒಪ್ಪಿಸಿದ್ದು!

**ಬೊಂತಾದೇವಿ** : ತುಂಬಾ ಹೊಗಳಬೇಡಿ ಪ್ರಭು. ನನ್ನ ತಲೆ ತಿರುಗಿ ಹೋದೀತು.

**ವಿಕ್ರಮಾದಿತ್ಯ** : ನನಗೆ ಸಾಧ್ಯವಿದ್ದರೆ ನಿನ್ನನ್ನೇ ಗದ್ದುಗೆಯ ಮೇಲೆ ಕೂರಿಸಿಬಿಡುತ್ತಿದ್ದೆ.

**ಬೊಂತಾದೇವಿ** : ಈಗ ಸಾಕು ಮಾಡಿ ನಿಮ್ಮ ಕೀಟಲೆ........ ನಮ್ಮ ಮಗನಿಗೆ ಹೇಳಬೇಕಾದ್ದನ್ನೆಲ್ಲ ಹೇಳಿ ಎಚ್ಚರಿಕೆಯಿಂದ ವರ್ತಿಸಬೇಕೆಂದು ಸೂಚಿಸಿದ್ದೇನೆ......... ಅದಿರಲಿ ಸೇವುಣ ದೊರೆಗಳನ್ನು ಕಾಣಲು ಹೋಗಿದ್ದೀರಲ್ಲ. ಏನಾಯಿತು?

**ವಿಕ್ರಮಾದಿತ್ಯ** : ಎಲ್ಲವೂ ಫಲಪ್ರದವಾಗುತ್ತಿದೆ ದೇವಿ. ನಮ್ಮ ಗುರಿ ಮುಟ್ಟಲು ಸೇವುಣರ ನೆರವು ನಮಗೆ ಲಭ್ಯವಾಗುವುದು ಖಂಡಿತವಾಯಿತು. ಕುಮಾರನ ಲಗ್ನದ ವಿಚಾರದಲ್ಲಿ ಅವರದೂ ಸಹಮತಿ ಇದೆ. ಲಗ್ನವನ್ನು ಆದಷ್ಟು ಬೇಗ ಮುಗಿಸಿದರೆ ರಾಷ್ಟ್ರಕೂಟ ಖೊಟ್ಟಿಗರ ಪದಚ್ಯುತಿಯ ವಿಚಾರ ಆಲೋಚಿಸೋಣವೆಂದೂ ಹೇಳಿದ್ದಾರೆ.

**ಬೊಂತಾದೇವಿ** : ಹೌದು ನಾನೂ ಅದನ್ನೇ ನಮ್ಮ ಮಗನಿಗೆ ಹೇಳಿದೆ. ಎಲ್ಲವೂ ಸಾಂಗವಾಗಿ ನೆರವೇರುವವರೆಗೆ ನಮ್ಮ ಅವರ ಸಂಬಂಧ ಸಂಪರ್ಕಗಳಲ್ಲಿ ಯಾವುದೇ ಬಗೆಯ ವ್ಯತ್ಯಾಸಗಳು ಕಾಣಿಸಿಕೊಳ್ಳದ ರೀತಿಯಲ್ಲಿ ಇರಬೇಕು.

**ವಿಕ್ರಮಾದಿತ್ಯ** : ನೀನು ಹೇಳುವ ಮಾತು ಸಾಧುವಾದುದೆ. ನಾನು ಇಲ್ಲಿಂದ ಹೋದ ಮೇಲೆ ತೈಲಪಕುಮಾರರು ಮತ್ತೇನನ್ನಾದರೂ ಹೇಳಿಕೊಂಡರೇನು?

ಬೊಂತಾದೇವಿ : ಹೇಳಿಕೊಳ್ಳಲು ಏನಿದೆ ಪ್ರಭು? ಅವನ ಮನಸ್ಸಿನಲ್ಲಿಯೂ ದಾಸ್ಯದ ಮುಳ್ಳು ಕುಟುಕಾಡಿದೆ. ತುಂಬ ಕಸಿಪಿಸಿಯಿಂದಲೇ ಇದ್ದರು. ನಾನು ಅವನಿಗೆ ಎಲ್ಲವನ್ನೂ ವಿವರಿಸಿ ಪರಿಸ್ಥಿತಿಯನ್ನು ಮನದಟ್ಟು ಮಾಡಿಕೊಟ್ಟಿದ್ದೇನೆ. ನಡವಳಿಕೆಯಲ್ಲಿ ಮಾತ್ರ ಎಚ್ಚರ ತಪ್ಪದಂತೆ ವರ್ತಿಸಬೇಕೆಂದಿದ್ದೇನೆ.

ವಿಕ್ರಮಾದಿತ್ಯ : ಲಗ್ನಕ್ಕೆ ಒಪ್ಪಿದನೇನು?

ಬೊಂತಾದೇವಿ : ಒಪ್ಪಿಕೊಳ್ಳುವುದರಲ್ಲಿ ಕ್ಷೇಮವಿದೆಯೆಂದು ಮನಗಾಣಿಸಿದ್ದೇನೆ. ಈಗ ಅವನಲ್ಲಿ ಶಂಕೆಗಳಿವೆ, ಅವಕಾಶವಿಲ್ಲ.

ವಿಕ್ರಮಾದಿತ್ಯ : ನನ್ನ ಎದೆಯ ಭಾರವನ್ನು ಇಳಿಸಿಬಿಟ್ಟೆ ಬೊಂತಾ!...........ನಾಳೆಯೇ ಹೊರಟು ಕರ್ಕದೇವರನ್ನು, ಖೊಟ್ಟಿಗರನ್ನು ಕಂಡು ಲಗ್ನದ ವಿಚಾರವಾಗಿ ಎಲ್ಲವನ್ನು ಮಾತನಾಡಿ ಬರುತ್ತೇನೆ. ನಂತರ ಮುಂದಿನದನ್ನು ಆಲೋಚಿಸೋಣ.

ಬೊಂತಾದೇವಿ : ಮಾತುಕತೆಗೆ ನೀವು ಒಬ್ಬರೇ ಹೋಗುವಿರೇನು?

ವಿಕ್ರಮಾದಿತ್ಯ : ಹೌದು. ಈಗ ಯಾರ ಅಗತ್ಯವೂ ಇರುವುದಿಲ್ಲ, ಕರ್ಕದೇವರೇ ಹೆಣ್ಣನ್ನು ಕೊಡಲು ಮುಂದಾದಾಗ, ನಿನ್ನ ತಂದೆ ಹಾಗೂ ಸೋದರನೊಂದಿಗೆ ಸೇರಿ ಚರ್ಚಿಸಿದ ನಂತರವೇ ಒಪ್ಪಿಗೆ ಕೊಟ್ಟದ್ದು. ನಿನ್ನ ಮಗನ ಒಪ್ಪಿಗೆಯನ್ನು ತಿಳಿಸಿ ಮುಂದಿನ ವ್ಯವಸ್ಥೆಯ ಬಗ್ಗೆ ಮಾತನಾಡಿ ಬರುವುದಷ್ಟೇ ಈಗ ಉಳಿದಿರುವ ಕೆಲಸ. ಅದನ್ನು ನಾನೊಬ್ಬನೇ ಮಾಡಿಕೊಂಡು ಬರಬಲ್ಲೆ.

ಬೊಂತಾದೇವಿ : ಆಯಿತು ಪ್ರಭು. ಹಿಂದು ಮುಂದುಗಳನ್ನೆಲ್ಲ ಬಲ್ಲ ನಿಮ್ಮ ಬಗ್ಗೆ ನನಗೆ ಯಾವ ಆತಂಕವೂ ಇಲ್ಲ.

ವಿಕ್ರಮಾದಿತ್ಯ : ಆತಂಕದ ಪ್ರಶ್ನೆಯಿಲ್ಲ. ನಾವು ಸಮಯವನ್ನು ವ್ಯರ್ಥ ಮಾಡಬಾರದು. ಸದ್ಯದ ಪರಿಸ್ಥಿತಿಯಲ್ಲಿ ಒಂದೊಂದು ಕ್ಷಣವೂ ನಮಗೆ ಅಮೂಲ್ಯ. ನಾವೀಗ ವಿಭವ ಸಂವತ್ಸರದ ಮಾಘ ಮಾಸದಲ್ಲಿದ್ದೇವೆ. ಈ ವಿಭವದಲ್ಲೇ ಲಗ್ನ ಮುಗಿದರೆ ಒಳ್ಳೆಯದು. ಏನಾದರೂ ಅಡಚಣೆಗಳಿದ್ದರೆ, ಶುಕ್ಲ ಸಂವತ್ಸರದ ವಸಂತ ಋತುವಿನಲ್ಲಿ ಮೂಡಿಸುವಂತೆ ಹೇಳುತ್ತೇನೆ. ನಾಳೆಯೇ ಬೆಳಗಿನ ಇಂದು ಶುಭ ಮುಹೂರ್ತದಲ್ಲಿ ಹೊರಡುತ್ತೇನೆ. ಬೇಗ ಎಲ್ಲವೂ ಸಿದ್ಧವಾಗುವಂತೆ ನೋಡು ಬೊಂತಾ.........ಅಂದ ಹಾಗೆ ತೈಲಪನಿಗೆ ಹುಡುಗಿಯನ್ನು ನೋಡಬೇಕೆಂದು ಬಯಕೆಯಾಗಲಿಲ್ಲವೇ?

**ಚೊಂತಾದೇವಿ** : ಬಯಕೆ ಆಗದೇ ಏನು? ಆದರೆ ಅವನಿಗೆ ಹೇಳಿಕೊಳ್ಳಲು ನಾಚಿಕೆಯಾದಂತೆನಿಸಿತು. ಅದಕ್ಕೆಂದೇ ಸುಮ್ಮನೆ, ನಿಮ್ಮಿಷ್ಟ ಎಂದುಬಿಟ್ಟೆ.

[ಸೂಚನೆ : ಸಮಯದ ಅಂತರವನ್ನು ಸೂಚಿಸಬೇಕು]

**ಕರ್ಕದೇವ** : ಭಾವೀ ಬೀಗರಾಗಲಿರುವ ವಿಕ್ರಮಾದಿತ್ಯರೇ ಬಂದದ್ದು ನಮಗೆ ಸಂತೋಷವಾಗಿದೆ. ಅರಮನೆಯಲ್ಲಿ ಎಲ್ಲರೂ ಕುಶಲವೆ?

**ವಿಕ್ರಮಾದಿತ್ಯ** : ದೇವರ ಅನುಗ್ರಹದಿಂದ ಎಲ್ಲರೂ ಕುಶಲರಾಗಿದ್ದಾರೆ. ನಮ್ಮ ಮಕ್ಕಳು ನಿಮ್ಮ ಕುಮಾರ್ತೆಯನ್ನು ಲಗ್ನವಾಗಲು ಒಪ್ಪಿರುವನೆಂದು ತಿಳಿಸಲು ನಮಗೆ ಸಂತೋಷವಾಗುತ್ತಿದೆ. ತಮ್ಮ ನಿರೀಕ್ಷೆಯಂತೆ ನಮ್ಮೆಲ್ಲರ ನೆರವು ನಿಮ್ಮ ಕಡೆಗಿದೆ. ಲಗ್ನವಾದ ನಂತರ ನಾವಿಬ್ಬರೂ ಒಂದೇ ಕುಟುಂಬದವರಾಗುತ್ತೇವೆ. ನಮ್ಮಿಬ್ಬರ ಶ್ರೇಯಸ್ಸು ಒಂದಾಗುತ್ತದೆ.

**ಕರ್ಕದೇವ** : ವಿಕ್ರಮಾದಿತ್ಯರೇ, ನಾನು ನಿಮ್ಮ ನೆರವನ್ನು ಯಾಚಿಸಿ ರಾಷ್ಟ್ರಕೂಟ ಸಿಂಹಾಸನವನ್ನು ಆಕ್ರಮಿಸಿಕೊಳ್ಳುವ ದುರಾಸೆಗೆ ಕಾರಣವಿರಲಿಲ್ಲವಾದರೂ, ಆಸೆ ಪಡುವ ಅನಿವಾರ್ಯತೆ ಏರ್ಪಟ್ಟಿತು. ನಮ್ಮ ದೊಡ್ಡಪ್ಪನವರ ದುರಾಡಳಿತದಿಂದ ರಾಜ್ಯ ಅರಾಜಕವಾಗುತ್ತಿದೆ. ಪ್ರಜೆಗಳ ಭದ್ರತೆಗೇ ತೊಡಕುಂಟಾಗಿದೆ. ಶತ್ರುಗಳಾದ ಪರಮಾರರ ಹದ್ದುಗಣ್ಣು ಇದರ ಮೇಲೆ ಬಿದ್ದಿದೆ. ಯಾವ ಕ್ಷಣದಲ್ಲಾದರೂ ಶತ್ರುಗಳ ದಾಳಿಯಾಗಿ ರಾಷ್ಟ್ರಕೂಟ ರಾಜ್ಯ ನಮ್ಮ ಕೈಯಿಂದ ಜಾರಿ ಹೋಗಬಹುದು.

**ವಿಕ್ರಮಾದಿತ್ಯ** : ನಿಮ್ಮ ಭಯ ಆತಂಕಗಳಿಗೆ ಅರ್ಥವಿದೆ. ಶತ್ರುಗಳ ವಿಚಾರವಾಗಿ ನಾವೆಲ್ಲ ಬಲ್ಲೆವು. ಅಲ್ಲದೆ ನಿಮ್ಮೊಳಗೆ ಆಂತರಿಕ ಜಗಳಗಳೂ, ಪಿತೂರಿಗಳು ನಡೆಯುತ್ತಿವೆ ಎಂಬುದೂ ನಮಗೆ ಗೊತ್ತು.

**ಕರ್ಕದೇವ** : ನಿಮ್ಮಲ್ಲಿ ಮುಚ್ಚುಮರೆಯಾಕೆ ವಿಕ್ರಮಾದಿತ್ಯರೇ! ನಮ್ಮ ರಾಷ್ಟ್ರಕೂಟ ರಾಜ್ಯಕ್ಕೆ ಒಂದು ಕಡೆಯಿಂದಲ್ಲ, ಎರಡು ಕಡೆಯಿಂದ ಶತ್ರುಭೀತಿಯಿದೆ. ಒಂದು ಮುಖ್ಯವಾಗಿ ಪರಮಾರ ಅರಸು ನೀಯಕ ಹರ್ಷನಿಂದ, ಎರಡನೇಯದು ಗಂಗದೊರೆ ಮಾರಸಿಂಹನಿಂದ, ನನ್ನ ವಾವೆಯ ಸೋದರ ಸಂಬಂಧಿ ಇಂದ್ರನದು. ಅವನು ಗಂಗದೊರೆ ಮಾರಸಿಂಹನ ಮೊರೆ ಹೊಕ್ಕಿದಾನೆ. ನ್ಯಾಯರೀತ್ಯಾ ಈ ಸಿಂಹಾಸನ ದೊರೆಯಬೇಕಾದ್ದು ಇವನಿಗೆ ಅನ್ನುವುದು ನಿಜವಾದರೂ, ಅವನ ವಿರುದ್ಧವೂ ಹೋರಾಡಬೇಕಿದೆ. ಕಾರಣ ಅವನು ಗಂಗರ ಜಾಲದಲ್ಲಿ ಬಿದ್ದಿದ್ದಾನೆ. ಅವನು ಗೆದ್ದರೂ ಸಿಂಹಾಸನ ಅವನಿಗೆ ದಕ್ಕುವುದಿಲ್ಲ. ಬದಲಾಗಿ ಗಂಗರ ಪಾಲಾಗುತ್ತದೆ. ಅವನು ಸಿಂಹಾಸನ ಏರುವುದೆಂದರೆ ಗಂಗರಿಗೆ ರಾಷ್ಟ್ರ ಒಪ್ಪಿಸಿದಂತೆಯೇ.

ವಿಕ್ರಮಾದಿತ್ಯ : ಅದನ್ನು ಇಷ್ಟು ಖಚಿತವಾಗಿ ಹೇಗೆ ಹೇಳಬಲ್ಲಿರಿ?

ಕರ್ಕದೇವ : ಇಂದ್ರನ ತಾಯಿ ಗಂಗ ಮಾರಸಿಂಹನ ಸೋದರಿ. ಗಂಗರಾಜ ಬೂತುಗನ ಮಗಳು. ಆದ್ದರಿಂದ ಸೋದರಳಿಯನ ನೆಪದಲ್ಲಿ ಸೋದರ ಮಾವನೇ ಕಬಳಿಸುತ್ತಾನೆ. ಅದು ಹಾಗಾಗದಂತೆ ತಡೆಯಬೇಕಾದರೆ ಮತ್ತು ಎರಡು ಶತಮಾನಗಳಿಗೂ ಹೆಚ್ಚು ಕಾಲದಿಂದಲೂ ಆಳಿಕೊಂಡು ಬಂದ ದಂತಿದುರ್ಗರಿಂದ ಸ್ಥಾಪಿತವಾದ ಈ ರಾಷ್ಟ್ರಕೂಟ ರಾಷ್ಟ್ರ ರಾಷ್ಟ್ರಕೂಟದಿಂದಾಗಿಯೇ ಮುಂದುವರೆಯಬೇಕೆಂದರೆ ನಾವು ಯೋಚಿಸುತ್ತಿರುವಂತೆ ನಡೆದುಕೊಳ್ಳುವುದೊಂದೇ ದಾರಿ.

ವಿಕ್ರಮಾದಿತ್ಯ : ಹಾಗಾದರೆ ನಿಮ್ಮ ದೊಡ್ಡಪ್ಪನವರನ್ನು ಸಿಂಹಾಸನದಿಂದ ಕೆಳಗೆ ಇಳಿಸಲೇಬೇಕೆಂದು ನಿರ್ಧರಿಸಿದ್ದೀರಿ.

ಕರ್ಕರಾಜ : ಹೌದು. ಇದಲ್ಲದೆ ಅನ್ಯ ದಾರಿಯೇ ಇಲ್ಲ. ನಮ್ಮ ದೊಡ್ಡಪ್ಪನ ಸುತ್ತ ಸ್ವಾರ್ಥ ರಾಜಕಾರಣಿಗಳ ದೊಡ್ಡ ಹಿಂಡಿದೆ. ಅವರೆಲ್ಲ ನಮ್ಮ ದೊಡ್ಡಪ್ಪನ ಪರವಾಗಿದ್ದಾರೆಂದು ಕಾಣಿಸಿಕೊಳ್ಳುತ್ತಿದ್ದರೂ ಶತ್ರುಗಳ ಆಮಿಷಕ್ಕೆ ಒಳಗಾಗದೆ ಉಳಿಯುವ ಮಹಾನುಭಾವರೇನಲ್ಲ!.....ಇದನ್ನು ತಪ್ಪಿಸಲು ನಿಮ್ಮ ನೆರವು ನನಗೆ ಅತ್ಯಗತ್ಯ. ಈ ರಾಷ್ಟ್ರಕೂಟ ಸಾಮ್ರಾಜ್ಯದ ಕೀರ್ತಿ, ಪ್ರತಿಷ್ಠೆಗಳು ಹೀಗೆಯೇ ಮುಂದುವರೆಯಬೇಕೆಂಬುದು ನಮ್ಮ ಅಭಿಲಾಷೆ.

ವಿಕ್ರಮಾದಿತ್ಯ : ನಿಮ್ಮ ಅಭಿಲಾಷೆ ತರ್ಕಬದ್ಧವಾದುದೇ! ರಾಷ್ಟ್ರದ ಖ್ಯಾತಿಗೆ ಒಂದು ಭವ್ಯ ಪರಂಪರೆ ಇದೆಯೆಂಬುದು ಜನಮಾನಕ್ಕೆ ತಿಳಿದಿದೆ. ಕಲೆ, ಶಿಲ್ಪ, ಸಾಹಿತ್ಯ, ಸಂಗೀತ, ವಿದ್ವತ್ತುಗಳಿಗೆ ತವರಾಗಿ, ಶತ್ರು ನಿರ್ಬಾಧಿತವಾಗಿ, ಪ್ರಭು ವಾತ್ಸಲ್ಯದ ಸವಿಯುಣ್ಣುತ್ತಿದ್ದ ಪ್ರಜೆಗಳ ಕಣ್ಣಲ್ಲಿ ಇನ್ನೂ ಈ ರಾಷ್ಟ್ರ ಹಾಗೇ ಪಡಿ ಮೂಡಿ ನಿಂತಿದೆ. ಅಂಥಾದ್ರಲ್ಲಿ ಸ್ವಾರ್ಥ, ಅಸಮರ್ಥ ರಾಜಕಾರಣದಿಂದಾಗಿ ಉಂಟಾಗಿರುವ ಅಸ್ತವ್ಯಸ್ತ ಪರಿಸ್ಥಿತಿಯಲ್ಲಿ ಸುಧಾರಣೆ ಅತ್ಯಗತ್ಯವೇ. ಪ್ರಜೆ, ಪರಿವಾರದ ಸುಖ ಶಾಂತಿಗಳನ್ನು ಕಾಯ್ದಿಡುವ ಪ್ರಯತ್ನಗಳು ನಡೆಯಲೇಬೇಕೆಂಬುದನ್ನು ನಾನೂ ಒಪ್ಪುತ್ತೇನೆ. ಅದಕ್ಕೆಂದು ನಾನು ನಿಮ್ಮೊಂದಿಗೆ ಸಂಪೂರ್ಣವಾಗಿ ಸಹಕರಿಸುತ್ತೇನೆ.

ಕರ್ಕರಾಜ : ಸಹಕರಿಸುವುದಷ್ಟೇ ಅಲ್ಲ. ನಿಮ್ಮ ನೇತೃತ್ವದಲ್ಲಿಯೇ ನಮ್ಮ ಕಾರ್ಯ ಯೋಜನೆಗಳು ರೂಪಿತವಾಗಲಿ, ನೀವಿದ್ದರೆ ನನಗೆ ಒಂದು ಬಗೆಯ ನೆಮ್ಮದಿ, ಸ್ಥೈರ್ಯಗಳು.

ವಿಕ್ರಮಾದಿತ್ಯ : ನೀವು ಹೇಳುವುದು, ಯೋಚಿಸುವುದು, ಎಷ್ಟೇ ಸಮರ್ಥನೀಯವಾದರೂ, ಅತ್ಯಂತ ಗಂಭೀರವಾದ ಜವಾಬ್ದಾರಿಯಾಗಿರುವುದರಿಂದ ಮೈಯೆಲ್ಲ ಕಣ್ಣಾಗಿ ಕಾಯಬೇಕು. ಆತುರದಲ್ಲಿ ಅಚಾತುರ್ಯಗಳು ನಡೆಯಬಾರದು. ಈಗ ಲಗ್ನದ ವಿಚಾರವನ್ನು ಮೊದಲು ಆಲೋಚಿಸೋಣ. ನಿಮ್ಮ ದೊಡ್ಡಪ್ಪನವರ ಸಲಹೆ, ಸಹಕಾರದಿಂದ ಮತ್ತು ಅವರ ಹಿರಿತನದ ಅಧ್ವರ್ಯುತನದಲ್ಲಿ ಮದುವೆ ನಡೆಯಲಿ. ಎಲ್ಲವೂ ಯಥಾವಿಧಿಯಂತೆ ನಡೆಯಲಿ, ಮಾತು, ರೀತಿ, ನೀತಿ ಯಾವುದರಲ್ಲಿಯೂ ವ್ಯತ್ಯಯಗಳಾಗದಿರಲಿ. ಆಗ ನಿಮ್ಮ ದೊಡ್ಡಪ್ಪನವರಿಗೆ ಯಾವುದೇ ಬಗೆಯ ಅನುಮಾನಗಳಿಗೆ ಆಸ್ಪದವಿರುವುದಿಲ್ಲ.

ಕರ್ಕರಾಜ : ನಿಮ್ಮ ಸಲಹೆ ಸೂಚನೆಗಳಂತೆಯೇ ಎಚ್ಚರಿಕೆಯಿಂದ ನಡೆದುಕೊಳ್ಳುತ್ತೇನೆ. ನಮ್ಮ ದೊಡ್ಡಪ್ಪನವರು ಹಾಗೆ ನೋಡಿದರೆ ಯಾರನ್ನೂ ಅನುಮಾನಿಸುವುದೇ ಇಲ್ಲ. ಅವರಿವರ ಹಿಸುಣತನದ ಮಾತುಗಳಿಗೆ ಬಲಿ ಬೀಳುವರಲ್ಲದೆ ಅವರ ಸ್ವಭಾವ ನಿಜವಾಗಿ ವಿರುದ್ಧವಾದುದು.

ವಿಕ್ರಮಾದಿತ್ಯ : ಯಾರು ಹೇಗೆಂದು ನಾವು ಖಚಿತವಾಗಿ ಹೇಳುವುದಕ್ಕೆ ಆಗುವುದಿಲ್ಲ. ಪರಿಸ್ಥಿತಿಗಳೇ ಒಮ್ಮೊಮ್ಮೆ ಮನುಷ್ಯನ ಸ್ವಭಾವ, ಸ್ವರೂಪಗಳನ್ನು ಬದಲಾಯಿಸಿ ಬಿಡುತ್ತದೆ. ಅದಕ್ಕಾಗಿ ನಾವು ನಮ್ಮ ಎಚ್ಚರಿಕೆಯಲ್ಲಿ ಇರಬೇಕು ಎಂಬುದು ನನ್ನ ನಂಬಿಕೆ, ಜೊತೆಗೆ ಹೀಗೆ ಎಚ್ಚರಿಕೆಯಿಂದ ಇರುವುದರಿಂದ ಲಾಭವಿಲ್ಲದಿದ್ದರೂ ನಷ್ಟವಂತೂ ಇರುವುದಿಲ್ಲವಲ್ಲ. ..........ಈಗ ಮಹಾರಾಜರೊಂದಿಗೆ ಲಗ್ನದ ವಿಷಯ ಮಾತನಾಡಲು ನಿಮ್ಮೊಡನೆ ನಾನೂ ಬರಬೇಕೆ ಇಲ್ಲ ನೀವೊಬ್ಬರೇ ಮಾತನಾಡಿ ಬರುತ್ತೀರೋ ಹೇಗೆ?

ಕರ್ಕರಾಜ : ಇಲ್ಲ ನೀವೂ ಬನ್ನಿ. ನೀವು ಜೊತೆಗಿದ್ದರೆ ನನಗೆ ಸಾವಿರ ಆನೆ ಬಲ ಬಂದಂತೆನಿಸುತ್ತದೆ.

ವಿಕ್ರಮಾದಿತ್ಯ : ಹಾಗಾದರೆ ಯಾವಾಗ ಹೊರಡೋಣ ಅವರ ಸಂದರ್ಶನಕ್ಕೆ.

ಕರ್ಕರಾಜ : ಶುಭಸ್ಯ ಶೀಘ್ರಂ..........ಈಗಲೇ ಸಂಪರ್ಕಿಸೋಣ. ಊಳಿಗದವರನ್ನು ಕರೆದು ದೊಡ್ಡಪ್ಪನವರ ಸಮಯ ತಿಳಿದು ಬರುವಂತೆ ಹೇಳುತ್ತೇನೆ.

(ಗಂಟೆ ಬಾರಿಸಿ. ಯಾರಲ್ಲಿ? ಎಂದು ಕೂಗುವನು. ಊಳಿಗದವನು ಪ್ರವೇಶಿಸುವನು)

ಊಳಿಗದವನು : ಸ್ವಾಮಿ ಏನಪ್ಪಣೆ? (ವಿನೀತನಾಗಿ)

ಕರ್ಕದೇವ : ನೋಡು, ಹೋಗಿ ಕೂಡಲೇ ಪ್ರಭುಗಳನ್ನು ಕಂಡು ಕರ್ಕದೇವ, ವಿಕ್ರಮಾದಿತ್ಯ ಪ್ರಭುಗಳು ತಮ್ಮನ್ನು ಕಾಣಬೇಕೆಂದಿದ್ದಾರೆ. ಎಂಬ ವಿಷಯವನ್ನು ತಿಳಿಸಿ ಬಾ ತಡಮಾಡಬೇಡ.

ಊಳಿಗದವನು : ಅಪ್ಪಣೆ, ಇದೋ ಈಗಲೇ ಬರುವೆ.

ಕರ್ಕದೇವ : ದೊಡ್ಡಪ್ಪನನ್ನು ಕಾಣಲು ಅಂತಹ ತೊಡಕು ಉಂಟಾಗಲಾರದೆನಿಸುತ್ತದೆ.

ವಿಕ್ರಮಾದಿತ್ಯ : ಅಂದರೆ? ತೊಡಕು ಉಂಟಾಗುವ ಸಂದರ್ಭಗಳೇನಾದರೂ ಅರಮನೆಯ ವ್ಯವಸ್ಥೆಯಲ್ಲಿ ಇರುವುವೇನು?

ಕರ್ಕದೇವ : ನನ್ನ ದೊಡ್ಡಪ್ಪನವರು ಮೂವರನ್ನು ಲಗ್ನವಾಗಿದ್ದರು. ಅವರಲ್ಲಿ ಇಬ್ಬರು ಸಿಂಹಾಸನಾರೋಹಣಕ್ಕೆ ಮೊದಲೇ ತೀರಿಕೊಂಡಿದ್ದರು. ಮೂರನೆಯವರು ಈ ವರ್ಷವಷ್ಟೇ ತೀರಿಕೊಂಡರು. ಆಮೇಲೆ ಬನವಾಸಿಯ ಆಡಳಿತಾಧಿಕಾರಿ ಗಬ್ಬೀಂದ್ರರ ದೂರ ಸಂಬಂಧದ ಜಕ್ಕಿ ಸುಂದರಿ ಎಂಬಾಕೆ ಅವರ ಶುಶ್ರೂಷೆಗೆಂದು ಬಂದು ಅರಮನೆಯಲ್ಲಿ ನಿಯೋಜಿತಳಾಗಿದ್ದಾಳೆ. ಆಕೆ ಒಂದು ರೀತಿ ಲಹರಿಯ ಹೆಂಗಸು. ತೊಡಕು ಬರುವುದಾದರೆ ಅವಳಿಂದ ಮಾತ್ರ.

ವಿಕ್ರಮಾದಿತ್ಯ : ಈ ವಿಷಯ ನನಗೆ ಗೊತ್ತಿರಲಿಲ್ಲ.

ಕರ್ಕದೇವ : ಜಕ್ಕಿ ಸುಂದರಿ ಸಾಮಾನ್ಯ ಹೆಂಗಸಲ್ಲ. ಪ್ರಳಯಾಂತಕ ಬುದ್ಧಿಯುಳ್ಳವಳು. ಅವಳಿಂದ ಬಹಳ ಜಾಗರೂಕತೆಯಿಂದ ಇರಬೇಕು. ಈ ಅರಮನೆಯಲ್ಲಿ ಅವಳದೇ ಹೆಚ್ಚಿನ ಓಡಾಟ.

ಊಳಿಗದವನು : (ಪ್ರವೇಶಿಸಿ) ದೊರೆಗಳು ಮನ್ನಿಸಬೇಕು.

ಕರ್ಕದೇವ : ಏನು ವಿಷಯ?..............ನಮ್ಮ ಕೆಲಸವಾಯಿತೇ?

ಊಳಿಗದವನು : ಆಯಿತು ಪ್ರಭು.................ಈಗಲೇ ಸನ್ನಿಧಾನವನ್ನು ಕಾಣಬಹುದಂತೆ!

ಕರ್ಕದೇವ : ಆಯಿತು. ನೀನು ಈಗಲೇ ಹೋಗಿ ನಾವು ಬರುತ್ತಿದ್ದೇವೆಂಬ ವಿಷಯವನ್ನು ತಿಳಿಸು.

ಊಳಿಗದವನು : ಅಪ್ಪಣೆ (ಎಂದು ಹೊರಡುತ್ತಾನೆ)

[ಸಮಯದ ಅಂತರ ಸೂಚಿತವಾಗಬೇಕು]

[ವಿಕ್ರಮಾದಿತ್ಯ ಕರ್ಕದೇವ–ಖೊಟ್ಟಿಗದೇವನನ್ನು ಕಾಣುತ್ತಾರೆ]

ವಿಕ್ರಮಾದಿತ್ಯ : (ಖೊಟ್ಟಿಗದೇವನಿಗೆ) ಸನ್ನಿಧಾನಕ್ಕೆ ನನ್ನ ಅನಂತ ವಂದನೆಗಳು.

ಕರ್ಕದೇವ : ದೊಡ್ಡಪ್ಪನಿಗೆ ಕರ್ಕದೇವನ ಗೌರವಪೂರ್ವಕ ನಮಸ್ಕಾರ.

**ಖೊಟ್ಟಿಗದೇವ** : ಬನ್ನಿ ವಿಕ್ರಮಾದಿತ್ಯರೇ, ತಮ್ಮನ್ನು ಕಂಡು ನಮಗೆ ಸಂತೋಷವೆನಿಸಿದೆ. ಬನ್ನಿ ಕುಳಿತುಕೊಳ್ಳಿ. ಕರ್ಕ ನೀನೂ ಕುಳಿತುಕೋ. ನೀನೊಬ್ಬನೇ ಬರುತ್ತೀ ಎಂದುಕೊಂಡಿದ್ದೆ. ಸಾಮಂತ ವಿಕ್ರಮಾದಿತ್ಯರು ಬರುವ ಸೂಚನೆ ಇರಲಿಲ್ಲ. ಆದರೂ ಅವರು ಬಂದುದು ನಮಗೆ ಸಂತೋಷವೇ............ಹೇಳಿ ಏನು ವಿಷಯ? ಹೀಗೆ ಅನಿರೀಕ್ಷಿತವಾಗಿ ಬಂದು ನಮ್ಮನ್ನು ಕಾಣಬೇಕೆಂದರೆ, ಮುಖ್ಯವಾದ ಸಂಗತಿಗಳೇ ಇರಬೇಕು.

**ಕರ್ಕದೇವ** : ದೊಡ್ಡಪ್ಪ, ಸಾಮಂತ ವಿಕ್ರಮಾದಿತ್ಯರ ಕುಮಾರ ತೈಲಪನಿಗೆ ನನ್ನ ಮಗಳನ್ನು ಧಾರೆಯೆರೆದು ಕೊಡುವ ಬಗ್ಗೆ ಹಿರಿಯರಾದ ನಿಮ್ಮಿಂದ ಸಮ್ಮತಿ ಮತ್ತು ಆಶೀರ್ವಾದಗಳನ್ನು ಪಡೆಯಲು ಬಂದಿರುವೆ.

**ಖೊಟ್ಟಿಗದೇವ** : ನನ್ನ ಸಮ್ಮತಿಯ ಅಗತ್ಯವೇನಿದೆ ಕರ್ಕ? ಕೊಡುವವರು ಕೊಳ್ಳುವವರು ಪರಸ್ಪರ ಒಪ್ಪಿದರೆ ಕೆಲಸ ಮುಗಿದಂತೆ.

**ಕರ್ಕದೇವ** : ದೊಡ್ಡಪ್ಪ ನೀವು ಹಿರಿಯರು. ತಂದೆಯಿಲ್ಲದ ನನಗೆ ನೀವೇ ತಂದೆಯ ಸ್ಥಾನದಲ್ಲಿ ಇರುವವರು. ನಾವು ಒಪ್ಪಿದರೂ, ಮುಂದೆ ನಿಂತು ಕಿರಿಯರಾದ ನಮಗೆ ಮಾರ್ಗದರ್ಶನ ನೀಡುವುದಲ್ಲದೆ, ಈ ಲಗ್ನದ ಹಿರಿತನದ ಜವಾಬ್ದಾರಿಯನ್ನು ನೀವೇ ವಹಿಸಿಕೊಂಡು ನಡೆಸಿಕೊಡಬೇಕು.

**ಖೊಟ್ಟಿಗದೇವ** : ಕರ್ಕ ನಮಗೆ ನಮ್ಮ ಜವಾಬ್ದಾರಿಯ ಅರಿವಿದೆ. ರಾಷ್ಟ್ರಕೂಟ ಹೆಣ್ಣುಮಕ್ಕಳ ಲಗ್ನವೆಂದರೆ ಸಾಮಾನ್ಯವೇ. ಅದೂ ನಮ್ಮ ಮೊಮ್ಮಗಳದೇ ಲಗ್ನವೆಂದಾಗ ಹೇಳಬೇಕೆ? ನಾವೇ ಮುಂದೆ ನಿಂತು ಎಂದೂ ಕೇಳದಷ್ಟು ಅದ್ದೂರಿಯಿಂದ ಈ ಲಗ್ನ ಕಾರ್ಯವನ್ನು ನಡೆಸಿಕೊಡುತ್ತೇವೆ ಕರ್ಕ. ನೀನು ಯಾವುದಕ್ಕೂ ಸಂಕೋಚಪಡಬೇಡ. ನಮ್ಮ ರಾಜ ಬೊಕ್ಕಸದ ಶ್ರೀಮಂತಿಕೆ ಏನೆಂಬುದು ಪ್ರಜಾಕೋಟಿಗೆ ಬಂಧು ವರ್ಗಕ್ಕೆ ತಿಳಿಯಲಿ. ಕಿರಿಯರು ಹಿರಿಯರ ಆಶೀರ್ವಾದ ಬಯಸುವುದು, ಹಿರಿಯರು ಅದನ್ನು ಸಂತೋಷದಿಂದ ನೀಡುವುದು ರಾಷ್ಟ್ರಕೂಟ ಧರ್ಮವಲ್ಲವೇ? ಇದೆಲ್ಲಕ್ಕೂ ಹೆಚ್ಚಿನ ಸಂತೋಷ ಇನ್ನೊಂದಿದೆ. ಅದೇನು ಗೊತ್ತೇ? ಅದೂ ಅಲ್ಲದೆ ಎರಡನೇ ಬಾರಿಗೆ ರಾಷ್ಟ್ರಕೂಟ, ಚಾಲುಕ್ಯ ವಂಶಗಳು, ಮನೆತನಗಳು ಒಂದಾಗುತ್ತಿರುವುದು ಇನ್ನೂ ಹೆಚ್ಚಿನ ಸಂತೋಷ. ಇಂತಹ ಅನ್ಯೋನ್ಯತೆಗೆ ಸದಾ ನನ್ನ ಹೃದಯ ಪೂರ್ವಕ ಆಶೀರ್ವಾದವಿದೆ...........ಸಾಮಂತ

ವಿಕ್ರಮಾದಿತ್ಯರೇ ನಿಮ್ಮ ತಾಯಿ ರಾಷ್ಟ್ರಕೂಟ ಮನೆತನದವರೇ ಅಲ್ಲವೇ? ರಾಷ್ಟ್ರಕೂಟರ ಸುಭದ್ರತೆಗೆ ಚಾಲುಕ್ಯ ಸಾಮಂತರ ನೆರವು ಕಾರಣವಾಗಿದೆ ಎಂಬುದು ನಮಗೆಲ್ಲರಿಗೆ ತಿಳಿದ ವಿಷಯವೇ.

**ವಿಕ್ರಮಾದಿತ್ಯ** : ಬಹಳ ದೊಡ್ಡ ಮಾತನ್ನಾಡಿದಿರಿ. ಇದರಿಂದ ನಮ್ಮ ಗೌರವಕ್ಕೆ ಗರಿ ಮೂಡಿದಂತಾಗಿದೆ.

**ಖೊಟ್ಟಿಗದೇವ** : ವಿಕ್ರಮಾದಿತ್ಯರೇ, ಸತ್ಯವನ್ನೆಂದೂ ಅಲ್ಲಗಳೆಯಬಾರದು..........ನಮ್ಮ ಕರ್ಕನ ಮಗಳು ಜಯಲಕ್ಷ್ಮಿ ಚಿಕ್ಕಂದಿನಿಂದಲೂ ನಯ–ವಿನಯ, ನಡವಳಿಕೆಗಳಲ್ಲಿ ಅನುಪಮೇಯಳು. ನಿಮಗವಳು ಹೆಸರಿಗೆ ತಕ್ಕಂತೆ ಜಯಲಕ್ಷ್ಮಿಯಾಗಿಯೇ ಪರಿಣಮಿಸುತ್ತಾಳೆ. ಚಾಲುಕ್ಯ–ರಾಷ್ಟ್ರಕೂಟ ಸ್ನೇಹ ಸೇತುವೆಯಾಗುತ್ತಾಳೆ.

**ವಿಕ್ರಮಾದಿತ್ಯ** : ನಿಮ್ಮ ಹಾರೈಕೆಗಳು ಫಲಿಸುವಂತಾಗಲೆಂದು ನಮ್ಮ ಅಪೇಕ್ಷೆ. ಒಳ್ಳೆಯ ಲಗ್ನ ಮುಹೂರ್ತವನ್ನು ಸೂಚಿಸಬೇಕೆಂಬುದು ನಮ್ಮ ಪ್ರಾರ್ಥನೆ.

**ಖೊಟ್ಟಿಗ** : ಈ ವಿಭವದಲ್ಲಿಯೇ ಲಗ್ನ ಕಾರ್ಯ ಮುಗಿದು ಹೋಗಲಿ. ತಡ ಮಾಡುವುದು ಬೇಡ. ನಮ್ಮ ಆಡಳಿತಾಧಿಕಾರಿ ಗಬ್ಬೀಂದ್ರರನ್ನು ಬರಮಾಡಿ ಲಗ್ನದ ಹೊಣೆಗಾರಿಕೆಯನ್ನು ಆತನಿಗೇ ವಹಿಸಿಬಿಡಿ. ನಮ್ಮ ಘನತೆಗೆ ತಕ್ಕಂತೆ ವಿವಾಹ ವ್ಯವಸ್ಥೆಯಲ್ಲಿ ಹೇಗೆ ಮಾಡಬೇಕೆಂಬುದನ್ನು ದಕ್ಷತೆಯಿಂದ ಯೋಚಿಸುತ್ತಾನೆ. ನಾವೂ ಅವರಿಗೆ ಎಲ್ಲವನ್ನೂ ತಿಳಿಸಿ ಹೇಳುತ್ತೇವೆ..........ಆಗಬಹುದಲ್ಲವೇ ಕರ್ಕ?

**ಕರ್ಕದೇವ** : ದೊಡ್ಡಪ್ಪ ನೀವಿರುವಾಗ ನನಗೇತರ ಚಿಂತೆ. ನಿಮ್ಮಿಷ್ಟದಂತೆ ಗಬ್ಬೀಂದ್ರರೇ ಎಲ್ಲ ವ್ಯವಸ್ಥೆಯನ್ನು ನೋಡಿಕೊಳ್ಳಲಿ. ಒಂದು ರೀತಿಯಿಂದ ಅವರ ಮೇಲ್ವಿಚಾರಣೆಯಿಂದ ಒಳ್ಳೆಯದೇ ಆಯಿತು. ಗಂಡಸರಿಂದಾಗಲೀ, ಹೆಂಗಸರಿಂದಾಗಲೀ ಯಾವುದೇ ಬಗೆಯ ಆಕ್ಷೇಪಗಳು ಬರುವುದಿಲ್ಲ. ಎಲ್ಲವೂ ಸುಸೂತ್ರವಾಗಿ ನಡೆದುಕೊಂಡು ಹೋಗುತ್ತವೆ.

**ವಿಕ್ರಮಾದಿತ್ಯ** : ಅಂದರೆ ಗಬ್ಬೀಂದ್ರರ ಧರ್ಮಪತ್ನಿಯವರು ಹೆಂಗಸರ ವ್ಯವಸ್ಥೆಯನ್ನು ನೋಡಿಕೊಳ್ಳುವರೇನು?

**ಕರ್ಕದೇವ** : ಓ ಆ ವಿಚಾರ ನನಗೆ ಹೊಳೆದೇ ಇರಲಿಲ್ಲ. ಹಾಂ! ನಮ್ಮ ದೊಡ್ಡಪ್ಪನವರ ಶುಶ್ರೂಷೆಯ ಹೊಣೆ ಹೊತ್ತಿರುವ ಜಕ್ಕಿ ಸುಂದರಿಯವರು ಗೊಗ್ಗಿಯ ಮಗ, ಕದಂಬಳಿಗೆ ಸಾವಿರದ ಅಧಿಪತಿ ಪಂಡಿಗರ ಪತ್ನಿ, ಗಬ್ಬೀಂದ್ರರ ಸಂಬಂಧಿಯೇ ಆಗಿದ್ದಾರೆ. ಅವರಿಗೆ ಈ ಅರಮನೆಯ ಶಿಷ್ಟಾಚಾರಗಳಲ್ಲದೆ,

ಜನರ ಮನೋಭಾವಗಳನ್ನು ಅರಿತಿದ್ದಾರಂತೆ. ಯಾರು ಯಾರನ್ನು ಹೇಗೆ ನಡೆಸಿಕೊಳ್ಳಬೇಕೆಂಬುದನ್ನು ಬಲ್ಲ ಸಮರ್ಥರೂ, ದಕ್ಷರೂ ಆಗಿದ್ದಾರೆ.

**ವಿಕ್ರಮಾದಿತ್ಯ** : ಜಕ್ಕಿ ಸುಂದರಿಯವರು ಬನವಾಸಿ ಕಡೆಯವರೇನು?

**ಖೊಟ್ಟಿಗದೇವ** : ಅವರು ನಿಮ್ಮದೇ ಚಾಲುಕ್ಯ ಮನೆತನಕ್ಕೆ ಸೇರಿದವರಂತೆ.

**ವಿಕ್ರಮಾದಿತ್ಯ** : (ಆಶ್ಚರ್ಯದಿಂದ)ಏನು ನಮ್ಮ ಚಾಲುಕ್ಯ ಮನೆತನವೆ?.........ಇಲ್ಲಿವರೆಗೆ ಈ ಹೆಸರನ್ನು ಕಂಡು, ಕೇಳಿ ಅರಿಯೆ..................ನಮಗೆ ತಿಳಿಯದ ಮನೆತನದ ಸಂಬಂಧ?! ನನಗೆ ಆಶ್ಚರ್ಯವೆನಿಸುತ್ತಿದೆ.

**ಖೊಟ್ಟಿಗದೇವ** : ಸಾಮಂತರೇ ನಿಮ್ಮ ವಂಶದ ಪರಂಪರೆ ಬಹಳ ದೊಡ್ಡದು. ನಾಲ್ಕು ಶತಮಾನಗಳಿಗೂ ಹಿಂದಿನಿಂದ ನಡೆದು ಬಂದ ವಂಶಾವಳಿ. ಪ್ರಸಿದ್ಧಿಗೆ ಬಂದ ವಂಶಾವಳಿ. ಸಂಪ್ರದಾಯದಂತೆ ಗಂಡು ಸಂತಾನದ ಪರಂಪರೆಯೇ ನಮಗೆಲ್ಲ ಮುಖ್ಯವಾಗಿದೆ.

**ವಿಕ್ರಮಾದಿತ್ಯ** : ಇರಬಹುದು. ನಮಗೆ ಗಂಡು ಸಂತಾನದಿಂದ ಬೆಳೆಯುವ ಪರಂಪರೆ ಮುಖ್ಯವಾಗಿ ಹೆಣ್ಣು ಸಂತಾನದ ಮೂಲಕ ವೃದ್ಧಿಯಾಗುವ ವಂಶ ಶಾಖೆಗಳ ಬಗೆಗೆ ತಿಳಿಯುವ ಉಳಿಯುವ ಸಾಧ್ಯತೆಗಳು ಕಡಿಮೆಯಾಗಿವೆ................. ಹೋಗಲಿ ಆಕೆಗಾದರೂ ತನ್ನ ವಂಶ ಪರಂಪರೆಯ ಇತಿಹಾಸ ತಿಳಿದಿರುವುದೇನು?

**ಖೊಟ್ಟಿಗದೇವ** : ಅದು ನಮಗೆ ಗೊತ್ತಿಲ್ಲ. ನಿಮಗಾದರೂ ನಿಮ್ಮ ವಂಶದ ಮೂಲ ಬೇರುಗಳು ಎಲ್ಲಿಂದ ಎಂಬುದು ನೆನಪಿದೆಯೇನು?

**ವಿಕ್ರಮಾದಿತ್ಯ** : ಇಲ್ಲವೆಂದು ಹೇಳಲು ನಾಚಿಕೆಯೆನಿಸಿದೆ. ನನಗೆ ನಮ್ಮ ಪೂರ್ವಿಕರಲ್ಲಿ ತೈಲಪರಿಂದ ಮಾತ್ರವೇ ಪರಂಪರೆಯ ನೆನಪಿದೆ.

**ಖೊಟ್ಟಿಗದೇವ** : ಅಂದರೆ ನಿಮ್ಮ ತಾತನವರ ತಾತ!

**ವಿಕ್ರಮಾದಿತ್ಯ** : ಹೌದು, ಆ ಹೆಸರಿನವರೇ ನಮ್ಮ ಮಟ್ಟಿಗೆ ನೆನಪಿನಲ್ಲಿ ಉಳಿದಿರುವುದು. ನಮ್ಮ ಕುಮಾರನಿಗೆ ಆದ್ದರಿಂದಲೇ ಆ ಹೆಸರಿಟ್ಟಿದ್ದೇವೆ.

**ಖೊಟ್ಟಿಗದೇವ** : ನಮ್ಮ ಅರಮನೆಯ ಕಡತಗಳ ಭಂಡಾರದಲ್ಲಿ ನಿಮ್ಮ ವಂಶದವರ ಅನುಕ್ರಮದ ಕಡತಗಳೂ ಇದ್ದಿರಬಹುದು. ಏಕೆಂದರೆ ನಮ್ಮ ವಂಶದ ಪ್ರಸಿದ್ಧ ದಂತಿದುರ್ಗರ ವಶಕ್ಕೆ ಅರಮನೆಯು ಅಚ್ಚಳಿಯದೆ, ಹೇಗಿತ್ತೋ ಹಾಗೆಯೇ ಬಂತೆಂದು. ನಮ್ಮ ಹಿರಿಯ ಅಧಿಕಾರಿಗಳು ಹೇಳುತ್ತಾರೆ......... ಲಗ್ನದ •ಕೆಲಸ ಮುಗಿಯಲಿ. ನಿರಾಳವಾಗಿ ಕುಳಿತು ನಮ್ಮ ನಮ್ಮ ವಂಶದ ಮೂಲ ಪುರುಷರ ಇತಿಹಾಸವನ್ನು ಹೆಕ್ಕಿ ತೆಗೆದು

ಪರಿಶೀಲಿಸೋಣ. ಸಾಂದರ್ಭಿಕವಾಗಿ ಈ ಜಕ್ಕಿ ಸುಂದರಿಯ ಹುಟ್ಟು ಪೂರ್ವೋತ್ತರಗಳು, ವಂಶಬೇರುಗಳೂ ಕಾಣಿಸಿಕೊಂಡಾವು.

**ಕರ್ಕದೇವ** : ನಮ್ಮ ದೊಡ್ಡಪ್ಪನವರು ಹೇಳುವಂತೆಯೇ ಮಾಡೋಣ. ಗಜೇಂದ್ರ ಜಕ್ಕಿ ಸುಂದರಿಯವರ ಸಂಬಂಧಗಳು ಬೆಳಕು ಕಂಡಾವು.

**ಖೊಟ್ಟಿಗದೇವ** : ಕರ್ಕ ಮದುವೆಯ ವಿಚಾರದಲ್ಲಿ ಸಂಕೋಚಬೇಡ. ನೀನೂ ನನ್ನ ಸ್ವಂತ ಮಗನಂತೆ ಈ ಚಾಲುಕ್ಯ ಸಂಬಂಧದಿಂದ ರಾಷ್ಟ್ರಕೂಟ ಸಾಮ್ರಾಜ್ಯ ಇನ್ನಷ್ಟು ಗಟ್ಟಿಗೊಳ್ಳುತ್ತದೆ. ನಮ್ಮ ಆಳ್ವಿಕೆಯು ಚಿರಾಯುವಾಗುತ್ತದೆ. ಕೇವಲ ಸಾಮಂತ, ಜೀಗ ಸಂಬಂಧಕ್ಕೂ ಹೆಚ್ಚು ವ್ಯತ್ಯಾಸವಿದೆ. ನಮ್ಮ ಜಕ್ಕಲೆಯ ಬಾಳು ಹಸನಾಗಲೀ ದೇವರು ಮಂಗಳವನ್ನುಂಟು ಮಾಡಲಿ.

**ಕರ್ಕದೇವ** : ದೊಡ್ಡಪ್ಪ ನಿಮ್ಮ ಪ್ರೀತಿ, ಅಭಿಮಾನಗಳಿಗೆ ನಾನೇನು ಮಾಡಲಿ? ಕೃತಜ್ಞತಾ ಭಾವದಿಂದ ನಿಮ್ಮ ಪಾದ ಮುಟ್ಟಿ ನಮಸ್ಕರಿಸಿ, ಮತ್ತೊಮ್ಮೆ ಆಶೀರ್ವಾದ ಬೇಡುತ್ತೇನೆ.

**ಖೊಟ್ಟಿಗದೇವ** : ಮಗು ನಿನ್ನಿಂದ ನಾನೇನನ್ನೂ ಅಪೇಕ್ಷಿಸುವುದಿಲ್ಲ. ನಂಬಿಕೆ ದ್ರೋಹಗಳಿಂದ ದೂರವಾದ ನಿಷ್ಠೆಯನ್ನು ಮಾತ್ರವೇ ಬಯಸುತ್ತೇನೆ.

**ವಿಕ್ರಮಾದಿತ್ಯ** : ನಿಮ್ಮ ಆಶೀರ್ವಾದ ಬಲದಿಂದ ಈ ಲಗ್ನ ಮುಂದಿನ ಸಕಲಾಭೀಷ್ಟ ಸಿದ್ಧಿಗೆ ನಾಂದಿಯಾಗಲಿ ಎಂಬುದು ನಮ್ಮ ಹಾರೈಕೆ. ಇನ್ನು ಅಪ್ಪಣೆ ಕೊಡಿಸುವಂತಾಗಲೀ.

**ಖೊಟ್ಟಿಗದೇವ** : ಭಗವಂತನು ಒಳ್ಳೆಯದನ್ನು ಮಾಡಲಿ. ಲಗ್ನಾದಿ ಶುಭ ಕಾರ್ಯಗಳು ಸುಸೂತ್ರವಾಗಿ ಮುಂದುವರಿಯಲಿ...

**ವಿಕ್ರಮಾದಿತ್ಯ** : ಸನ್ನಿಧಾನದವರು ಸಾಮಂತರ ಮಗನನ್ನು ಅಳಿಯನೆಂದು ಒಪ್ಪಿಕೊಂಡು ಮದುವೆಗೆ ಮುಂದೆ ಬಂದುದು ಸಾಮಾನ್ಯ ವಿಷಯವಲ್ಲ. ನಿಮ್ಮ ಹೃದಯ ವೈಶಾಲ್ಯಕ್ಕೆ ಅದು ದ್ಯೋತಕವಾಗಿದೆ.

**ಖೊಟ್ಟಿಗದೇವ** : ನಮ್ಮನ್ನು ಹೆಚ್ಚಾಗಿ ಹೊಗಳಬೇಡಿ ಸಾಮಂತರೇ.

**ವಿಕ್ರಮಾದಿತ್ಯ** : ಇದರಲ್ಲಿ ಹೊಗಳಿಕೆ ಏನಿದೆ?.........ಸಾಮ್ರಾಟರಾಗಿ ಮೆರೆದ ನಾವು ಇಂದು ಸಾಮಂತರಾಗಿ ಬಾಳುತ್ತಿರುವ ನೋವು ಇದೆಯಾದರೂ, ರಾಷ್ಟ್ರಕೂಟರಿಗೆ ಸಾಮಂತರಾಗಿದೇವೆಂಬುದೇ ಒಂದು ಸಮಾಧಾನ.

**ಖೊಟ್ಟಿಗದೇವ** : (ನಿಟ್ಟುಸಿರು) ಯಾರು ಸಾಮ್ರಾಟರೋ, ಯಾರು ಸಾಮಂತರೋ. ಕಾಲವೇ ಎಲ್ಲವನ್ನೂ ತಲೆ ಕೆಳಗು ಮಾಡಿಬಿಡುತ್ತದೆ.........ನಮಗಂತೂ ನೆಮ್ಮದಿಗೆ ಅವಕಾಶವಿಲ್ಲದಂತಾಗಿದೆ.

ವಿಕ್ರಮಾದಿತ್ಯ : ಇದೇತರ ಮಾತು? ನೆಮ್ಮದಿಗೆ ಭಂಗವೇನಾಗಿದೆ?

ಖೊಟ್ಟಿಗದೇವ : ಹೊರಗಿನ ಶತ್ರುಗಳೂ, ಒಳಗಿನ ಶತ್ರುಗಳೂ ಕತ್ತಿ ಮಸೆಯುತ್ತಾ ಹೊಂಚಿ ಕಾಯುತ್ತಿದ್ದಾರೆ. ನಮ್ಮ ಸಿಂಹಾಸನ ಸಡಿಲವಾಗಿ ಅಲುಗಾಡದಂತೆ ಕಾಪಾಡಿಕೊಡಬೇಕಾಗಿದೆ ನಿಮಗೆ ಸಾಮಂತರೇ. ಇದನ್ನು ಮರೆಯಬೇಡಿ. ಪರಮಾರರಿಂದ, ಗಂಗರಿಂದ ನಮಗೆ ಅಪಾಯ ತಪ್ಪಿದ್ದಲ್ಲ. ಯಾವ ಕ್ಷಣದಲ್ಲಾದರೂ ಹದ್ದುಗಳಂತೆ ಎರಗಿ ಬಿಡಬಹುದು.

ವಿಕ್ರಮಾದಿತ್ಯ : ಇಂತಹ ವಿಚಾರಗಳಿಂದ ತಲೆ ಕೆಡಿಸಿಕೊಳ್ಳಬೇಡಿ ಆಗುವುದು ಆಗುವ ಕಾಲಕ್ಕೆ ಆಗಿಯೇ ಆಗುತ್ತದೆ. ನಾವು ಖಂಡಿತವಾಗಿ ರಾಷ್ಟ್ರಕೂಟ ಸಿಂಹಾಸನವನ್ನು ರಕ್ಷಿಸುತ್ತೇವೆ. ಸಮರ್ಥ ಪ್ರಭುಗಳೇ ಏರಿ ಉಳಿಯುವಂತೆ ಮಾಡುತ್ತೇವೆ.

ಕರ್ಕದೇವ : ದೊಡ್ಡಪ್ಪ ಅದೆಲ್ಲವನ್ನೂ ಈಗೇಕೆ ನೆನಪಿಸಿಕೊಳ್ಳುತ್ತೀರಿ. ಸಾಮಂತ ವಿಕ್ರಮಾದಿತ್ಯರು ಇರುವಾಗ ಹೆದರಿಕೆಗೆ ಅವಕಾಶವೇ ಇಲ್ಲ. ನೀವು ನಿಶ್ಚಿಂತೆಯಿಂದಿರಿ. ಹೋಗಿಬರುತ್ತೇವೆ ದೊಡ್ಡಪ್ಪ.

ವಿಕ್ರಮಾದಿತ್ಯ : ಅಪ್ಪಣೆಯಾಗಲೀ ಹೋಗಿ ಬರುತ್ತೇವೆ.

..............................ಮೌನ..........................

ಕರ್ಕದೇವ : ಏನು ವಿಕ್ರಮಾದಿತ್ಯರೇ ಇಷ್ಟೊಂದು ಗಾಢವಾಗಿ ಆಲೋಚಿಸುತ್ತಿದ್ದೀರಿ? ...........ನಮಗೆ ತಿಳಿಸಬಾರದ ವಿಷಯಗಳೇನಾದರೂ ಇವೆಯೇ!

ವಿಕ್ರಮಾದಿತ್ಯ : ಛೆ! ಛೆ! ನಿಮಗೆ ಹೇಳಬಾರದ ರಹಸ್ಯ ಆಲೋಚನೆಗಳು ಏನು ತಾನೇ ಇದ್ದಾವು........... ನಿಮ್ಮ ದೊಡ್ಡಪ್ಪನವರನ್ನು ಕುರಿತೇ ಆಲೋಚಿಸುತ್ತಿದ್ದೆ.

ಕರ್ಕದೇವ : ಅಂದರೆ ನಮ್ಮ ದೊಡ್ಡಪ್ಪನವರ ವ್ಯಕ್ತಿತ್ವ ನಿಮ್ಮನ್ನು ಗಾಢವಾಗಿ ತಟ್ಟಿರಬೇಕು.

ವಿಕ್ರಮಾದಿತ್ಯ : ಒಂದು ರೀತಿಯಿಂದ ನೀವು ಊಹಿಸಿರುವುದು ನಿಜ.

ಕರ್ಕದೇವ : (ಅನುಮಾನದಿಂದ) ಹಾಗಾದರೆ ನಮಗೆ ನಿಮ್ಮ ನೆರವು..........ಸಿಂಹಾಸನ?!

ವಿಕ್ರಮಾದಿತ್ಯ : ಇಷ್ಟಕ್ಕೇ ಗಾಬರಿಯಾಗುತ್ತಿರೇಕೆ? ಖೊಟ್ಟಿಗ ದೇವರು ನಿಜವಾಗಿಯೂ ಶುದ್ಧಾಂತ; ಕರಣರು............ಆದರೆ ಆಳಬೇಕಾದ ಪ್ರಭುಗಳಿಗೆ ಅಂತಃಕರಣವೊಂದೇ ಇದ್ದರೆ ಸಾಲದು. ಅಂತಃಕರಣವನ್ನು ಯಾರಿಗೆ ಧಾರೆಯೆರೆಯಬೇಕು ಎಂಬ ವಿವೇಕ, ಜೊತೆಗೆ ರಾಷ್ಟ್ರವನ್ನು ಶತ್ರುಗಳಿಂದ

ಸ್ವತಃ ರಕ್ಷಿಸಿಕೊಳ್ಳಬಲ್ಲೆನೆಂಬ ಆತ್ಮವಿಶ್ವಾಸ, ಭುಜಬಲಪರಾಕ್ರಮಗಳೂ ಬೇಕಾಗುತ್ತವೆ.

ಕರ್ಕದೇವ : ವಿಕ್ರಮಾದಿತ್ಯರೇ ದೊಡ್ಡಪ್ಪನ ಹೊರ ನಡಾವಳಿಯಿಂದಲೇ ಎಲ್ಲವನ್ನೂ ನಿಶ್ಚಯಿಸಿಬಿಡಬೇಡಿ. ಹೊರಗೆ ಕಾಣಿಸಿಕೊಳ್ಳುವುದಕ್ಕಿಂತ ಒಳಗೆ ಇನ್ನಷ್ಟು ಆಳವಿರಬಹುದಲ್ಲವೇ?................ ನಮಗೂ ನಮ್ಮ ದೊಡ್ಡಪ್ಪನಿಗೆ ದ್ರೋಹ ಬಗೆಯುವುದು ಸರಿಯಲ್ಲವೆನಿಸುತ್ತಿದ್ದರೂ ರಾಷ್ಟ್ರಭದ್ರತೆಗೆ ಅದನ್ನು ಮಾಡದೆ ವಿಧಿಯಿಲ್ಲ......... ದಯವಿಟ್ಟು ನಾವಂದುಕೊಳ್ಳುತ್ತಿರುವಂತೆ ಆಗುವ ಪ್ರಯತ್ನಗಳಿಂದ ವಿಮುಖರಾಗಬೇಡಿ.

ವಿಕ್ರಮಾದಿತ್ಯ : ನಮ್ಮ ಮಾತಿನ ಮೇಲೆ ಭರವಸೆಯಿರಲಿ ಕರ್ಕ ದೇವರೇ.

ಕರ್ಕದೇವ : ಅಷ್ಟು ಸಾಕು................ಬನ್ನಿ ಆದಷ್ಟು ಬೇಗ ಈ ಲಗ್ನ ಕೆಲಸಗಳನ್ನು ಮುಗಿಸಿಬಿಡುವ.

ವಿಕ್ರಮಾದಿತ್ಯ : ಆಗಬಹುದು. ನಾನಿಂದೇ ಹೊರಟು ಬಿಡುತ್ತೇನೆ. ದಿಬ್ಬಣದೊಂದಿಗೆ ಮತ್ತೆ ತಮ್ಮನ್ನು ಕಾಣುತ್ತೇನೆ. ಕೂಡಲೇ ಎಲ್ಲರಿಗೂ ಆಹ್ವಾನ ಪತ್ರಗಳನ್ನು ಕಳಿಸಬೇಕು.

ಕರ್ಕದೇವ : ಮಾನ್ಯಖೇಟದ ಮಹಾಜನತೆ ಹಿಂದೆಂದೂ ಕಾಣದ ವಿವಾಹೋತ್ಸವ ಸಂಭ್ರಮವನ್ನು ಕಾಣುವಂತೆ ಪ್ರಯತ್ನಿಸುತ್ತೇನೆ.

ವಿಕ್ರಮಾದಿತ್ಯ : ನೀವು ನಿಶ್ಚಿಂತೆಯಿಂದ ಮಗಳ ವಿವಾಹ ವ್ಯವಸ್ಥೆಯನ್ನು ಮಾಡಿಕೊಳ್ಳಿ.........ನಾವಿನ್ನು ಬರುತ್ತೇವೆ.

– – ನಿರೂಪಣೆ – –

ವಿಕ್ರಮಾದಿತ್ಯ ಕರ್ಕದೇವರುಗಳು ನಿಶ್ಚಯಿಸಿದಂತೆ ವಿಭವ ಸಂವತ್ಸರ ಫಾಲ್ಗುಣ ಬಹುಳ ಪಂಚಮಿಯ ದಿನ ರಾಷ್ಟ್ರಕೂಟ ರಾಜಕುಮಾರಿ ಜಯಲಕ್ಷ್ಮಿ ಜಕ್ಕಿಲೂಗು ಚಾಲುಕ್ಯ ಕುಮಾರ ತೈಲಪನಿಗೂ ವಿಧಿಪೂರ್ವಕವಾಗಿ ವಿವಾಹ ಮಹೋತ್ಸವವು ಜರುಗಿತು. ಊರೆಲ್ಲ ಉಂಡು ಕೊಂಡಾಡಿತು. ನೂತನ ದಂಪತಿಗಳು ಭವಿಷ್ಯದ ಕನಸುಗಳಲ್ಲಿ ವಿಹರಿಸಿದರು.

OO

# ದೃಶ್ಯ - ೨

**ನಿರೂಪಣೆ-** (ಇತಿಹಾಸಕಾರ)

[ಕಳೆದುಕೊಂಡ ಚಾಲುಕ್ಯ ಸಾಮ್ರಾಜ್ಯವನ್ನು ಮತ್ತೆ ಪಡೆಯುವ ಹುನ್ನಾರದ ಹಿನ್ನೆಲೆಯಲ್ಲಿ ರಾಷ್ಟ್ರಕೂಟ ಪ್ರಭು ಖೊಟ್ಟಿಗರ ಸೋದರನ ಮಗ ಕರ್ಕದೇವನ ಮಗಳನ್ನು ವಿಕ್ರಮಾದಿತ್ಯರು ತಮ್ಮ ಮಗ ತೈಲಪನಿಗೆ ವಿವಾಹ ಮಾಡಿಸುತ್ತಾರೆ. ಇದರ ಸುಳಿವಿಲ್ಲದ ಕರ್ಕದೇವ ಚಾಲುಕ್ಯರ ನೆರವಿನಿಂದ ತಾನೇ ಸಿಂಹಾಸನವೇರುವ ಕನಸಿನ ಕುದುರೆಯ ಜೀನೇರಿ ವಿಹರಿಸುತ್ತಾನೆ. ಚಾಲುಕ್ಯರ ಸೊಸೆಯಾಗಿ ಬಂದ ಜಯಲಕ್ಷ್ಮಿ, ತೈಲಪನನ್ನು ಪತಿಯಾಗಿ ಪಡೆದು ಸಂತಸ, ಸಂಭ್ರಮಗಳಲ್ಲಿ ಮುಳುಗಿ ಹೋಗಿದ್ದಾಳೆ]

**ತೈಲಪ** : ದೇವಿ, ನಾವಿಬ್ಬರೂ ಪರಸ್ಪರ ಪರಿಚಯವಿಲ್ಲದೆ ಈ ವಿವಾಹ ಬಂಧನದಲ್ಲಿ ಬೆಸೆದುಕೊಂಡಿದ್ದೇವೆ. ನನ್ನೊಡನೆ ಲಗ್ನವೆಂದಾಗ ನಿನಗೆ ವಿವಾಹವಾಗಲಿರುವ ಯುವಕನು ಯಾರಿರಬಹುದೆಂಬ ಕುತೂಹಲವೂ ಇರಲಿಲ್ಲವೇ?

**ಜಯಲಕ್ಷ್ಮಿ** : ವಿವಾಹವಾಗಿ ಈ ಮನೆಗೆ ಬಂದು ಸೇರಿದ್ದೇನೆ. ಈಗ ಅದರ ವಿಚಾರವಾಗಿ ಯೋಚಿಸುವುದೇಕೆ?

**ತೈಲಪ** : ಆದರೂ ಹರೆಯದ ಈ ಪ್ರಾಯದಲ್ಲಿ ಕುತೂಹಲ ಸಹಜವಲ್ಲವೇ?

**ಜಯಲಕ್ಷ್ಮಿ** : ಕುತೂಹಲದಿಂದ ಏನಾಗುತ್ತದೆ. ಹಿರಿಯರು ನಿಶ್ಚಯಿಸಿರುವಾಗ, ನಮ್ಮೊಳಿತು ಕೆಡುಕುಗಳನ್ನು ಆಲೋಚಿಸಿಯೇ ಇರುತ್ತಾರೆ.

**ತೈಲಪ** : ಅದು ಸಹಜವೇ! ಆದರೂ................

**ಜಯಲಕ್ಷ್ಮಿ** : ಇಷ್ಟೊಂದು ಒತ್ತಿ ಕೇಳುತ್ತಿದ್ದೀರಿ ಏಕೆ?..............ನನ್ನ ವಿಷಯವಿರಲಿ, ನಿಮಗೇನಾದರೂ ಕುತೂಹಲವಿತ್ತೆ? ನೀವು ಮದುವೆಯಾಗುವ ಹೆಣ್ಣು ಹೇಗಿರಬಹುದೆಂದು ಯೋಚಿಸಿದ್ದೀರೇನು?

ತೈಲಪ : ನನಗೇನೋ ನೋಡಬೇಕೆಂಬ ಕುತೂಹಲವಿತ್ತು. ಆದರೆ ನನ್ನ ತಂದೆ ತಾಯಿಯರು ಪರಸ್ಪರರನ್ನು ನೋಡಿದ್ದು ಮದುವೆ ಮಂಟಪದಲ್ಲಿಯೇ ಎಂದು ತಿಳಿದು, ನನಗೆ ಬಾಯಿ ಬಿಟ್ಟು ಕೇಳಲು ಸಂಕೋಚವಾಯಿತು.

ಜಯಲಕ್ಷ್ಮಿ : ನಿಮಗೆ ಸಂಕೋಚವೆನಿಸಿ ನೀವು ಕೇಳಲಿಲ್ಲ. ಆದರೆ ನನ್ನ ಪರಿಸ್ಥಿತಿಯೇ ಬೇರೆಯಾಗಿತ್ತು. ತೀರ ಚಿಕ್ಕ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಂತಾಗಿದ್ದೆ. ತಂದೆಯವರನ್ನು ಯಾವುದಕ್ಕೂ ಕೇಳುವ ಧೈರ್ಯವಿರಲಿಲ್ಲ. ಹಾಗಾಗಿ ಅವರು ಆದೇಶಿಸಿದ್ದನ್ನು ಸ್ವೀಕರಿಸುವುದಷ್ಟನ್ನೇ ಕಲಿತಿದ್ದೇನೆ.

ತೈಲಪ : ಅದು ನಿನ್ನ ವಿನಯ ವಂತಿಕೆ. ಹಿರಿಯರ ಬಗ್ಗೆ ಇರುವ ಗೌರವವನ್ನು ಸೂಚಿಸುವುದಾದರೂ, ಒಂದು ವೇಳೆ ನಿನಗೆ ಯೋಗ್ಯನಲ್ಲದ ವರನಾದರೆ?

ಜಯಲಕ್ಷ್ಮಿ : ನಾನು ಯಾವಾಗಲೂ ವಿಧಿಯನ್ನು, ನನ್ನ ಹಣೆ ಬರಹವನ್ನು ನಂಬಿದವಳು. ಆದ್ದರಿಂದ ನನ್ನ ಪಾಲಿಗೆ ಏನೇ ಬಂದರೂ ಸಂತೋಷದಿಂದ ಸ್ವೀಕರಿಸುತ್ತೇನೆ.

ತೈಲಪ : ಜಯಾ ನೀನು ರಾಜಕುಮಾರಿ. ನಾನು ಸಾಮಂತಕುಮಾರ. ನಮ್ಮಿಬ್ಬರ ನಡುವಿನ ಈ ಅಂತರ ನಿನ್ನನ್ನು ಬಾಧಿಸುವುದಿಲ್ಲವೆ?

ಜಯಲಕ್ಷ್ಮಿ : ರಾಜ್ಯ, ರಾಜತ್ವಗಳು ಯಾರಿಗೂ ಶಾಶ್ವತವಲ್ಲ. ಕೈಕೈ ಬದಲಾಯಿಸುತ್ತಲೇ ಇರುತ್ತವೆ. ಕಡೆತನಕ ಉಳಿಯುವುದು ನಮ್ಮ ಗುಣ ಸ್ವಭಾವಗಳು ಮತ್ತು ಮನುಷ್ಯತ್ವ ಮಾತ್ರ. ಆದ್ದರಿಂದ ಅದರ ಬಗ್ಗೆ ನಾನು ಯೋಚಿಸುವುದೇ ಇಲ್ಲ. ಹಾಗೆ ಯೋಚಿಸದಿರುವುದೇ ಈಗ ಒಳ್ಳೆಯದೆನಿಸಿದೆ.

ತೈಲಪ : ಅದು ಹೇಗೆ?

ಜಯಲಕ್ಷ್ಮಿ : ನಿಮ್ಮ ಮಾತೃಶ್ರೀ ಅವರ ಮಾರ್ಗದರ್ಶನವೇ ಅದಕ್ಕೆ ಕಾರಣ.

ತೈಲಪ : ಓ (ನಗುತ್ತಾ) ನನ್ನವ್ವೆ ಆಗಲೇ ಸೊಸೆಗೆ ಗೀತೋಪದೇಶವನ್ನು ಪ್ರಾರಂಭಿಸಿ ಬಿಟ್ಟರೇನು?

ಜಯಲಕ್ಷ್ಮಿ : ಸುಮ್ಮನೆ ನಗೆಯಾಡಬೇಡಿ.

ತೈಲಪ : (ನಾಟಕೀಯವಾಗಿ) ದೇವಿಯವರೇ, ನಮ್ಮ ಮಾತೃಶ್ರೀಯವರ ಉಪದೇಶದ ಸಾರವೇನೆಂಬುದನ್ನಾದರೂ ತಿಳಿಸಿಕೊಡಿ.

**ಜಯಲಕ್ಷ್ಮಿ** : (ಗಂಭೀರವಾಗಿ) ಕೈ ಹಿಡಿದವನ ಸಿದ್ಧಿಗೆ ಕಂಕಣ ಬದ್ಧಳಾಗಿ ನೆರವು ನೀಡುವುದರಲ್ಲಿಯೇ ಅಖಂಡ ಸುಖವಿದೆ ಎಂದು ಹೇಳಿ ತಾವು ಬಾಳು ಸಾಗಿಸಿದ ರೀತಿಯನ್ನು ವಿವರಿಸಿದರು.

**ತೈಲಪ** : ನೀನು ರಾಜಕುಮಾರಿ ಎಂಬುದನ್ನು ಮರೆತಿರಬೇಕು.

**ಜಯಲಕ್ಷ್ಮಿ** : ಹಾಗೇಕೆ ಹೇಳುತ್ತೀರಿ. ಅತ್ತೆಯವರೂ ರಾಜಕುಮಾರಿಯೇ ಆಗಿದ್ದರಲ್ಲವೇ? ನೀವು ಸಾಮಂತ ಕುಮಾರರೆಂದು ಪದೇ ಪದೇ ಏಕೆ ಕರೆದುಕೊಳ್ಳುತ್ತೀರಿ.

**ತೈಲಪ** : ಮತ್ತೇನೆಂದು ಕರೆದುಕೊಳ್ಳಲಿ?

**ಜಯಲಕ್ಷ್ಮಿ** : ನೀವೂ ಕೂಡಾ ವಾಸ್ತವವಾಗಿ ರಾಜಕುಮಾರರೇ ಎಲ್ಲವೂ ಅಸ್ತಿತ್ವದ ರಾಜವಂಶಗಳೇ.

**ತೈಲಪ** : ನಿನಗೆ ಈ ರಾಜವಂಶಗಳ ಇತಿಹಾಸವೆಲ್ಲ ತಿಳಿದಿದೆಯೇನು?

**ಜಯಲಕ್ಷ್ಮಿ** : ಓ (ಹೆಮ್ಮೆಯಿಂದ) ನನ್ನ ತಾತನವರು ನಿರುಪಮ ದೇವರು ನನಗೆ ನಮ್ಮ ನಾಡಿನ ರಾಜವಂಶಗಳ ಕಥೆಗಳನ್ನೆಲ್ಲ ಹೇಳಿದ್ದಾರೆ. ಅವರ ಏಳು ಬೀಳುಗಳ ಇತಿಹಾಸವನ್ನೆಲ್ಲಾ ವಿವರಿಸಿದ್ದಾರೆ. ಅವರು ಎಂದೂ ಅಧಿಕಾರದಾಹ, ರಾಜ್ಯದಾಹ ಹೊಂದಿದವರಲ್ಲ. ಲಭ್ಯವಾದುದರಿಂದಲೇ ತೃಪ್ತಿ ಪಡೆಯುವುದನ್ನು ಕಲಿತಿದ್ದರು. ಅದನ್ನೇ ಹೇಳುತ್ತಿದ್ದರು.

**ತೈಲಪ** : ನಿಮ್ಮ ತಂದೆಯವರಿಗೂ ಒಳ್ಳೆಯ ಪಾಠವೇ ಲಭಿಸಿರಬೇಕು!

**ಜಯಲಕ್ಷ್ಮಿ** : (ನಿಟ್ಟುಸಿರು) ಹುಂ!

**ತೈಲಪ** : ಅದೇಕೆ ದೇವಿ ಹಾಗೆ ನಿಟ್ಟುಸಿರು?

**ಜಯಲಕ್ಷ್ಮಿ** : ನಿಟ್ಟುಸಿರಲ್ಲದೆ ಮತ್ತೇನು ಮಾಡಲಿ. ನಮ್ಮ ತಾತನವರ ಹಿತವಚನಗಳು ನನ್ನ ತಂದೆಯವರಿಗೆ ಪಥ್ಯವಾಗಲಿಲ್ಲ. ಮೊದಲಿನಿಂದಲೂ ಅವರಿಗೆ ಸಿಂಹಾಸನವೇರುವ ಕನಸು; ಆಸೆ.

**ತೈಲಪ** : ಅವರನ್ನು ತಿದ್ದಿ ಬುದ್ಧಿವಾದ ಹೇಳುವುದಾಗಲಿಲ್ಲಲ್ವೆ?

**ಜಯಲಕ್ಷ್ಮಿ** : ಹೇಳುವ ಹಿರಿಯರಾದರೂ ಯಾರಿದ್ದರು? ಹೆಚ್ಚೆಂದರೆ ದೊಡ್ಡಪ್ಪನವರು ಹೇಳಬಹುದಿತ್ತು. ಹೇಳುವ ಅಧಿಕಾರವೂ ಇತ್ತು.

**ತೈಲಪ** : ಮತ್ತೆ ಹೇಳ ಬಹುದಿತ್ತಲ್ಲ?

**ಜಯಲಕ್ಷ್ಮಿ** : ಹೇಳುವುದಕ್ಕೆ ಮೊದಲು ಹೇಳುವ ಯೋಗ್ಯತೆಯನ್ನು ಉಳಿಸಿಕೊಂಡಿರಬೇಕಲ್ಲ? ದೊಡ್ಡಪ್ಪನವರೇ ಕ್ರಮ ಮೀರಿ.

ಅನ್ಯಾಯದಿಂದ ರಾಜ್ಯ, ಸಿಂಹಾಸನಗಳನ್ನು ಕಸಿದುಕೊಂಡಿರುವಾಗ ಹೇಳುವುದಕ್ಕೆ ಮನಸ್ಸು ಬರುವುದೇ?

ತೈಲಪ : ಅನ್ಯಾಯ ಹೇಗೆ? ಮತ್ತಾರಿಗೆ ಬರಬೇಕಿತ್ತು ಸಿಂಹಾಸನ.?

ಜಯಲಕ್ಷ್ಮಿ : ನನ್ನ ಹಿರಿಯ ತಾತ ಖ್ಯಾತಿವೆತ್ತ ಕನ್ನರದೇವರ ಜ್ಯೇಷ್ಠ ಪುತ್ರ ಗೋವಿಂದರ ಮಗ ಇಂದ್ರನಿಗೇ ಸಲ್ಲಬೇಕಿತ್ತು ಈ ಸಿಂಹಾಸನ ಗಬ್ಬೀಂದ್ರರ ಬಲ. ಜಕ್ಕಿ ಸುಂದರಿಯ ತಂತ್ರಗಳು ಅವರಲ್ಲಿ ಅಧಿಕಾರ ಲಾಲಸೆಯನ್ನು ಬಿತ್ತಿತು.

ತೈಲಪ : ದೇವಿ, ನಿಜವಾಗಿಯೂ ನಿನ್ನನ್ನು ನನ್ನ ಹೆಂಡತಿಯನ್ನಾಗಿ ಪಡೆದು ಅದೃಷ್ಟ ಮಾಡಿದ್ದೇನೆ. ಏನೂ ಅರಿಯದವಳಂತೆ ಕಾಣಿಸಿಕೊಳ್ಳುತ್ತಲೇ ಎಷ್ಟೊಂದು ರಾಜಕೀಯ ವಿಷಯಗಳನ್ನು ತಿಳಿದುಕೊಂಡಿದ್ದೀಯ.

ಜಯಲಕ್ಷ್ಮಿ : ಅತ್ತೆಯವರ ಅರಿವಿನ ಮುಂದೆ ನನ್ನದೇನೂ ಇಲ್ಲ.............. ರಾಜಕೀಯ ದಾಹ ಮನುಷ್ಯನನ್ನು ಎಷ್ಟು ಸಣ್ಣವನನ್ನಾಗಿಸಿ ಬಿಡುತ್ತದೆ!

ತೈಲಪ : ರಾಜಕೀಯವೆಂದ ಮೇಲೆ ಆಸೆ, ದುರಾಸೆ, ಸ್ವಾರ್ಥ, ಅಧಿಕಾರ ಇವೆಲ್ಲವೂ ಅನಿವಾರ್ಯ. ಪ್ರತಿಯೊಬ್ಬರಿಗೂ ಅಧಿಕಾರಲಾಲಸೆ ಜನ್ಮತಃ ಅಂಟಿ ಬಂದ ಗುಣವಾಗಿದೆ. ಯಾರಿಗೂ ತಪ್ಪಿದ್ದಲ್ಲ.

ಜಯಲಕ್ಷ್ಮಿ : ಅಂದರೆ? .............ನಿಮಗೂ ಅದು ಸಹಜವೇ?

ತೈಲಪ : ಸದ್ಯಕ್ಕಂತೂ ಇಲ್ಲ. ಆದರೆ ಕಾಲಾಂತರದಲ್ಲಿ ಏನಾಗುವುದೋ ಹೇಳಲಾರೆ. ರಾಜವಂಶಕ್ಕೆ ಸೇರಿದವನೇ ಅಲ್ಲವೇ? ರಾಜನಾಗಿ ಸಾಮ್ರಾಜ್ಯ ಕಟ್ಟುವ ಕನಸು ಕಾಣುವುದು ತಪ್ಪಾಗುವುದೇನು?

ಜಯಲಕ್ಷ್ಮಿ : ತಪ್ಪು ನೆಪ್ಪುಗಳನ್ನು ವಿಮರ್ಶಿಸುವುದಕ್ಕೆ ನಾನೆಷ್ಟರವಳು.

ತೈಲಪ : ನಾನೇನಾದರೂ ಚಕ್ರವರ್ತಿಯಾಗುವ ಕನಸಿನ ಸಾಕ್ಷಾತ್ಕಾರಕ್ಕೆ ಯತ್ನಿಸಿದರೆ, ನೀನು ಬೇಸರಗೊಳ್ಳುವೆಯೇನು?

ಜಯಲಕ್ಷ್ಮಿ : ನಿಮಗೆ ವಿವೇಕವಿದೆ. ನೀವು ಏನನ್ನೂ ಯೋಚಿಸಿಯೇ ಮಾಡುತ್ತೀರಿ ಎಂಬ ನಂಬಿಕೆ ಇದೆ. ಅಲ್ಲದೆ ಅತ್ತೆಯವರಿಂದ ನಾನು ಕಲಿತ ಪಾಠದಂತೆ ನಿಮ್ಮ ಶ್ರೇಯಸ್ಸು, ಅಭಿವೃದ್ಧಿಯ ಹಾದಿಯಲ್ಲಿ, ನಿಮ್ಮ ಹೆಜ್ಜೆಗಳನ್ನು ಹಿಂಬಾಲಿಸುತ್ತೇನೆ.

ತೈಲಪ : ಕೃತಾರ್ಥನಾದೆ ದೇವಿ.............ನನ್ನ ಮೊದಲ ಕೆಲಸ ಏನು ಗೊತ್ತೆ?

ಜಯಲಕ್ಷ್ಮಿ : ನೀವು ಹೇಳಿದರೆ ತಿಳಿದುಕೊಳ್ಳುತ್ತೇನೆ.

ತೈಲಪ : ನಮ್ಮ ಆಡಳಿತಕ್ಕೆ ಸೇರಿದ ಕಿಸುಕಾಡಿನಲ್ಲಿ ಸ್ವಲ್ಪ ದಿವಸ ಯಾರ ಆತಂಕವೂ ಇಲ್ಲದಂತೆ ಇದ್ದು, ಅಲ್ಲಿಯೇ ಶಸ್ತ್ರ ವಿದ್ಯಾಭ್ಯಾಸವನ್ನು ಮುಂದುವರೆಸಿ ಕತ್ತಿ ವರಸೆಯಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆಯಬೇಕೆಂದಿದ್ದೇನೆ.

ಜಯಲಕ್ಷ್ಮಿ : ಬಹಳ ಸಂತೋಷ. ನಿಮ್ಮ ಶಸ್ತ್ರಾಸ್ತ್ರ ಬಲ ಸಂಪನ್ನತೆಗಳನ್ನು ನೋಡಬೇಕೆಂದು ಕಣ್ಣು ಕಾಯಾಗಿಸಿ ಕಾಯುತ್ತಿದ್ದೇನೆ.

ತೈಲಪ : ಆ ದಿನಗಳು ಇಷ್ಟರಲ್ಲಿಯೇ ಬರಲಿವೆ.

ಜಯಲಕ್ಷ್ಮಿ : ನಿಮ್ಮ ಶಸ್ತ್ರ ವಿದ್ಯಾಗುರುಗಳು ಯಾರೆಂದು ಕೇಳಬಹುದೇ?

ತೈಲಪ : ಯಾರೇನು ದೇವಿ. ನನ್ನ ಸೋದರ ಮಾವ. ಅಮ್ಮುಗಿಯವರೇ ನನ್ನ ಜೊತೆಗಿದ್ದು ಕಲಿಸಿಕೊಡುತ್ತಾರೆ.

ಜಯಲಕ್ಷ್ಮಿ : ಇದಕ್ಕಿಂತ ಹೆಚ್ಚಿನ ಸೌಭಾಗ್ಯವಿದೆಯೆ?

ತೈಲಪ : ದೇವಿ ಅಲ್ಲಿ ಇರುವಷ್ಟು ಕಾಲ ಹಿರಿಯರಿಂದ ಆಪ್ತರಿಂದ ದೂರವಿರಬೇಕಾಗುತ್ತದೆ. ನಿಮಗೆ ಇದರಿಂದ ಬೇಸರವಿಲ್ಲ ತಾನೇ?

ಜಯಲಕ್ಷ್ಮಿ : ನನಗೇನು ಬೇಸರ ಸ್ವಾಮಿ, ಹಿರಿಯರೆಲ್ಲರಿಂದ ಅಪ್ಪಣೆ ಪಡೆದು ತಾನೇ ಹೋಗುತ್ತಿರುವುದು! ಅಲ್ಲದೆ ನಿಮ್ಮೊಡನೆ ನಿಮಗೆ ಹತ್ತಿರವಾಗಿ ಇರುವ ಅವಕಾಶದ ಜೊತೆಗೆ ನಿಮ್ಮನ್ನು ಇನ್ನಷ್ಟು ತಿಳಿದುಕೊಳ್ಳಲು ಅನುಕೂಲ ಲಭಿಸುತ್ತದೆ.

ತೈಲಪ : ಹಾಗಾದರೆ ಇನ್ನೆರಡು ದಿನಗಳಲ್ಲಿ ಹೊರಡಬೇಕಾಗುತ್ತದೆ. ಪ್ರಯಾಣದ ಸಿದ್ಧತೆ ಮಾಡಿಕೋ ದೇವಿ.

ಜಯಲಕ್ಷ್ಮಿ : ಹಾಗೆಯೇ ಆಗಲಿ

– – ವಿರಾಮ – –

ಜಯಲಕ್ಷ್ಮಿ : ಇದೇನು ಸ್ವಾಮಿ ಹೀಗೆ ತಲೆ ಮೇಲೆ ಕೈ ಹೊತ್ತು ಗಾಢವಾಗಿ ಯೋಚಿಸುತ್ತ ಕುಳಿತು ಬಿಟ್ಟರಲ್ಲ.

ತೈಲಪ : ಜಕ್ಕಲೆ ಒಮ್ಮೊಮ್ಮೆ ಮನಸ್ಸಿನಲ್ಲಿ ಏನೇನೋ ಅಸಂಬದ್ಧ ಆಲೋಚನೆ ಧುತ್ತನೆ ಮೂಡಿ ಬರುತ್ತದೆ............ನನಗೊಂದೂ ಸ್ಪಷ್ಟವಾಗುವುದಿಲ್ಲ. ಹಾಗೇಕೆ ಆಗುತ್ತಿದೆ ಎಂಬುದಕ್ಕೆ ಕಾರಣವೂ ಹೊಳೆಯುವುದಿಲ್ಲ.

ಜಯಲಕ್ಷ್ಮಿ : ಅದೆಲ್ಲವನ್ನೂ ಬದಿಗಿಟ್ಟು ನೀವು ಸಾಧಿಸಬೇಕೆಂದು ಹೊರಟಿರುವ ಗುರಿಯ ಕಡೆಗಷ್ಟೇ ಗಮನವಿರಲಿ.

ತೈಲಪ : ಗುರಿ!............ನನ್ನ ಗುರಿ ಏನೆಂದು ಹೇಳಿದರೆ ನೀನು ನನ್ನನ್ನು ಸ್ವಾರ್ಥಿ, ಮಹತ್ವಾಕಾಂಕ್ಷಿ, ದುರಾಸೆಯವನು ಎಂದುಕೊಳ್ಳುತ್ತಿ.

ಜಯಲಕ್ಷ್ಮಿ : ನೀವು ಹಾಗೇಕೆ ಭಾವಿಸುತ್ತೀರಿ?

ತೈಲಪ : ದೇವಿ ಮೊದಲಿಗೆ ನನ್ನನ್ನು ಆದರ್ಶದ ಕಣ್ಣುಗಳಿಂದ ನೋಡುವುದನ್ನು ಬಿಡು. ನಾನೂ ಒಬ್ಬ ಮನುಷ್ಯ. ಮನುಷ್ಯ ಸಹಜವಾದ ಛಲ, ಬಲ, ಆಸೆ, ಆಕಾಂಕ್ಷೆಗಳನ್ನು ಎದೆಯಲ್ಲಿ ತುಂಬಿಕೊಂಡವನು.

ಜಯಲಕ್ಷ್ಮಿ : ಇದೆಲ್ಲವನ್ನು ನನಗೇಕೆ ಹೇಳುತ್ತಿದ್ದೀರಿ? ನಿಮ್ಮ ವ್ಯಕ್ತಿತ್ವ, ನಡತೆಗಳನ್ನೆಲ್ಲ ನಾನೆಂದೂ ವಿಮರ್ಶಿಸಲಿಲ್ಲ.

ತೈಲಪ : ನೀನು ವಿಮರ್ಶಿಸಲಿಲ್ಲ; ವಿಮರ್ಶಿಸುವುದೂ ಇಲ್ಲ. ಆದರೆ ನಾನೆ ಮನುಷ್ಯ ಸ್ವಭಾವಗಳ ಹಿನ್ನೆಲೆಯಲ್ಲಿ ನನ್ನನ್ನು ವಿಮರ್ಶಿಸಿಕೊಳ್ಳುತ್ತಿದ್ದೇನೆ. ನನಗೆ ಸ್ವಾರ್ಥ ಪರಾರ್ಥಗಳ ಅಂತರವೇ ಸ್ಪಷ್ಟವಾಗುವುದಿಲ್ಲ. ನಾವು ಯಾವುದನ್ನೂ ಸ್ವಾರ್ಥ ಎಂದು ಗುರುತಿಸುತ್ತೇವೆಯೋ ಅದು ನನ್ನ ವೈಯಕ್ತಿಕ ಪರಿಭಾಷೆಯಲ್ಲಿ ಸ್ವಾರ್ಥವೆನಿಸುವುದೇ ಇಲ್ಲ.

ಜಯಲಕ್ಷ್ಮಿ : ನಿಮ್ಮ ಮಾತುಗಳು ನನಗೆ ಅರ್ಥವಾಗುತ್ತಿಲ್ಲ. ಸ್ವಾರ್ಥಕ್ಕಿರುವುದು ಒಂದೇ ಅರ್ಥ. ನಿಮಗೆ ಅದು ಬೇರೆ ಹೇಗೆ ಆದೀತು?

ತೈಲಪ : ನಾನು ನನ್ನ ಬಲ ಪರಾಕ್ರಮಗಳಿಂದ ಸಾಮ್ರಾಜ್ಯವೊಂದನ್ನು ಕಟ್ಟಿಕೊಳ್ಳಬೇಕೆಂದು ಕೊಳ್ಳುತ್ತೇನೆ. ನನ್ನ ಹಿರಿಯರ, ನನ್ನ ವಂಶದ ಕೀರ್ತಿ, ಪ್ರತಿಷ್ಠೆಗಳನ್ನು ಮರಳಿ ಪಡೆಯುತ್ತೇನೆ. ಸಾಮಂತಿಕೆಯ ದಾಸ್ಯದಿಂದ ಮುಕ್ತನಾಗುತ್ತೇನೆ ಎಂದುಕೊಳ್ಳುವುದು ರಾಜವಂಶೀಯನಾದ ನನಗೆ ಸ್ವಾರ್ಥ ಹೇಗಾದೀತು?

ಜಯಲಕ್ಷ್ಮಿ : ನಿಮ್ಮ ತರ್ಕದ ದೃಷ್ಟಿಯಿಂದ ನಿಮ್ಮ ಅರ್ಥೈಸುವಿಕೆ ಸರಿಯಾಗಿದೆ... ನಾನು ಮೊದಲೇ ಹೇಳಿದೆ ಅರಮನೆಯ ಅಂತಃ ಕೋಣೆಗಳಲ್ಲಿ ಕುಳಿತವಳಿಗೆ ರಾಜನೀತಿ, ತರ್ಕ, ವಿವೇಕಗಳು ಹೇಗೆ ಸಾಧ್ಯ?

ತೈಲಪ : ಅಂದರೆ ನನ್ನ ಆಕಾಂಕ್ಷೆ, ಗುರಿಗಳು ಸಮರ್ಥನೀಯವೆಂದು ಒಪ್ಪಿಕೊಳ್ಳುವೆಯೇನು?

ಜಯಲಕ್ಷ್ಮಿ : ನಿಮ್ಮ ಮಾತುಗಳಿಂದ ವಿಚಾರಗಳಿಂದ ನನ್ನ ಬಾಯಿ ಕಟ್ಟಿದ್ದೀರಿ.

ತೈಲಪ : ರಾಜನ ಮಗ ರಾಜನಾಗಬೇಕೆಂದು ಬಯಸುವುದು, ಸಾಮಂತನ ಮಗ ಸಾಮ್ರಾಟನಾಗಿ ಬೆಳೆಯಬೇಕೆಂದು ಪ್ರಯತ್ನಿಸುವುದು ಸಹಜವಲ್ಲವೇ?

ಜಯಲಕ್ಷ್ಮಿ : ಇಷ್ಟಕ್ಕೂ ನಿಮ್ಮ ಅಭಿಲಾಷೆ ಏನೆಂಬುದನ್ನು ನೇರವಾಗಿ ಹೇಳಲಿಲ್ಲವಲ್ಲ?

ತೈಲಪ : ಸಮಯ ಬಂದಾಗ ಹೇಳುತ್ತೇನೆ.

**ಜಯಲಕ್ಷ್ಮಿ** : ಸ್ವಾಮಿ ನನ್ನಲ್ಲಿ ನಿಮಗೆ ನಂಬಿಕೆಯಿಲ್ಲವೆ?

**ತೈಲಪ** : ನಂಬಿಕೆಯ ವಿಷಯವಲ್ಲ. ನಾನು ಹೇಳುವ ಮಾತು ನಿನಗೆ ಗಾಭರಿ ಹುಟ್ಟಿಸಬಹುದು.

**ಜಯಲಕ್ಷ್ಮಿ** : ನಾನೂ ರಾಜಕನ್ಯೆ. ಯಾವುದೇ ವಿಚಾರಕ್ಕೂ ಗಾಬರಿಯಾಗುವುದಿಲ್ಲ.

**ತೈಲಪ** : ಹಾಗಾದರೆ ಕೇಳು. ನನಗೂ ಕಳೆದುಕೊಂಡುದನ್ನು ಗಳಿಸಿಕೊಳ್ಳಬೇಕೆಂಬ ತೀವ್ರ ಅಭಿಲಾಷೆ ಉಂಟಾಗಿದೆ.

**ಜಯಲಕ್ಷ್ಮಿ** : ಅಂದರೆ ಬೀಗರಾಗಿ ವೈರ ಸಾಧಿಸಬೇಕೆಂದೇನು?

**ತೈಲಪ** : ವೈರದ ಮಾತಲ್ಲ ದೇವಿ. ಸ್ವಲ್ಪ ಸಮಾಧಾನ ಚಿತ್ತಳಾಗಿ ಆಲೋಚಿಸು. ನೀನೇ ಹೇಳಿದೆ. ಅರಮನೆಯಲ್ಲಿ ಗಬ್ಬೀಂದ್ರ ಮತ್ತು ಜಕ್ಕಿ ಸುಂದರಿಯವರ ಪಿತೂರಿ ನಡೆಯುತ್ತಿದೆ. ಫಲವಾಗಿ ನಿಮ್ಮ ತಂದೆಯವರಿಗೆ ಸಿಂಹಾಸನದ ಆಸೆ ಚಿಗುರಿದೆ ಎಂದು.

**ಜಯಲಕ್ಷ್ಮಿ** : ಹೌದು. ನಮ್ಮ ತಾತನವರಿಗೆ ಸಿಂಹಾಸನ ಸಾಧ್ಯವಾದದ್ದು ಇಂತಹ ಪಿತೂರಿ, ಕುತಂತ್ರಗಳಿಂದಲೇ.

**ತೈಲಪ** : ಅದಕ್ಕೆಂದು ಈಗ ನಿನ್ನ ತಂದೆಯವರೂ ಅದೇ ದಾರಿ ಹಿಡಿದು ಸಿಂಹಾಸನವನ್ನು ದಕ್ಕಿಸಿಕೊಳ್ಳಬೇಕೆಂದಿದ್ದಾರೆ. ಇದು ನಿನ್ನ ದೃಷ್ಟಿಯಲ್ಲಿ ಸಮಂಜಸವೇ?

**ಜಯಲಕ್ಷ್ಮಿ** : ತಂದೆ ಎಂದ ಮಾತ್ರಕ್ಕೆ ಅವರು ಮಾಡುವ ಅಕೃತ್ಯ, ಅನ್ಯಾಯಗಳನ್ನು ಸಮಂಜಸವೆಂದು ಒಪ್ಪಿಕೊಳ್ಳಲಾರೆ, ಸಮರ್ಥಿಸಲೂ ಆರೆ.

**ತೈಲಪ** : ಹಾಗಾದರೆ ನಿನ್ನ ತಂದೆಯುವರು ಮಾಡಿರುವ ಸಿಂಹಾಸನದ ಆಕ್ರಮಣದ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

**ಜಯಲಕ್ಷ್ಮಿ** : ನನ್ನ ಅಭಿಪ್ರಾಯವನ್ನು ಕೇಳುವವರಾರು?

**ತೈಲಪ** : ನನ್ನನ್ನು, ನನ್ನ ತಂದೆಯವರನ್ನು ನಿನ್ನ ತಂದೆ ಸಲಹೆ ಕೇಳಿದರೆ ನಾವೇನು ಹೇಳಬೇಕು.

**ಜಯಲಕ್ಷ್ಮಿ** : ಸಲಹೆ ಕೊಡುವವರು ನೀವು. ನಿಮಗೆ ತೋಚಿದಂತೆ ನೀವು ಮಾಡಬಹುದು. ನೀವಿಡುವ ಹೆಜ್ಜೆಗೆ ಹೆಜ್ಜೆ ಜೋಡಿಸುತ್ತೇನೆ. ಅಷ್ಟೆ!

**ತೈಲಪ** : ನಾನು ನನ್ನ ತಂದೆಯವರ ಅಭಿಪ್ರಾಯ, ಮಾರ್ಗದರ್ಶನದೊಂದಿಗೆ ನಡೆಯುವವನು.

**ಜಯಲಕ್ಷ್ಮಿ** : ನಿಮ್ಮ ತಂದೆ ನನಗೂ ತಂದೆಯ ಸ್ಥಾನವನ್ನು ತುಂಬಿದ ಮಾವನವರು ಹಿರಿಯರು, ಪೂಜ್ಯರು. ನಿಮ್ಮಂತೆ ನಾನೂ ತಲೆಬಾಗಿ ಅನುಸರಿಸುವವಳೇ. ಅವರು ಹೇಳಿದಂತೆ ನಡೆಯುವುದೇ ಶ್ರೇಯಸ್ಕರ.

ತೈಲಪ : ವಿನಯ ವಿಧೇಯತೆಗಳು ಮೆಚ್ಚಬೇಕಾದ್ದೆ. ಆದರೆ ರಾಜಕೀಯದಲ್ಲಿ ಯಾವುದು ಹೇಗೆ ಎಂದು ಖಚಿತವಾಗಿ ಹೇಳಲು ತಲೆ ಕೆಳಗಾಗ ಬಲ್ಲವು. ಆದ್ದರಿಂದ ನಾವಿಡುವ ಪ್ರತಿ ಹೆಜ್ಜೆಯ ಪರಿಣಾಮ ನಾವು ನಿರೀಕ್ಷಿಸಿದಂತೆ ಇರಲಾರದು.

ಜಯಲಕ್ಷ್ಮಿ : ನನಗಿಂತ ನಿಮಗೆ ರಾಜಕೀಯ ಪರಿಸ್ಥಿತಿಯ ಸೂಕ್ಷ್ಮ ತಿಳಿದಿದೆ. ನನಗೆ ತಿಳಿಸಬಹುದೆನಿಸಿದರೆ ದಯವಿಟ್ಟು ತಿಳಿಸಿ.

ತೈಲಪ : ಸದ್ಯಕ್ಕೆ ನಮಗೆ ಪರಮಾರ ಸೀಯಕ ಹರ್ಷನ ಆಕ್ರಮಣದ ಯತ್ನಗಳನ್ನು ಭಗ್ನಗೊಳಿಸಬೇಕು.

ಜಯಲಕ್ಷ್ಮಿ : ನಿಮ್ಮ ಮಾತಿನ ರೀತಿ ಮುಂಬರುವ ಹೋರಾಟದ ದಿನಗಳನ್ನು ಧ್ವನಿಸುತ್ತಿದೆ.

ತೈಲಪ : ನಿಜ. ಹೋರಾಟ ಅನಿವಾರ್ಯವಾಗುತ್ತಿದೆ.

ಜಯಲಕ್ಷ್ಮಿ : ಅದನ್ನು ತಪ್ಪಿಸಲು ಸಾಧ್ಯವಿಲ್ಲವೇ?

ತೈಲಪ : ಅಧಿಕಾರದ ಆಸೆಯನ್ನು ಚೆಲ್ಲಿ ಕೊಟ್ಟು ಪ್ರಜಾಸುಖವನ್ನು ಮಾತ್ರವೇ ಬಯಸುವವರಿದ್ದಾಗ ಮಾತ್ರ ಹೋರಾಟಗಳನ್ನು ತಡೆಗಟ್ಟಲು ಸಾಧ್ಯವಾಗಬಹುದೇನೋ!

ಜಯಲಕ್ಷ್ಮಿ : ನೀವೇಕೆ ಪ್ರಯತ್ನಿಸಿ ನೋಡಬಾರದು.

ತೈಲಪ : ನಿನ್ನ ಸಲಹೆ ಸ್ವಾಗತಾರ್ಹವೇ. ಆದರೆ ಹಿರಿಯರ ದೃಷ್ಟಿಯಲ್ಲಿ ನಾನು ಉದ್ಧಟನೆನಿಸಿಕೊಳ್ಳುತ್ತೇನೆ............ಅಲ್ಲದೆ ನಿನ್ನ ತಂದೆಯವರಿಗೇ ಅದು ಸಹಿಸಲು ಆಗಲಿಕ್ಕಿಲ್ಲ.

ಜಯಲಕ್ಷ್ಮಿ : ನನ್ನ ತಂದೆಯವರನ್ನೇ ಸ್ವತಃ ಕಂಡು ಮಾತನಾಡಿಸಬಾರದೇಕೆ?

ತೈಲಪ : ಪ್ರಯತ್ನಿಸಿ ನೋಡುತ್ತೇನೆ. ಈಗಿನ ಪರಿಸ್ಥಿತಿ ಕಗ್ಗಂಟಿನ ಪರಿಸ್ಥಿತಿಯಾಗಿದೆ. ರಾಷ್ಟ್ರಕೂಟ ಸಿಂಹಾಸನಕ್ಕೆ ಯಾರು ನ್ಯಾಯಬದ್ಧ ಅಧಿಕಾರಿ ಎಂಬುದನ್ನು ನಿರ್ಣಯಿಸುವುದೇ ಒಂದು ದೊಡ್ಡ ಸಮಸ್ಯೆಯಾಗಿದೆ.

ಜಯಲಕ್ಷ್ಮಿ : ಆ ಸಮಸ್ಯೆಯನ್ನು ಜಾಣ್ಮೆಯಿಂದ ಬಿಡಿಸಬೇಕೆಂಬುದೇ ನನ್ನ ಆಸೆ. ಒಟ್ಟಿನಲ್ಲಿ ನನ್ನ ತಂದೆಯವರನ್ನು ಜೊತೆಗಿರಿಸಿಕೊಂಡು ನನ್ನ ದೊಡ್ಡ ತಾತನನ್ನು ಹಾಗೆಯೇ ಉಳಿಸುತ್ತೀರಿ.

ತೈಲಪ : ಅದು ಮೊದಲನೆ ಹಂತ.

ಜಯಲಕ್ಷ್ಮಿ : ಮುಂದಿನ ಹಂತ.

ತೈಲಪ : ಅನಿಶ್ಚಿತ ಮತ್ತು ಅತಿ ನಿಗೂಢ. ಏಕೆಂದರೆ ಯೋಚನೆಯ ಹಂತದಲ್ಲಿಯೇ ಸೋರಿ ಜಾರುವ ಅಪಾಯವಿದೆ.

ಜಯಲಕ್ಷ್ಮಿ : ನೀವೂ ಈ ಪರಮಾರರ ವಿರುದ್ಧ ಯುದ್ಧಕ್ಕೆ ಹೋಗುತ್ತೀರೇನು?

ತೈಲಪ : (ನಗುತ್ತಾ) ಹೊಸ ಮದುಮಗಳು. ಭಯವೇನು?

ಜಯಲಕ್ಷ್ಮಿ : ಹುಂ! (ತಕ್ಕೆ ಹಾಕುವಂತೆ) ಭಯವೇ? ರಾಜವಂಶದಲ್ಲಿ ಹುಟ್ಟಿ ರಾಜಮನೆತನ ಸೇರಿ ಯುದ್ಧಕ್ಕೆ ಹೆದರುವುದೆಂದರೆ ನಾಚಿಕೆಗೇಡು. ಸಮಯ ಬಂದರೆ ನಾನೇ ಖಡ್ಗ ಹಿಡಿದು ನಿಲ್ಲುತ್ತೇನೆ.

ತೈಲಪ : ಭಲಾ! ವೀರಪತ್ನಿ ಎನಿಸಿಕೊಂಡೆ..........ಹೆಂಗಳೆಯರು ಯುದ್ಧಕ್ಕೆ ಬಂದುದನ್ನು ನೋಡಿಲ್ಲ. ಆದರೆ ಯುದ್ಧದಲ್ಲಿ ಭಾಗವಹಿಸಿ ಸಾವನ್ನಪ್ಪುವ ಪುರುಷರಿಂದ ಕೈ ಹಿಡಿದವರಿಗೆ ನೋವು ದುಃಖಗಳಿಂದ ಅವರ ಬಾಳೇ ದುರಂತವಾಗುವುದಲ್ಲ!

ಜಯಲಕ್ಷ್ಮಿ : ಸ್ವಾರ್ಥ. ಆಸೆ ಬುರುಕುತನದಿಂದಾಗಿ ಸಾವು ಬಂದರೆ ಕೈ ಹಿಡಿದವರಿಗೆ, ನೀವು ಹೇಳುವಂತೆ ಭಯಂಕರ ನೋವೇ. ಆದರೆ ನಿಸ್ವಾರ್ಥಿಗಳಾಗಿ ರಾಷ್ಟ್ರ ಕ್ಷೇಮಕ್ಕಾಗಿ, ಪ್ರಜಾ ರಕ್ಷಣೆಗಾಗಿ ಮಡಿದರೆ ಅದಕ್ಕಿಂತ ಶ್ರೇಯಸ್ಕರವೆನಿಸುವುದು ಮತ್ತೊಂದಿರಲಾರದು. ಗಂಡಂದಿರ ಈ ತ್ಯಾಗಕ್ಕಾಗಿ ಪತ್ನಿಯರು ಹೆಮ್ಮೆ ಪಡಬೇಕು.

ತೈಲಪ : ವೀರ ಪತ್ನಿಯರಿಗೆ ಇರಬೇಕಾದ ಎಲ್ಲ ಗುಣಗಳೂ ನಿನ್ನಲ್ಲಿ ತುಂಬಿಕೊಂಡಿರುವುದು ನನಗೆ ಗೌರವಕಾರಿ ಎನಿಸಿದೆ.......

ತೈಲಪ : ಜಾಣ್ಮೆಯಿಂದ ಮಾಡುವುದೆಲ್ಲಿ ಬಂತು? ನ್ಯಾಯವಾಗಿ ನೋಡಿದರೆ ಈ ಸಿಂಹಾಸನ ಗೋವಿಂದರ ಮಗ ಇಂದ್ರನಿಗೆ ದಕ್ಕಬೇಕು.

ಜಯಲಕ್ಷ್ಮಿ : ಹೌದು. ಅದು ನ್ಯಾಯಬದ್ಧವಾದುದೇ.

ತೈಲಪ : ನ್ಯಾಯಬದ್ಧವಾದುದನ್ನು ಮಾಡಲು ಹೋದರೆ ನಿಮ್ಮ ತಂದೆಯವರ ವಿರೋಧವನ್ನು ಸ್ವಾಗತಿಸಬೇಕಾಗುತ್ತದೆ. ಅಲ್ಲದೆ ಹಾಗೆ ಮಾಡಿದರೆ ರಾಷ್ಟ್ರಕೂಟ ಸಿಂಹಾಸನ ರಾಷ್ಟ್ರಕೂಟರದಾಗಿ ಉಳಿಯದೇ ಗಂಗರ ಪಾಲಾಗುತ್ತದೆ.

ಜಯಲಕ್ಷ್ಮಿ : ಗಂಗರ ಮಾರಸಿಂಹನ ಕಣ್ಣು ಎಷ್ಟೋ ಕಾಲದಿಂದ ಈ ಸಿಂಹಾಸನದ ಮೇಲಿದೆ. ಅದಕ್ಕೆ ಈಗ ಅವನಿಗೆ ಒಳ್ಳೆಯ ಅವಕಾಶ ದೊರೆತಿದೆ. ಇಂದ್ರನಿಗೆ ಸಿಂಹಾಸನ ಕೊಡಿಸುವ ನೆಪದಲ್ಲಿ ತಾನೇ ಅದನ್ನು ಆಕ್ರಮಿಸಿಕೊಳ್ಳಬೇಕೆಂಬ ಸಂಚು ನಡೆಯುತ್ತಿದೆ.

ಜಯಲಕ್ಷ್ಮಿ : ಹಾಗಾದರೆ ಮುಂದೆ?

ತೈಲಪ : ಅದಕ್ಕೆಂದೇ ಮೊದಲಿಗೆ ಪರಮಾರ ಸೀಯಕ ಹರ್ಷನನ್ನು ಐಕ್ಯ ಮತದಿಂದ ನಾವೆಲ್ಲ ಒಟ್ಟಿಗೆ ಸೇರಿ ಓಮ್ಮೆಟ್ಟಿಸಿದರೆ, ಗಂಗ ಮಾರಸಿಂಹನು ಹೆದರಿ ತನಗೆ ತಾನೇ ಸ್ವಲ್ಪ ಕಾಲವಾದರೂ ಹಿಂಜರಿದು ಉಳಿಯುತ್ತಾನೆ. ಸದ್ಯದ ಸಮಸ್ಯೆ ಸ್ವಲ್ಪ ಸರಿಯುತ್ತದೆ.

ಜಯಲಕ್ಷ್ಮಿ : ಅದರರ್ಥ ನನ್ನ ದೊಡ್ಡ ತಾತನ ಅಧಿಕಾರವೇ ಮುಂದುವರೆಯುವುದು ಎಂದಾಯಿತು!

ತೈಲಪ : ಹೌದು.

ಜಯಲಕ್ಷ್ಮಿ : ತಾತನವರ ಆಳ್ವಿಕೆ ಎಂದರೆ ಗಜ್ಜೇಂದ್ರರ ಅಧಿಕಾರ ಚಲಾವಣೆಯೇ ಆಯಿತು.

ತೈಲಪ : ಅದರ ಬಗ್ಗೆ ನಿನಗೆ ಆತಂಕ ಬೇಡ. ಗಜ್ಜೇಂದ್ರರ ರೆಕ್ಕೆಗಳನ್ನು ಎಲ್ಲಿ ಕತ್ತರಿಸಬೇಕೆಂಬುದು ನನ್ನ ತಂದೆಯವರಿಗೆ ತಿಳಿದಿದೆ.

ಜಯಲಕ್ಷ್ಮಿ : ಈ ನಿಮ್ಮ ಹೊಗಳಿಕೆ ಎಲ್ಲವನ್ನೂ ಸಾಕು ಮಾಡಿ. ಮೊದಲು ನೀವು ನಿಮ್ಮ ತಂದೆಯವರಿಗೆ ಕೊಟ್ಟ ಭಾಷೆ ಏನೆಂದು ತಿಳಿಸಿರಿ...... ಹೇಳಬಾರದ ಗುಟ್ಟಾದರೆ ನಿಮ್ಮನ್ನು ನಾನು ಒತ್ತಾಯಿಸುವುದಿಲ್ಲ.

ತೈಲಪ : ಜಕ್ಕಲೆ.......... ಜಕ್ಕಲೆ........... ನಿನ್ನಂತಹ ಹೆಂಡತಿಯನ್ನು ಪಡೆದ ಪುಣ್ಯವಂತನೆಂದು ಗರ್ವ ಪಡುತ್ತಿರುವಾಗ ನಿನ್ನಿಂದ ಮರೆಮಾಚಿಡುವ ಪ್ರಮೇಯವೇ ಬರುವುದಿಲ್ಲ.

ಜಯಲಕ್ಷ್ಮಿ : ಹಾಗಾದರೆ ಹೇಳಿ ಬಿಡಿ. ನನಗೆ ಕುತೂಹಲ ತಡೆಯಲಾಗುವುದಿಲ್ಲ.

ತೈಲಪ : ನೀನೇ ಹೇಳಿದೆಯಲ್ಲ. ನಿನ್ನ ತಂದೆಯವರು ರಾಷ್ಟ್ರಕೂಟ ಸಿಂಹಾಸನಕ್ಕೆ ಆಸೆ ಪಡುತ್ತಿರುವುದು ನ್ಯಾಯಬಾಹಿರವೆಂದು. ಹೀಗಿರುವಾಗ ನಾನೇನನ್ನೂ ನಿನ್ನಿಂದ ಗುಟ್ಟಾಗಿಡುವುದಿಲ್ಲ. ಪ್ರಜಾ ಜನರ ಕ್ಷೇಮವನ್ನು ಹಿತದೃಷ್ಟಿಯಲ್ಲಿರಿಸಿಕೊಂಡು ನಡೆಯಬೇಕೆಂಬ ನನ್ನ ತಂದೆಯವರ ಅಪ್ಪಣೆಯನ್ನು ಪಾಲಿಸುತ್ತೇನೆ.

ಅಮ್ಮುಗಿ : (ಪ್ರವೇಶಿಸಿ) ತೈಲಪಕುಮಾರ

ತೈಲಪ : (ಆಶ್ಚರ್ಯದಿಂದ) ಓ ಮಾವನವರು. ಬನ್ನಿ..............ಬನ್ನಿ................

ಅಮ್ಮುಗಿ : ಕ್ಷಮಿಸು ಕುಮಾರ. ನಿಮ್ಮ ಏಕಾಂತಕ್ಕೆ ಭಂಗ ತರುವ ದಾರ್ಷ್ಟ್ಯ ಮಾಡಿದೆ. ಹೇಳಿ ಕಳಿಸಿ ಬರದೆ ನೇರವಾಗಿ ಬಂದು ಬಿಟ್ಟೆ.

ತೈಲಪ : ಮಾವನವರೇ. ಮಕ್ಕಳನ್ನು ನೋಡಲು ಬರುವುದಕ್ಕೆ ಅಪ್ಪಣೆ ಬೇಕೇನು? ನೀವು ಬರುವ ತೊಂದರೆ ಏಕೆ ತೆಗೆದುಕೊಂಡಿರಿ. ಹೇಳಿ ಕಳಿಸಿದ್ದರೆ ನಾವೇ ಬರುತ್ತಿದ್ದೆವು.

ಅಮ್ಮುಗಿ : ನಮ್ಮ ಜಕ್ಕಲ ಏನನ್ನುತ್ತಾರೆ! ಕಿಸುಕಾಡಿನ ಜೀವನ ಬೇಸರತರಿಸಿದೆಯೇ ಮಗಳೆ.

ಜಯಲಕ್ಷ್ಮಿ : ಇಲ್ಲ ಅಪ್ಪಾಜಿ. ಇಲ್ಲಿಗೆ ಬಂದದ್ದು ನಿಜವಾಗಿ ನನಗೆ ಸಂತೋಷವಾಗಿದೆ. ನಿಮ್ಮ ಸಾನ್ನಿಧ್ಯ. ನನ್ನವರ ಪ್ರೀತ್ಯಾದರಗಳ ಸುಖ ನನಗೆ ಲಭ್ಯವಾಗುವ ಅವಕಾಶ ಒದಗಿದೆ.

ಅಮ್ಮುಗಿ : ದೇವರು ನಿಮ್ಮಿಬ್ಬರನ್ನು ಚೆನ್ನಾಗಿಡಲಿ. ಚಾಲುಕ್ಯ ಸಾಮ್ರಾಜ್ಯದ ವೈಭವದ ದಿನಗಳು ಪುನಃ ಅವತರಿಸಿ ನೀವಿಬ್ಬರೂ ಚಾಲುಕ್ಯ ಸಿಂಹಾಸನಾ ರೂಢರಾಗಿ ಕಂಗೊಳಿಸುವುದನ್ನು ನೋಡ ಬಯಸುತ್ತೇನೆ.

ಜಯಲಕ್ಷ್ಮಿ : ನಿಮ್ಮ ಆಶೀರ್ವಾದ ಫಲಿಸುವಂತಾಗಲಿ ಅಪ್ಪಾಜಿ.

ತೈಲಪ : ಮಾವಾಜಿ ತಂದೆಯವರಿಂದ ಸುದ್ದಿ ಏನಾದರೂ ಬಂದಿದೆಯೇ? .........ಪರಿಸ್ಥಿತಿ ಹೇಗಿದೆಯಂತೆ?

ಅಮ್ಮುಗಿ : ಅದನ್ನೇ ಹೇಳಲು ಬಂದೆ. ಭಾವನವರಿಂದ ಬೇಹು ಬಂದಿದೆ. ಪರಮಾರರೊಡನೆ ಯುದ್ಧ ಅನಿವಾರ್ಯವಾಗಿದೆಯಂತೆ. ಅವರ ಸೈನ್ಯ ಗೋದಾವರಿ ದಾಟಿ ಮಾನ್ಯಖೇಟದ ಕಡೆಗೆ ಬರುವುದಕ್ಕೆ ಬದಲಾಗಿ ದೇವಗಿರಿಯತ್ತ ಸಾಗುತ್ತಿದೆ ಎಂದು ಸುದ್ದಿ ಬಂದಿದೆ.

ತೈಲಪ : ವಿಚಿತ್ರವಾಗಿದೆಯಲ್ಲ! ಪರಮಾರರ ಆಂತರ್ಯವೇ ತಿಳಿಯುತ್ತಿಲ್ಲ. ರಾಷ್ಟ್ರಕೂಟರ ಮೇಲಿದ್ದ ಹದ್ದುಗಣ್ಣು ಇದ್ದಕ್ಕಿದ್ದಂತೆ ಸೇವುಣರ ಕಡೆಗೆ ತಿರುಗಿದ್ದೇಕೆ?

ಅಮ್ಮುಗಿ : ಕಾರಣ ಸ್ಪಷ್ಟ. ಸೇವುಣರ ಬೆಂಬಲ ನಮ್ಮ ಕಡೆಗಿದೆ ಎಂಬ ರಹಸ್ಯ ಬಯಲಾಗಿರಬೇಕು. ಅದಕ್ಕೇ ಮೊದಲು ಅವರನ್ನು ಹತ್ತಿಕ್ಕಿ ನಂತರ ಮಾನ್ಯಖೇಟದ ಕಡೆಗೆ ಹೊರಳುವ ಯೋಜನೆಯಿರಬೇಕು.

ತೈಲಪ : ಅಂದರೆ ಮಾನ್ಯಖೇಟದ ಮೇಲೆ ದಾಳಿ ಎಂಬ ಸುದ್ದಿಯನ್ನು ಹಬ್ಬಿಸಿ. ಸೇವುಣರ ಬಲವನ್ನು ಒಡೆಯುವುದಾಗಿದೆ ಅವರ ಯೋಚನೆ. ಸೇವುಣ ಸೈನ್ಯ ಮಾನ್ಯಖೇಟದ ಕಡೆ ಹೊರಟಾಗ ಅಕಸ್ಮಾತ್ತಾಗಿ ದೇವಗಿರಿಯ ಮೇಲೆ ಬಿದ್ದರೆ ಸೇವುಣರು ಹೆಚ್ಚು ಸೈನ್ಯ ಬಲವಿಲ್ಲದೆ ಸುಲಭವಾಗಿ ಶರಣಾಗತರಾಗುತ್ತಾರೆ– ಎಂದೋ ಅವರ ತಂತ್ರ!

ಅಮ್ಮುಗಿ : ಸರಿಯಾಗಿ ಊಹಿಸಿದೆ ತೈಲ!

ತೈಲಪ : ಹಾಗಾದರೆ ನಮ್ಮ ಪರಿಸ್ಥಿತಿ ಬಹಳ ಕ್ಲಿಷ್ಟಕರವಾದಂತೆಯೇ!

ಅಮ್ಮುಗಿ : ಹಾಗೇನೂ ಆಗಲಾರದು. ಅವರ ಹೊಸ ಯೋಚನೆ ಅವರಿಗೇ ಮುಳುವಾಗುತ್ತದೆ. ನಿಮ್ಮ ತಂದೆಯವರ ಆಲೋಚನೆಯಂತೆ ಚಾಲುಕ್ಯ, ಚೇದಿ. ರಾಷ್ಟ್ರಕೂಟಗಳ ಮಿಳಿತ ಸೈನ್ಯ ದೇವ ಗಿರಿಯಲ್ಲಿ ಸೇವುಣರೊಂದಿಗೆ ಕೂಡಿಕೊಂಡು ಪರಮಾರ ನಡೆಯ ಒಂದೊಂದು ಹೆಜ್ಜೆಯನ್ನೂ ಸೂಕ್ಷ್ಮವಾಗಿ ಗಮನಿಸಿ ಮುಂದಡಿ ಇಡುವುದೆಂದು ನಿಶ್ಚಿತವಾಗಿದೆ.

ತೈಲಪ : ಈಗ ನಾನೇನು ಮಾಡಬೇಕು. ಅಪ್ಪಾಜಿಯುವರು ನನಗೇನು ಆದೇಶಿಸಿದ್ದಾರೆ?

ಅಮ್ಮುಗಿ : ನೀನು ಪತ್ನೀ ಸಮೇತನಾಗಿ ಈ ಕೂಡಲೇ ಹೊರಟು ನಿನ್ನ ತಾಯಿಯನ್ನು ಸೇರಿಕೊಳ್ಳಬೇಕು.

ತೈಲಪ : ಮಾನ್ಯಖೇಟಕ್ಕೆ ಹೋಗುವುದು ಬೇಡವೇ?

ಅಮ್ಮುಗಿ : ಉಹುಂ! ಮಾನ್ಯಖೇಟದ ಅರಮನೆಯಿಂದ ಸೂಚನೆಯೇನಾದರೂ ಬಂದರೆ ನೀವು ರಾಜಧಾನಿಯಲ್ಲಿಯೇ ಉಳಿಯಬೇಕಾದೀತು.

ತೈಲಪ : ಮತ್ತೆ ನೀವು?

ಅಮ್ಮುಗಿ : ನಾನು ಇಲ್ಲಿಂದ ನಮ್ಮ ರಾಜಧಾನಿಗೆ ಹೋಗಿ ಮತ್ತೆ ಅಲ್ಲಿಂದ ಸೈನ್ಯವನ್ನು ತೆಗೆದುಕೊಂಡು ನೇರವಾಗಿ ದೇವಗಿರಿಯ ಕಡೆ ಪ್ರಯಾಣ ಬೆಳೆಸುತ್ತೇನೆ. ಚಾಲುಕ್ಯ. ರಾಷ್ಟ್ರಕೂಟ ಸೈನ್ಯವೂ ಆದಷ್ಟು ಬೇಗ ಹೊರಟು ಅಲ್ಲಿಗೇ ಬಂದು ಸೇರುತ್ತದೆ.

ತೈಲಪ : ನಾವು ಯಾವಾಗ ಹೊರಡಬೇಕು?

ಅಮ್ಮುಗಿ : ತಡಮಾಡುವಂತೆಯೇ ಇಲ್ಲ. ಈ ಕೂಡಲೇ ಹೊರಡಬೇಕು. ಜೋಯಿಸರಿಗೆ ಹೇಳಿ ಕಳಿಸಿದ್ದೇನೆ. ಒಂದು ಶುಭ ಮುಹೂರ್ತದಲ್ಲಿ ಪ್ರಯಾಣ ನಿಶ್ಚಯಿಸುತ್ತಾರೆ. ಬಹುಶಃ ನಾಳಿದ್ದು ಬುಧವಾರ ಶುಕ್ಲನಾಮ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ ಸೋಮವಾರದಂದೇ ನಿನ್ನ ಪ್ರಯಾಣ ನಿಶ್ಚಯವಾಗಬಹುದು.

ತೈಲಪ : ಆಯಿತು ಮಾವಾಜಿ. ಅಂದೇ ಹೊರಡುತ್ತೇವೆ.

ನಿರೂಪಣೆ– (ಇತಿಹಾಸಕಾರ)

[ವಿಕ್ರಮಾದಿತ್ಯನ ದಕ್ಷ ಮಾರ್ಗದರ್ಶನದಲ್ಲಿ ಅಮ್ಮುಗಿ. ವಾಡುಗಿ ಕರ್ಕದೇವರೆಲ್ಲರೂ ದೇವಗಿರಿ ಸೇರಿಕಾರ್ಯ ಯೋಜನೆ ರೂಪಿಸಿದರು.

ಭಿಲ್ಲಮ ಅಲ್ಲಿಯೇ ಇದ್ದು ಸೈನ್ಯ ನಿರ್ವಹಣೆ ಮಾಡಿದ. ರಾಷ್ಟ್ರಕೂಟ ಚಕ್ರವರ್ತಿ ಖೊಟ್ಟಿಗರು ಮಾನ್ಯಖೇಟದಲ್ಲಿಯೇ ಉಳಿದುಕೊಂಡರು. ಕ್ಷಣ ಕ್ಷಣದ ಸುದ್ದಿಗಳಿಗಾಗಿ ವಿಕ್ರಮಾದಿತ್ಯ ಕರ್ಕಾದಿಗಳು ಹಾತೊರೆದರು. ವಿಕ್ರಮಾದಿತ್ಯ ಸೇನಾ ನಾಯಕರನ್ನು ಮಂತ್ರಾಲೋಚನೆಗೆ ಕರೆಸಿದ.]

– – ಮೌನ – –

**ವಿಕ್ರಮಾದಿತ್ಯ** : ವಾಡುಗಿಯವರೇ ಪರಮಾರರ ಈ ತಟಸ್ಥ ನೀತಿ ಅರ್ಥವಾಗುತ್ತಿಲ್ಲ.

**ವಾಡುಗಿ** : ನನಗೂ ಅದೇ ಯೋಚನೆಯಾಗಿದೆ. ಪಕ್ಷಗಳೂ, ಮಾಸಗಳೂ ಉರುಳಿದರೂ ಅವರಿಂದ ಪ್ರಚೋದನೆಯೇ ಇಲ್ಲವಾಗಿದೆ. ಇಷ್ಟೆಲ್ಲಾ ಸೈನ್ಯಬಲವನ್ನು ಕೆಲಸ ಕಾರ್ಯವಿಲ್ಲದೆ ತೂಗಿಸುವುದು ಪ್ರಯಾಸದ ಕೆಲಸವೇ.

**ಅಮ್ಮುಗಿ** : ಹಾಗಿದ್ದ ಮೇಲೆ ನಾವೇ ಮುಂದುವರಿದು ಆಕ್ರಮಿಸಬಾರದೇಕೆ?

**ವಿಕ್ರಮಾದಿತ್ಯ** : ಕಡೆಗೆ ಅದೇ ಸಮ್ಮತವಾದ ಹಾದಿಯಾಗಬಹುದು.

**ವಾಡುಗಿ** : ಇನ್ನೊಂದೆರಡು ದಿನ ಕಾದು ನೋಡುವ, ನನ್ನ ಮಗ ಭಿಲ್ಲಮನಿಗೆ ಗುಪ್ತ ಬೇಹಿನ ವ್ಯವಸ್ಥೆ ಮಾಡಬೇಕೆಂದು ತಿಳಿಸಿ ಬಂದಿದ್ದೇನೆ. ವ್ಯಾಪಕವಾದ ಬೇಹಿನ ರಚನೆಯಾಗಿರುವುದರಿಂದ ನಮಗೆ ಇಷ್ಟರಲ್ಲಿಯೇ ಬಹು ಮುಖ್ಯವಾದ ಸುದ್ದಿಗಳು ಬಂದರೂ ಬರಬಹುದು.

**ವಿಕ್ರಮಾದಿತ್ಯ** : ಹಾಗಾದರೆ ಪರಮಾರರು ಗೋದಾವರಿ ದಾಟಿದ ಸುದ್ದಿ ಬರುವವರೆಗೆ ನಾವು ಯಾವುದನ್ನೂ ನಿರ್ಣಯಿಸುವುದು ಬೇಡ.

**ಭಿಲ್ಲಮ** : (ಪ್ರವೇಶ) ಪೂಜ್ಯರೆಲ್ಲರಿಗೆ ನಮಸ್ಕಾರ.........ಅಪ್ಪಾಜಿ. ಈಗ ತಾನೇ ಗುಪ್ತ ಬೇಹು ಬಂದಿದೆ. ಪರಮಾರರ ಸೈನ್ಯ ಆಗಲೇ ಭೀಮಾ ನದಿಯತ್ತ ಸಾಗುತ್ತಿದೆಯಂತೆ. ಆದ್ದರಿಂದ ನಾಳೆಯೇ ನಮ್ಮ ಸಂಘಟಿತ ಸೈನ್ಯ ಅವರ ಬೆನ್ನಟ್ಟಿ ಹೋಗಬೇಕಾದೀತು.

**ವಿಕ್ರಮಾದಿತ್ಯ** : ಭಿಲ್ಲಮ ನೀನು ತಂದ ಸುದ್ದಿಯಿಂದ ನಮ್ಮ ಜಡತೆಯನ್ನು ಕಳೆದುಕೊಂಡಂತಾಗಿದೆ. ನಾಳೆಯೇ ನಮ್ಮ ಸಮ್ಮಿಶ್ರ ಸೈನ್ಯ ಘಟಕ ಬ್ರಾಹ್ಮೀ ಮುಹೂರ್ತದಲ್ಲಿಯೇ ಹೊರಡುತ್ತದೆ.

**ಅಮ್ಮುಗಿ** : ನಾನೂ ನನ್ನದೊಂದು ತುಕಡಿಯನ್ನು ತೆಗೆದುಕೊಂಡು ಆಯಕಟ್ಟಿನ ಸ್ಥಳದಲ್ಲಿ ಎದುರಿಸುತ್ತೇನೆ.

**ವಾಡುಗಿ** : ಪರಮಾರರು ದಿಕ್ಕು ತಪ್ಪಿಸುವ ತಂತ್ರಗಳನ್ನು ಬಲ್ಲವರು. ನಾವು ಬಹಳ ಎಚ್ಚರಿಕೆಯಿಂದ ಅವರ ಜಾಡನ್ನು ಅನುಸರಿಸಬೇಕು.

ಪೂರ್ವನಿಶ್ಚಿತ ಮಾರ್ಗಬಿಟ್ಟರೂ. ಅವರು ಹೋಗಬಹುದಾದ ಇನ್ನೊಂದು ಮಾರ್ಗವಿದೆ.

ಅಮ್ಮಗಿ : ಅದು ಯಾವುದು ವಾಡುಗಿಯವರೇ?

ವಾಡುಗಿ : ಒಂದು ಕಾಲದಲ್ಲಿ ರಾಷ್ಟ್ರಕೂಟರು ತಮ್ಮ ಪ್ರಧಾನ ನಗರ ಮಾಡಿಕೊಂಡಿದ್ದ ಲತ್ತಲೂರಿಗೆ ನುಗ್ಗಿ ಆಕ್ರಮಿಸಿಕೊಳ್ಳುವ ಸಾಧ್ಯತೆ ಇದೆ. ಆದ್ದರಿಂದ ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಶರವೇಗದ ಅಶ್ವ ಚಾಲಕ ವೀರಗರನ್ನು ಅಣಿ ಮಾಡಿ ನಿಲ್ಲಿಸಿರಬೇಕು.

ತೈಲಪ : (ಮಾರುವೇಷದಲ್ಲಿ ಪ್ರವೇಶಿಸಿ) ಹಿರಿಯರಿಗೆ ನನ್ನ ನಮಸ್ಕಾರಗಳು.

ಎಲ್ಲರೂ : (ಅಚ್ಚರಿಯಿಂದ) ಯಾರು ಈ ಅಪರಿಚಿತ ಯುವಕ. ನೇರವಾಗಿ ಹೀಗೆ ಒಳಕ್ಕೆ ಬಿಟ್ಟವರು ಯಾರು?

ತೈಲಪ : (ನಗುತ್ತ) ಅಪ್ಪಾಜಿ ನನ್ನ ಗುರುತು ಸಿಗಲಿಲ್ಲವೇ? ನಾನು..........ನಿಮ್ಮ ತೈಲಪ.

ವಿಕ್ರಮಾದಿತ್ಯ : (ನಗುತ್ತಾ) ಬಾ ತೈಲ........ನೀನು ಬಂದದ್ದು ಯಾವಾಗ. ಈ ವಿಚಿತ್ರ ಮಾರುವೇಷವೇಕೆ?

ತೈಲಪ : ಅಪ್ಪಾಜಿ. ನಾನು ಬರುತ್ತಿರುವಾಗಲೇ ಹಲವಾರು ಸುದ್ದಿಗಳು ನನ್ನ ಕಿವಿ ಮುಟ್ಟಿದವು. ನಾನು ಅವುಗಳನ್ನು ಪರೀಕ್ಷಿಸುವುದಕ್ಕಾಗಿ ವೇಷ ಮರೆಸಿಕೊಂಡು ಸುತ್ತಾಡಿದೆ. ಪರಮಾರರ ಸೈನ್ಯ ಲತ್ತಲೂರಿನ ಕಡೆಗೆ ಸಾಗುತ್ತಿರುವುದನ್ನು ನಾನೇ ಕಣ್ಣಾರೆ ಕಂಡು ಬಂದಿದ್ದೇನೆ.

ವಿಕ್ರಮಾದಿತ್ಯ : ನೀನು ಇಲ್ಲಿಗೆ ಬಂದಿರುವುದನ್ನು ಯಾರಾದರೂ ನೋಡಿದರೇನು?

ತೈಲಪ : ಇಲ್ಲ ಅಪ್ಪಾಜಿ. ನನ್ನ ಹೆಂಡತಿ ಮತ್ತು ನನ್ನ ಅವ್ವೆಯ ಹೊರತು ಬೇರೆ ಯಾರಿಗೂ ತಿಳಿದಿಲ್ಲ.

ವಿಕ್ರಮಾದಿತ್ಯ : ಚಕ್ರವರ್ತಿಗಳ ವಿಚಾರವೇನಾದರೂ ತಿಳಿದು ಬಂತೇನು?

ತೈಲಪ : ಬನವಾಸಿಯಿಂದ ಬರುವ ಸೈನ್ಯದ ನಿರೀಕ್ಷೆಯಲ್ಲಿದ್ದರೂ ಸೈನ್ಯ ಬಂದಿದ್ದರೆ ಅವರೂ ಬನವಾಸಿಯ ಕಡೆಗೆ ಹೊರಟರಲೂ ಬಹುದು.

ವಾಡುಗಿ : ಬನವಾಸಿಯ ಕಡೆಗೇಕೆ ಪ್ರಯಾಣ ಮಾಡಬೇಕು? ಹಾಗೆ ಸೂಚಿಸಿದವರು ಯಾರು?

ತೈಲಪ : ಸೂಚಿಸುವವರು ಸಲಹೆ ನೀಡುವವರು ಗಜ್ಜೇಂದ್ರರೇ ಅಲ್ಲವೇ?

ವಿಕ್ರಮಾದಿತ್ಯ : ಇದು ನಿನಗೆ ತಿಳಿದದ್ದು ಹೇಗೆ?

ತೈಲಪ : ಸಾಮಂತ ಪಂಡಿಗರ ಪತ್ನಿ ಜಕ್ಕಿ ಸುಂದರಿಯವರಿಂದ ನನಗೆ ಸುದ್ದಿ ತಿಳಿಯಿತು.

ಅಮ್ಮಗಿ : ಬನವಾಸಿಗೆ ಮಗನೊಡನೆ ಹೋಗುವುದೇಕೆ?

ತೈಲಪ : ಎರಡು ತಿಂಗಳಿಂದ ಯುದ್ಧ ಶಿಬಿರದಿಂದ ಏನೊಂದು ಸುದ್ದಿಯೂ ಬರಲಿಲ್ಲವಾಗಿ ಚಕ್ರವರ್ತಿಗಳಿಗೆ ಒಂದು ಬಗೆಯ ಆತಂಕ ಉಂಟಾಗಿ. ಪರಮಾರರ ಕೈಯಿಂದ ನಮ್ಮವರು ಸೋಲನ್ನೇ ಅನುಭವಿಸಿರಬೇಕೆಂಬ ಅನುಮಾನ ಉಂಟಾಗಿ ರಕ್ಷಣೆಯ ನೆಪವಲ್ಲಿ ಅಲ್ಲಿಗೇ ಹೋಗುವಂತೆ ಮಾಡಲಾಗಿದೆ.

ವಿಕ್ರಮಾದಿತ್ಯ : (ಆತಂಕದಿಂದ) ಹಾಗಾದರೆ ಇಲ್ಲಿನ ಅರಮನೆ ನಿಮ್ಮಪ್ಪ ನಿನ್ನ ಹೆಂಡತಿ ಇವರ ಪಾಡೇನು?

ತೈಲಪ : ರಾಜಧಾನಿಯ ರಕ್ಷಣೆ ಗಬ್ಬೀಂದ್ರ ಮತ್ತು ನನ್ನಯರಸರ ಕೈಯಲ್ಲಿದೆ. ಅಪ್ಪೆ ಮತ್ತು ಜಕ್ಕಲೆಯ ಜವಾಬ್ದಾರಿಯನ್ನು ಕದಂಬಳಿಗೆಯ ಸಾಮಂತರ ಶ್ರೀಮತಿ ಜಕ್ಕಿ ಸುಂದರಿಯವರು ವಹಿಸಿಕೊಂಡಿದ್ದಾರೆ. ಅವರೇ ಇದೆಲ್ಲವನ್ನು ನನಗೆ ತಿಳಿಸಿ ಕಳಿಸಿದ್ದಾರೆ.

ಅಮ್ಮಗಿ : ಹಾಗಾದರೆ ಜಕ್ಕಿ ಸುಂದರಿಯವರಿಗೆ ಗಬ್ಬೀಂದ್ರರ ನೀತಿ ಸರಿಯೆನಿಸಿಲ್ಲವೇನೋ.

ತೈಲಪ : ಅವರ ಮಾತುಗಳಿಂದ ನನಗೂ ಹಾಗೇ ಅನಿಸಿತು. ಆದರೆ ಅವ್ರು ಸ್ಪಷ್ಟವಾಗಿ ಹೇಳಲಿಲ್ಲ. ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಡಲು ಇದು ಸಮಯವೂ ಅಲ್ಲ ಎಂದರು.

ವಿಕ್ರಮಾದಿತ್ಯ : ಕಂಬಳಿಗೆಯ ಸಾಮಂತರಿಗೆ ವಿಷಯವೆಲ್ಲ ತಿಳಿದಿರಬಹುದು.

ತೈಲಪ : ಖಂಡಿತವಾಗಿಯೂ ತಿಳಿದಿರುತ್ತದೆ. ಅದಕ್ಕೇ ಅವರು ಸ್ವತಃ ಈ ಸಭೆಯಲ್ಲಿ ನಮ್ಮ ಜೊತೆಗೆ ಇದ್ದರೆ ಇನ್ನಷ್ಟು ವಿವರಗಳು ತಿಳಿಯುತ್ತಿದ್ದವು.

ವಿಕ್ರಮಾದಿತ್ಯ : ಕರ್ಕದೇವರಿಗೆ ಈ ವಿವರಗಳನ್ನು ತಿಳಿಸಿರುವೆಯಾ ಹೇಗೆ?

ತೈಲಪ : ಅವರಿಗೂ ವಿಷಯವೆಲ್ಲವನ್ನೂ ವಿವರಿಸಿದ್ದೇನೆ.

ವಿಕ್ರಮಾದಿತ್ಯ : ವಾಡುಗಿಯವರೇ ಕರ್ಕದೇವರನ್ನು ರಾಜಧಾನಿ. ಅರಮನೆಯ ರಕ್ಷಣೆಗೆ ಕಳಿಸುವುದು ಸೂಕ್ತವೆನಿಸುತ್ತದೆಯಲ್ಲವೆ?

ವಾಡುಗಿ : ಖಂಡಿತಾ ಕೂಡದು. ಗಬ್ಬೀಂದ್ರರ ರಾಜಕೀಯ ಕುತಂತ್ರಕ್ಕೆ ಕರ್ಕದೇವರು ಬಲಿಯಾಗ ಕೂಡದು.

ವಿಕ್ರಮಾದಿತ್ಯ : ಕರ್ಕದೇವರಿಗೆ ಅವರಿಂದೇನೂ ತೊಂದರೆಯಾಗಲಾರದು.

ವಾಡುಗಿ : ಇಲ್ಲ. ಗಜ್ಜಿಂದ್ರರು ಖೊಟ್ಟಿಗ ಚಕ್ರವರ್ತಿಗಳ ಮಗನಿಗೆ ರಾಷ್ಟ್ರಕೂಟ ಸಿಂಹಾಸನವನ್ನು ದಕ್ಕಿಸಿಕೊಡಬೇಕೆಂಬ ಪ್ರಯತ್ನದಲ್ಲಿದ್ದಾರೆ. ಅದಕ್ಕೇ ಅವರು ರಾಜಧಾನಿಯಿಂದ ದೂರವಿರುವುದಿಲ್ಲ. ಕರ್ಕದೇವರ ಸಿಂಹಾಸನದ ಆಸೆಯ ವಾಸನೆಯೂ ಹತ್ತಿರಬಹುದು. ಅದನ್ನು ಅವರು ಸಹಿಸುವುದಿಲ್ಲ.

ವಿಕ್ರಮಾದಿತ್ಯ : ಹಾಗಾದರೆ ರಾಜಧಾನಿಯ ರಕ್ಷಣೆಗೆ ಹೋಗುವವರು ಯಾರು?

ವಾಡುಗಿ : ಯಾರೇಕೆ ವಿಕ್ರಮಾದಿತ್ಯರೇ? ಅದಕ್ಕೆ ಸೂಕ್ತ ಆಯ್ಕೆ ಎಂದರೆ ತಾವೇ! ತಾವು ಅಲ್ಲಿದ್ದರೆ ಯಾರಿಗೂ ಯಾವ ಅನುಮಾನವೂ ಬರುವುದಿಲ್ಲ. ಸಿಂಹಾಸನ ರಕ್ಷಣೆಗೆಂದೆಷ್ಟೇ ಜನರು ತಿಳಿಯುತ್ತಾರೆ.

ವಿಕ್ರಮಾದಿತ್ಯ : ನೀವೆಲ್ಲ ಹೇಗೆ ತೀರ್ಮಾನಿಸಿದರೆ ಹಾಗೆ ಆಗಲಿ.

ವಾಡುಗಿ : ಇದರ ಜೊತೆಗೆ ಇನ್ನೊ ಇಂದು ಅನುಕೂಲವಿದೆ.

ವಿಕ್ರಮಾದಿತ್ಯ : ಏನದು ವಾಡುಗಿಯವರೇ?

ವಾಡುಗಿ : ತೈಲಪ ಕುಮಾರರಿಂದ ಪಂಡಿಗರ ಪತ್ನಿಯವರ ವಿಚಾರದಲ್ಲಿದ್ದ ನಮ್ಮ ಅನುಮಾನ ಸುಳ್ಳಾಯಿತು. ಗಜ್ಜೀಂದ್ರರ ಪರ ಎಂಬ ನಿಮ್ಮ ನಿಲುವು ತಪ್ಪಾಯಿತು. ಅಲ್ಲದೆ ತೈಲಪರು ಇಲ್ಲಿಗೆ ಬರಲು ಅವರದೇ ಮುಖ್ಯ ಪ್ರೇರಣೆ ಎಂದ ಮೇಲೆ ಸಂಪೂರ್ಣ ನಂಬಿಕೆ ಉಂಟಾಗಿದೆ.

ತೈಲಪ : ಅಷ್ಟೇ ಅಲ್ಲ. ಅವ್ವೆ ಮತ್ತು ಜಕ್ಕಿ ಸುಂದರಿಯವರ ನಡುವೆ ತೀರ ಆತ್ಮೀಯತೆ ಬೆಳೆದಿರುವುದರಿಂದ ಗಜ್ಜೀಂದ್ರರ ಚಲನವಲನಗಳ ಬಗೆಗೆ ತಿಳಿದುಕೊಳ್ಳುವುದೂ ಸುಲಭವಾಗುತ್ತದೆ.

ವಿಕ್ರಮಾದಿತ್ಯ : ಅಂದರೆ ಎಲ್ಲವೂ ನಿಶ್ಚಯವಾದಂತೆ. ಅಮ್ಮಗಿಯವರೇ ಮತ್ತೇನಾದರೂ ಚರ್ಚಿಸುವಂತಹ ವಿಷಯಗಳಿವೆಯೇನು?

ಅಮ್ಮಗಿ : ಇಲ್ಲ. ಪ್ರತಿಯೊಬ್ಬರೂ ಮಾಡಬೇಕಾದ ಕೆಲಸಗಳು ನಮ್ಮ ಸೈನ್ಯದ ತುಣುಕುಗಳನ್ನು ತೆಗೆದುಕೊಂಡು ಪರಮಾರರನ್ನು ಯಾವ ಯಾವ ನಿಟ್ಟಿನಿಂದ ಅಡ್ಡಗಟ್ಟಬೇಕೆಂಬುದನ್ನೂ ನಿರ್ಧರಿಸಿಯಾಗಿದೆ.

ವಿಕ್ರಮಾದಿತ್ಯ : ಭಿಲ್ಲಮ, ತೈಲಪ.........ನೀವು ಯುವಕರು ನಾಳಿನ ಭವಿಷ್ಯದ ರೂವಾರಿಗಳು. ಈ ಯುದ್ಧದಲ್ಲಿನ ಜಯಾಪಜಯ, ರಾಷ್ಟ್ರಕೂಟ ಸಿಂಹಾಸನದ ರಕ್ಷಣೆಯ ಮುಂದಿನ ಭವಿಷ್ಯವನ್ನು ರೂಪಿಸುತ್ತದೆ. ಈಗ ನಾವೆಲ್ಲ ರಾಷ್ಟ್ರಕೂಟ ಸಿಂಹಾಸನ ರಕ್ಷಣೆ, ಚಕ್ರವರ್ತಿಗಳ ಪ್ರಾಣ ರಕ್ಷಣೆಯ ಪಣತೊಟ್ಟು ಮುಂದುವರೆಯೋಣ.

೦೦

## ದೃಶ್ಯ - ೩

**ನಿರೂಪಣೆ-** (ಇತಿಹಾಸಕಾರ)

[ಪರಮಾರರ ದಾಳಿಯನ್ನು ಎದುರಿಸಲು ಬಿಗಿ ಬಂದೋಬಸ್ತಿನಲ್ಲಿ ಸಕಲ ಸಿದ್ಧತೆಗಳೂ ನಡೆದಿವೆ. ಚಮೂಪತಿಗಳೆಲ್ಲರೂ ವಿಕ್ರಮಾದಿತ್ಯನ ಮಾರ್ಗದರ್ಶನದಲ್ಲಿ ನಿಶ್ಚಿತ ಆಯಕಟ್ಟುಗಳಲ್ಲಿ ಶತ್ರು ಸೈನ್ಯಗಳ ಆಕ್ರಮಣಗಳ ನಿರೀಕ್ಷೆಯಲ್ಲಿದ್ದಾರೆ. ಮಾನ್ಯಖೇಟದ ಅರಮನೆಯಲ್ಲಿ ಉಳಿದಿದ್ದ ಹೆಂಗಸರಿಗೆ ಯುದ್ಧಕ್ಕೆ ಹೊರಟ ಪುರುಷರ ಬಗ್ಗೆ ವ್ಯಾಕುಲವಾಗಿದೆ. ವಿಕ್ರಮಾದಿತ್ಯರ ಪತ್ನಿ, ಪಂಡಿಗರ ಪತ್ನಿ ಜಕ್ಕಿ ಸುಂದರಿ, ತೈಲಪನ ವಧು ಜಕ್ಕಲೆಯವರ ನಡುವೆ ಈ ಸಂದರ್ಭದಿಂದಾಗಿ ಸ್ನೇಹ ಸಂಬಂಧಗಳು ಏರ್ಪಡುತ್ತಿವೆ. ಬೊಂತಾದೇವಿಗೆ ಜಕ್ಕಿ ಸುಂದರಿಯ ಅಂತರ್ಯವನ್ನು ಅರಿಯಬೇಕೆಂಬ ಆಸೆಗೆ ಸುಸಂದರ್ಭ ಒದಗಿದೆ]

**ಬೊಂತಾದೇವಿ** : (ಜಕ್ಕಿ ಸುಂದರಿಯ ಕೋಣೆಯನ್ನು ಪ್ರವೇಶಿಸಿ) ಕ್ಷಮಿಸಬೇಕು. ನಿಮ್ಮಪ್ಪಣೆಯನ್ನು ತೆಗೆದುಕೊಳ್ಳದೇ ನೇರವಾಗಿ ನಿಮ್ಮನ್ನು ಕಾಣಲು ಬಂದೆ.

**ಜಕ್ಕಿ ಸುಂದರಿ** : ಓ ಬನ್ನಿ, ಬನ್ನಿ. ನೀವು ಬಂದದ್ದು ನನಗೆ ನಿಜವಾಗಿಯೂ ಬಹಳ ಸಂತೋಷವಾಗಿದೆ.

**ಬೊಂತಾದೇವಿ** : ಅರಮನೆಯಲ್ಲಿ ಹೊತ್ತು ಕಳೆಯುವುದೇ ಕಷ್ಟವಾಗಿದೆ. ಯುದ್ಧಕ್ಕೆ ಹೋದವರ ಬಗ್ಗೆ ಚಿಂತೆಯಾಗಿದೆ. ಯಾವುದೇ ಸುದ್ದಿ ಬಂದಿಲ್ಲ.

**ಜಕ್ಕಿ ಸುಂದರಿ** : ನೀವು ಅಷ್ಟೊಂದು ಚಿಂತೆಗೆ ಒಳಗಾಗಬೇಕಾದ ಅಗತ್ಯವಿಲ್ಲ. ಎಲ್ಲವೂ ಸಮನಾಗುತ್ತವೆ.

**ಬೊಂತಾದೇವಿ** : ಆದರೂ ಸಮರದ ಪರಿಣಾಮಗಳು ಹೇಗಾಗುವುದೋ? ರಾಜ್ಯ, ಅಧಿಕಾರಗಳೆಂದರೆ, ಶತ್ರುಗಳು. ಯುದ್ಧಗಳು. ಪಿತೂರಿಗಳು ಇವೇ ದಿನನಿತ್ಯದ ಚಿಂತೆಗಳಾಗುತ್ತವೆ.

ಜಕ್ಕಿ ಸುಂದರಿ : ಇವೆಲ್ಲ ಅನಿವಾರ್ಯವೇ ಅಲ್ಲವೇ?

ಚೊಂತಾದೇವಿ : ಅನಿವಾರ್ಯವೆನ್ನುವುದೇನೋ ನಿಜ. ಅರಮನೆಯ ಅಂತರಂಗದಲ್ಲಿ ಏನೇನು ನಿಗೂಢಗಳು ಅಡಗಿವೆಯೋ ಎನ್ನುವುದೇ ಆತಂಕ...... ಹೋಗಲಿ ಬಿಡಿ. ಇದೆಲ್ಲದರಿಂದ ನಿಮ್ಮನ್ನು ಬೇಸರಗೊಳಿಸುವುದಿಲ್ಲ.

ಜಕ್ಕಿ ಸುಂದರಿ : ಅದಕ್ಕೇ ಅಂದದ್ದು. ಮತ್ತೇನಾದರೂ ಮಾತಾಡೋಣ. ಮೊದಲ ಸಲ ಏಕಾಂಗಿಯಾಗಿ ನಾವು ಭೇಟಿಯಾಗುತ್ತಿರುವುದು. ಮನ ಬಿಚ್ಚಿ ಮಾತನಾಡಲು ಯಾರ ಅಭ್ಯಂತರವೂ ಇಲ್ಲ. ಮದುವೆಯ ಸಂದಣಿಯಲ್ಲಿ ನೋಡಿದ್ದು. ನಂತರ ಅವಕಾಶಗಳೇ ದೊರೆಯಲಿಲ್ಲ.

ಚೊಂತಾದೇವಿ : ಬಹಳ ದಿನಗಳಿಂದಲೂ ನಿಮ್ಮನ್ನು ಕಂಡು ಮಾತನಾಡಿಸಬೇಕೆಂದಿದ್ದೆ. ಅವಕಾಶಗಳೇ ಲಭಿಸಲಿಲ್ಲ. ನಿಮ್ಮ ಬಗ್ಗೆ ಅಷ್ಟಿಷ್ಟು ವಿಷಯಗಳು ಕೇಳಿ ಬಂದಿದ್ದವು.

ಜಕ್ಕಿ ಸುಂದರಿ : ನಿಮಗೆ ಅನುಮಾನ ಬೇಸರಗಳನ್ನು ತರಿಸುವಂತಹ ವಿಚಾರಗಳಲ್ಲ ತಾನೇ?

ಚೊಂತಾದೇವಿ : ಛೆ! ಛೆ! ಅದೇನಲ್ಲ. ಈಗೊಂದೆರಡು ಮಾಸಗಳಿಂದ ಪರಸ್ಪರ ನೋಡುತ್ತಿದ್ದೇವೆ. ಏನೋ ಅಷ್ಟೋ ಇಷ್ಟೋ ಸಲಿಗೆಯಿಂದ ಮಾತನಾಡಿಸಬಹುದೆಂಬ ಧೈರ್ಯದಿಂದ ಬಂದಿದ್ದೇನೆ.

ಜಕ್ಕಿ ಸುಂದರಿ : ಹೇಳಿ. ನನ್ನೊಂದಿಗೆ ನಿಸ್ಸಂಕೋಚವಾಗಿ ಮಾತನಾಡಿ. ನನ್ನ ಬಗ್ಗೆ ಕೇಳಬೇಕೆಂದಿರುವುದನ್ನೂ ಧಾರಾಳವಾಗಿ ಕೇಳಿ.

ಚೊಂತಾದೇವಿ : ನನ್ನ ಮಗನ ಮದುವೆಯ ಸಂದರ್ಭದಲ್ಲಿ. ಅವರಿವರಿಂದ. ನೀವೂ ಚಾಲುಕ್ಯವಂಶದವರೆಂಬ ವಿಷಯ ಕೇಳಿ ಬಂತು. ನಾನೂ ಅದೇ ವಂಶದವಳೇ ಅಲ್ಲವೇ? ಸಹಜವಾಗಿ ಕುತೂಹಲ ಉಂಟಾಯಿತು.

ಜಕ್ಕಿ ಸುಂದರಿ : ನಮ್ಮ ಚಾಲುಕ್ಯ ವಂಶದಲ್ಲಿ ಎರಡು ವಾಹಿನಿಗಳಾಗಿ ಒಂದು ವಾತಾಪಿಯಲ್ಲಿ ಮತ್ತೊಂದು ವರುಣದಲ್ಲಿ ನೆಲೆಸಿರುವಂತೆ. ಚಾಲುಕ್ಯ ವಂಶದ ಕೀರ್ತಿ ಪತಾಕೆಯಂತಿದ್ದ ಹರ್ಷವರ್ಧನನ್ನು ಸೋಲಿಸಿದ ಪರಮೇಶ್ವರ ಪುಲಿಕೇಶಿಯವರ ಮಕ್ಕಳು ರಣರಾಗರು ದಕ್ಷಿಣಕ್ಕೆ ಹೋಗಿ ವರುಣದಲ್ಲಿ ನೆಲೆಸಿದರಂತೆ. ತಂದೆಯ ನಂತರ ವಾತಾಪಿಯ ಆಡಳಿತ ದುರ್ಬಲಗೊಂಡು ರಾಷ್ಟ್ರಕೂಟರ ಪಾಲಾಯಿತಂತೆ.

ಚೊಂತಾದೇವಿ : ನಿಜವಾಗಿಯೂ ನನಗೆ ಇದು ಹೊಸ ಸಂಗತಿ. ನಮ್ಮ ವಂಶ ಶಾಖೆಯೊಂದು ವರುಣದಲ್ಲಿ ನೆಲೆಸಿ ಅಭಿವೃದ್ಧಿಯಾದದ್ದು ತುಂಬಾ ರೋಮಾಂಚನಕಾರಿ ಸಂಗತಿಯಾಗಿದೆ. 'ವರುಣ' ಎಲ್ಲಿದೆ?

ಜಕ್ಕಿ ಸುಂದರಿ : ಕಾವೇರಿ ಕಪಿಲಾ ನದಿಗಳ ನಡುವೆ ಇದೆ.

ಬೊಂತಾದೇವಿ : ಅಂದರೆ ಈ ರಾಷ್ಟ್ರಕೂಟ ರಾಜ್ಯದ ದಕ್ಷಿಣಗಡಿ ಎನ್ನಿ.

ಜಕ್ಕಿ ಸುಂದರಿ : ಅದಕ್ಕೆ ರಾಷ್ಟ್ರಕೂಟರು ತಮ್ಮ ರಾಜ್ಯದ ಗಡಿಗಳನ್ನು ಕಾವೇರಿಯಿಂದ ಗೋದಾವರಿ ವರೆಗೆಂದು ಹೆಮ್ಮೆಯಿಂದ ಹೇಳಿಕೊಳ್ಳುವುದು.

ಬೊಂತಾದೇವಿ : ರಣರಾಗರಿಂದ ವಂಶವೃಕ್ಷ ಬೆಳೆದ ಪರಿಯಾದರೂ ತಮಗೆ ತಿಳಿದಿದೆಯೇ?

ಜಕ್ಕಿ ಸುಂದರಿ : ಅದರ ಬಗ್ಗೆ ನನಗೆ ಅಷ್ಟಾಗಿ ತಿಳಿದಿಲ್ಲವೆಂದು ಸಂಕೋಚದಿಂದ ಹೇಳಬೇಕಾಗುತ್ತದೆ.

ಬೊಂತಾದೇವಿ : ಸಂಕೋಚವೇಕೆ. ಅನೇಕ ಸಂದರ್ಭಗಳಲ್ಲಿ ನಾವು ನಮ್ಮ ನಮ್ಮ ವಂಶ ವಿವರಗಳ ವಿಚಾರದಲ್ಲಿ ಅಜ್ಞರೇ! ನಿಮಗೆ ತಿಳಿದಷ್ಟನ್ನು ಮಾತ್ರ ಹೇಳಿ.

ಜಕ್ಕಿ ಸುಂದರಿ : 'ರಣಾವಲೋಕ' ಎಂಬ ಬಿರುದನ್ನು ಪಡೆದಿದ್ದ ಶ್ರೀ ಕಂಬಯ್ಯನವರಿಂದ ಈಚೆಗಷ್ಟೇ ಗೊತ್ತಿದೆ.

ಬೊಂತಾದೇವಿ : ಅಂದರೆ ರಾಷ್ಟ್ರಕೂಟ ಸಾಮಂತರಾದ ಕಂಬಯ್ಯನವರೇ.

ಜಕ್ಕಿ ಸುಂದರಿ : ಹೌದು. ನಿಮ್ಮ ಹಾಗೆ ಅವರೂ ಸಾಮಂತರೇ. ಇವರ ಪುತ್ರರು ಇಬ್ಬರು ದುರ್ಗಯ್ಯ ಮತ್ತು ಗೊಗ್ಗಿನವರು. ಗೊಗ್ಗಿಯವರು ನಮ್ಮ ಮಾವನವರು.

ಬೊಂತಾದೇವಿ : ಮತ್ತೆ ಕಂಬಳಿಗೆ ಹೇಗಾಯಿತು?

ಜಕ್ಕಿ ಸುಂದರಿ : ನಮ್ಮ ಮಾವನವರಿಗೆ ಇಬ್ಬರು ಪತ್ನಿಯರು. ಒಬ್ಬರು ಗಾವಿಲಬ್ಬೆ ಇನ್ನೊಬ್ಬರು ಜಾಕಬ್ಬೆ. ಜಾಕಬ್ಬೆಯವರು ಕದಂಬಳಿಗೆಯವರು.

ಬೊಂತಾದೇವಿ : ಓಹ್. ಹೆಣ್ಣಿನ ಕಡೆಯಿಂದ ಕದಂಬಳಿಗೆ ನಿಮಗೆ ದೊರೆತಿಬಹುದುಲ್ಲ?

ಜಕ್ಕಿ ಸುಂದರಿ : ಹೌದು. ಜಾಕಬ್ಬೆಯವರಿಗೆ ಸೋದರರಿಲ್ಲ. ನನ್ನ ಲಗ್ನದ ಹೊತ್ತಿಗೆ ನನ್ನ ಪತಿದೇವರು ಕದಂಬಳಿಗೆ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.

ಬೊಂತಾದೇವಿ : ಪತಿಯಿಂದಾಗಿ ನೀವು ಚಾಲುಕ್ಯ ವಂಶೀಯರಾದಿರೆನ್ನಿ.

ಜಕ್ಕಿ ಸುಂದರಿ : ನಾ ಹೊಕ್ಕ ಮನೆಯೇ ನನ್ನದಲ್ಲವೇ.

ಬೊಂತಾದೇವಿ : ನಮ್ಮಂತಹ ಹೆಣ್ಣು ಮಕ್ಕಳು ಈ ಬಗೆಯ ವಿಚಾರಗಳನ್ನು ಗಟ್ಟಿಗೊಳಿಸಿಕೊಂಡಾಗಲೇ ಬದುಕು ಸಹನೀಯವೂ ದುಃಖಮಯವೂ ಆದೀತು.

ಜಕ್ಕಿ ಸುಂದರಿ : ನಮ್ಮ ನಿಮ್ಮ ಹಾಗೆ ಎಲ್ಲ ಹೆಣ್ಣು ಮಕ್ಕಳೂ ಅಂದುಕೊಳ್ಳಬೇಕಲ್ಲ! ಜೊತೆಗೆ ಕೆಲವೊಮ್ಮೆ ರಾಜಕೀಯ ಕಾರಣಗಳಿಂದಾಗಿ ಹೆಣ್ಣು ಮಕ್ಕಳ ಮನಸ್ಸಿನಲ್ಲಿ ಕಿರಿ ಕಿರಿ ಉಂಟಾಗುವುದೂ ಉಂಟು.

ಬೊಂತಾದೇವಿ : ಅಂತಹ ಸಂದರ್ಭಗಳಲ್ಲಿ, ನಾವು ರಾಜಕೀಯದಿಂದ ದೂರ ಇದ್ದು ಬಿಟ್ಟರೆ ಎಲ್ಲ ಸರಿ ಹೋಗುತ್ತದೆ.

ಜಕ್ಕಿ ಸುಂದರಿ : ಹಾಗೆ ಇರಬೇಕೆಂದರೂ ಕೆಲವೊಮ್ಮೆ ಇರಲಾಗುವುದಿಲ್ಲ.

ಬೊಂತಾದೇವಿ : 'ಕೆಲವೊಮ್ಮೆ' ಎಂಬ ಮಾತಿಗೆ ವಿಶೇಷ ಅರ್ಥವಿದೆಯೇನೋ ಎನಿಸುತ್ತದೆ.

ಜಕ್ಕಿ ಸುಂದರಿ : ಹೆಣ್ಣು ಕೊಟ್ಟು ತರುವ ಅರಸು ಮನೆತನಗಳು ಶತ್ರುಗಳಾಗಿ ರಾಜ್ಯಕ್ಕಾಗಿ, ಸಿಂಹಾಸನಕ್ಕಾಗಿ ಕತ್ತಿ ಮಸೆಯುತ್ತಾ ಕಾದಾಡುವುದನ್ನು ಕಾಣುತ್ತಿಲ್ಲವೇ? ಕೇಳುತ್ತಿಲ್ಲವೇ?

ಬೊಂತಾದೇವಿ : ಸ್ವಾರ್ಥ ಮನುಷ್ಯನಲ್ಲಿ ಹೆಚ್ಚಾದಾಗ ಸಂಬಂಧಗಳನ್ನು ಮನುಷ್ಯತ್ವವನ್ನು ಮರೆತು ಶಾಶ್ವತವಲ್ಲದ ರಾಜ್ಯ ಸುಖಕ್ಕಾಗಿ ಹೊಡೆದಾಡಿಕೊಂಡು ಸಾವನ್ನಪ್ಪುತ್ತಾರೆ. ನಿಜ. ಆದರೆ ಚಾಲುಕ್ಯ ಮನೆತನಕ್ಕೆ ಸೇರಿದ ಯಾವ ಹೆಣ್ಣಿನಿಂದಲೂ ಇಲ್ಲೀವರೆಗೆ ಅಂತಹ ಸಮಸ್ಯೆ ಹುಟ್ಟಿಕೊಂಡಿಲ್ಲ.

ಜಕ್ಕಿ ಸುಂದರಿ : ಈಗೇನಾದರೂ ಹುಟ್ಟಿಕೊಳ್ಳುವ ಸಂಭವ ಇದೆಯೇನು?

ಬೊಂತಾದೇವಿ : ಸಂಭವ ಇದೆಯೋ ಇಲ್ಲವೋ ಖಚಿತವಾಗಿ ಹೇಳಲಾಗುವುದಿಲ್ಲ.........

ಜಕ್ಕಿಸುಂದರಿ : ಈಗ ದೇವಗಿರಿಗೆ ನಿಮ್ಮ ಯಜಮಾನರು ಹೋಗಿದ್ದಾರೇನು?

ಬೊಂತಾದೇವಿ : ಹೋಗಿದ್ದಾರೆ. ಯಾಕೆ ನಿಮಗೆ ವಿಷಯ ತಿಳಿದಿಲ್ಲವೇ?

ಜಕ್ಕಿ ಸುಂದರಿ : ಇಲ್ಲ.

ಬೊಂತಾದೇವಿ : ಅರಮನೆಯಲ್ಲಿ ಎಲ್ಲರೂ ಬಲ್ಲರು.

ಜಕ್ಕಿ ಸುಂದರಿ : ಹಾಗಾದರೆ ಗಬ್ಬೇಂದ್ರರು ಇಲ್ಲೇ ಇರುವರೇನು?

ಬೊಂತಾದೇವಿ : ಅವರು ಬನವಾಸಿ ಪ್ರಾಂತಕ್ಕೆ ಕೇವಲ ಆಡಳಿತಾಧಿಕಾರಿ. ಖೊಟ್ಟಿಗರ ಮಗ ಕೃಷ್ಣನನ್ನು ಸಿಂಹಾಸನಕ್ಕೆ ತರುವ ಸಂಚಿನಲ್ಲಿದ್ದಾರೆ. ಅವರನ್ನು ದೇವಗಿರಿಗೆ ಕಳಿಸುವುದು ಅಪಾಯವೆಂದು ನನ್ನ ಪತಿಯ ಅಭಿಪ್ರಾಯ.

ಜಕ್ಕಿ ಸುಂದರಿ : ಹಾಗಾದರೆ ನಿಮ್ಮ ಬೆಂಬಲ ಖೊಟ್ಟಿಗರ ಸಂತಾನಕ್ಕಿಲ್ಲ ಎಂದಾಯಿತು.

ಬೊಂತಾದೇವಿ : ಅದನ್ನು ನಾವು ಬಹಿರಂಗವಾಗಿ ತೋರಿಸಿಕೊಳ್ಳುತ್ತಿಲ್ಲ.

ಜಕ್ಕಿ ಸುಂದರಿ : ಮತ್ತೆ ನೀವು ಯಾರ ಪರವಾಗಿ ನಿಲ್ಲುತ್ತೀರಿ?

ಬೊಂತಾದೇವಿ : ನಾನು ಹೆಣ್ಣು. ಹೀಗೆ ಎಂದು ಸ್ವ ನಿರ್ಧಾರದಿಂದ ಹೇಳುವುದಕ್ಕೆ ಆಗುವುದಿಲ್ಲ. ಯುದ್ಧಕ್ಕೆ ಹೊರಡುವ ಮೊದಲು ನಾನು ನನ್ನ

ಪತಿಯನ್ನು ಇದೇ ಪ್ರಶ್ನೆ ಕೇಳಿದೆ. ಆದರೆ ಅವರು ಅದಕ್ಕೆ ಪ್ರತಿಕ್ರಿಯಿಸಲಿಲ್ಲ. ಮೊದಲು ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಒದಗಿರುವ ಆಪತ್ತಿನಿಂದ ರಕ್ಷಿಸುವ ಕೆಲಸ, ನಂತರವೇ ಉಳಿದದ್ದು. ಅಲ್ಲೀವರೆಗೆ ಈ ವಿಚಾರವನ್ನು ಮಾತನಾಡದಿರುವುದೇ ಒಳ್ಳೆಯದು ಎಂದು ಪ್ರಶ್ನೆಯನ್ನು ದಾಟಿಸಿ ಬಿಟ್ಟರು................ ಹೋಗಲಿ ನೀವು ಯಾರ ಪರವಾಗಿದ್ದೀರಿ?

**ಜಕ್ಕಿ ಸುಂದರಿ** : ನೀವು ಕೊಟ್ಟ ಉತ್ತರವೇ ನನ್ನದು. ಮೊದಲಿಗೆ ಶತ್ರು ಬಾಧೆಯಿಂದ ಬಿಡುಗಡೆ ನಂತರವೇ ಉಳಿದದ್ದು.

**ಬೊಂತಾದೇವಿ** : (ಮೌನ)

**ಜಕ್ಕಿ ಸುಂದರಿ** : ಯಾಕೆ ಸುಮ್ಮನಾದಿರಿ?

**ಬೊಂತಾದೇವಿ** : ನಿಮ್ಮ ಮಾತುಗಳನ್ನು ಕೇಳುತ್ತಿದ್ದರೆ ನನ್ನ ಯಜಮಾನರು ನನಗೆ ಹೇಳಿದ ಮಾತುಗಳ ಪ್ರತಿಧ್ವನಿಯಂತಿದೆ. ಅದಕ್ಕೇ ನಿಮ್ಮ ಯಜಮಾನರು ನನ್ನವರೊಡನೆ ಆಪ್ತ ಸಮಾಲೋಚನೆ ನಡೆಸಿರಬಹುದೇನೋ ಎಂಬ ಅನುಮಾನ ಬರುತ್ತಿದೆ.

**ಜಕ್ಕಿ ಸುಂದರಿ** : ಅದು ನನಗೆ ಗೊತ್ತಿಲ್ಲ. ಹಾಗೊಂದು ವೇಳೆ ಅವರ ನಡುವೆ ಸಮಾಲೋಚನೆ ನಡೆದಿದ್ದರೆ ಖಂಡಿತವಾಗಿ ನನ್ನವರು ನನಗೆ ಹೇಳುತ್ತಿದ್ದರು.

**ಬೊಂತಾದೇವಿ** : ಯುದ್ಧ ಮುಗಿಸಿ ಹಿಂತಿರುಗಿ ಬರುವವರೆಗೆ ನಮಗೆ ಏನೊಂದು ವಿಷಯವೂ ತಿಳಿಯುವುದಕ್ಕೆ ಸಾಧ್ಯವಿಲ್ಲ. ಅಲ್ಲೀವರೆಗೆ ನಮ್ಮವರು ನೀಡಿರುವ ಎಚ್ಚರಿಕೆಯಂತೆ ಬಾಯಿಬಿಗಿ ಹಿಡಿದು ಆಗುವುದರ ನಿರೀಕ್ಷೆಯಲ್ಲಿ ಕಾಲದೂಡಬೇಕಾಗಿದೆ.

**ಜಕ್ಕಿ ಸುಂದರಿ** : ಎಲ್ಲವೂ ಸರಿ. ಗಬ್ಬಿಂದ್ರರು ಇಲ್ಲಿಗೆ ಬಂದಿರುವ ಉದ್ದೇಶ ಮಾತ್ರ ತಿಳಿಯದಾಗಿದೆ. ಹೇಗಾದರೂ ಮಾಡಿ ಅವರ ಅಂತರ್ಯವನ್ನು ಅರಿಯಲೇ ಬೇಕು.

**ಬೊಂತಾದೇವಿ** : ಅದು ಸಾಧ್ಯವಾಗುವುದು ನಿಮ್ಮಿಂದ ಮಾತ್ರ.

**ಜಕ್ಕಿ ಸುಂದರಿ** : ಅಷ್ಟು ಖಂಡಿತವಾಗಿ ಹೇಗೆ ಹೇಳಬಲ್ಲಿರಿ?

**ಬೊಂತಾದೇವಿ** : ನಾನು ಹೇಳಿದರೆ ನೀವು ತಪ್ಪಾಗಿ ಭಾವಿಸಬಾರದು.

**ಜಕ್ಕಿ ಸುಂದರಿ** : ಇಲ್ಲ ಹೇಳಿ. ನಾನೇನೂ ಅಂದುಕೊಳ್ಳುವುದಿಲ್ಲ.

**ಬೊಂತಾದೇವಿ** : ಅದೇ ನಿಮಗೆ ಅವರಿಗೆ ತುಂಬಾ ಸಲಿಗೆಯ ಸ್ನೇಹವಿದೆಯೆಂದು ಕೇಳಿದ್ದೇನೆ. ಅದಕ್ಕೇ ಅವರು ನಿಮ್ಮ ಮುಂದೆ ಯಾವುದನ್ನೂ

ಮರೆಮಾಚದೆ ತಮ್ಮ ಆಲೋಚನೆಗಳನ್ನು ಬಿಚ್ಚಿಡಬಹುದು ಎನಿಸಿದೆ. ಅರಮನೆಯಲ್ಲಿ ಪ್ರತಿಯೊಬ್ಬರ ಬಾಯಲ್ಲಿ ನಿಮ್ಮ ಸ್ನೇಹ ಕುರಿತಾಗಿಯೇ ಚರ್ಚೆಗಳು. ಪಿಸು ಮಾತುಗಳು ಕೇಳಿ ಬರುತ್ತಿವೆ.

ಜಕ್ಕಿ ಸುಂದರಿ : ಸರಿಯಾಗಿಯೇ ಎಲ್ಲವನ್ನೂ ಗ್ರಹಿಸಿದ್ದೀರಿ. ಆದರೆ ನಿಜದಲ್ಲಿ ಅದು ಸುಳ್ಳು. ನಾವೇ ಆ ರೀತಿಯ ಅಭಿಪ್ರಾಯವನ್ನು ಹುಟ್ಟು ಹಾಕಿದ್ದೇವೆ.

ಚೊಂತಾದೇವಿ : ನಾವು ಅಂದರೆ?

ಜಕ್ಕಿ ಸುಂದರಿ : ನಾನು ಮತ್ತು ನನ್ನ ಯಜಮಾನರು.

ಚೊಂತಾದೇವಿ : ಹೀಗೇಕೆ ಪ್ರಚಾರ ಮಾಡಿ ಅಪವಾದಕ್ಕೆ ಗುರಿಯಾಗುತ್ತೀರಿ?

ಜಕ್ಕಿ ಸುಂದರಿ : ರಾಜಕೀಯ ಆಟಗಳನ್ನು ಆಡುವಾಗ ಅಪವಾದ, ಅವಮಾನ, ಅವಮರ್ಯಾದೆಗಳಿಗೆ ಹೆದರಿ ಕುಳಿತುಕೊಳ್ಳುವುದು ಸಾಧ್ಯವಿಲ್ಲ. ಇಂಥವೆಲ್ಲವನ್ನೂ ನಿರೀಕ್ಷಿಸಿಯೇ ರಾಜಕೀಯ ರಂಗ ಪ್ರವೇಶ ಮಾಡಬೇಕಾಗುವುದು. ನನಗೆ ಇದರಿಂದ ಯಾವ ನಷ್ಟವೂ ಇಲ್ಲ.

ಚೊಂತಾದೇವಿ : ನಷ್ಟವಿಲ್ಲದಿದ್ದರೂ ಯಾವುದಾದರೂ ಲಾಭವು ಇರಲೇಬೇಕಲ್ಲ.

ಜಕ್ಕಿ ಸುಂದರಿ : ಲಾಭವಿದೆ. ಅದಕ್ಕೇ ಈ ಆಟ. ಗಬ್ಬೀಂದ್ರರ ಅಂತರಂಗವನ್ನು ಅರಿಯುವುದು ನನಗೆ ಮುಖ್ಯ. ನಮ್ಮಿಬ್ಬರ ಸಲಿಗೆಯ ಒಡನಾಟಕ್ಕೆ ನನಗೆ ಸಲ್ಲದ ಬಿರುದುಗಳೆಲ್ಲ ಸಂದಿವೆ. ನನಗೆ ಅದರ ಹೆದರಿಕೆಯಿಲ್ಲ. ನನ್ನ ಕಾರ್ಯದಲ್ಲಿ ಯಶಸ್ವಿಯಾಗಬೇಕು. ಅದಷ್ಟೇ ನನ್ನ ಚಿಂತೆ.

ಚೊಂತಾದೇವಿ : ನಿಮ್ಮ ಧೈರ್ಯ, ರಾಜಕೀಯ ಸೂಕ್ಷ್ಮತೆಗಳ ಅರಿವು ಕಾರ್ಯನಿಷ್ಠೆಗಳು ನನ್ನನ್ನು ಮೂಕವಿಸ್ಮಿತಳನ್ನಾಗಿ ಮಾಡಿವೆ.

ಜಕ್ಕಿ ಸುಂದರಿ : ಎಲ್ಲೀವರೆಗೆ ಆತ್ಮ ಶುದ್ಧಿಯನ್ನು ರಕ್ಷಿಸಿಕೊಳ್ಳುತ್ತೇವೋ ಅಲ್ಲೀವರೆಗೆ ನಮಗೆ ಅವರಿವರ ಮಾತುಗಳು ಮುಖ್ಯವಾಗುವುದಿಲ್ಲ.

ಚೊಂತಾದೇವಿ : ನಿಮ್ಮನ್ನು ಮಾತನಾಡಿಸುತ್ತಾ ಹೋದಷ್ಟೂ ನೀವು ಇನ್ನಷ್ಟು ಆಳಕ್ಕಿಳಿಯುತ್ತಿರುವಂತೆ ತೋರುತ್ತದೆ. ನಿಗೂಢರಾಗುತ್ತಾ ಹೋಗುತ್ತೀರಿ. ನನ್ನ ಯಜಮಾನರು ಹೇಳಿದ ಮಾತು ಸತ್ಯ.

ಜಕ್ಕಿ ಸುಂದರಿ : (ಆಶ್ಚರ್ಯದಿಂದ) ನಿಮ್ಮ ಯಜಮಾನರು ನನ್ನ ಬಗ್ಗೆ ಹೇಳಿದರೆ? ಅವರಿಗೂ ನನ್ನ ಬಗ್ಗೆ ಹಗುರವಾದ ಹರಟೆ ಮಾತುಗಳು ಕೇಳಿಸಿರಬೇಕು.

ಚೊಂತಾದೇವಿ : ನನ್ನ ಯಜಮಾನರು ಅಂತಹುದಕ್ಕೆಲ್ಲ ಕಿವಿಗೊಡುವುದಿಲ್ಲ. ವ್ಯಕ್ತಿಗಳನ್ನು ನೋಡುತ್ತಿದ್ದಂತೆ ಅವರು ಹೀಗೆ ಎಂದು ಅಳೆದು ನಿರ್ಧರಿಸಬಲ್ಲರು.

ಜಕ್ಕಿ ಸುಂದರಿ : ಹಾಗಾದರೆ ನನ್ನ ಬಗ್ಗೆ ಏನು ಹೇಳಿದರು?

**ಬೊಂತಾದೇವಿ** : ಸ್ನೇಹಕ್ಕೆ ಯೋಗ್ಯರು. ಅವರನ್ನು ಕಂಡು ಮಾತನಾಡಿಸು. ಅವಕಾಶ ಸಿಕ್ಕರೆ, ಎಂದರು.

**ಜಕ್ಕಿ ಸುಂದರಿ** : ನಿಜವಾಗಿ ಹಾಗೆ ಹೇಳಿದ್ದರೆ. ನಾನು ಅದೃಷ್ಟವಂತೆ!

**ಬೊಂತಾದೇವಿ** : ಎಲುಬಿಲ್ಲದ ನಾಲಗೆಗಳು ಹೇಗೆಂದರೆ ಹಾಗೆ ಹೊರಳಾಡುತ್ತವೆ. ನೀವೆಂದಂತೆ ಅಂತರಂಗ ಶುದ್ಧಿ, ಆತ್ಮ ಪ್ರಜ್ಞೆಯ ಸಹಜತೆಗಳಿದ್ದರೆ ಸಾಕು.

**ಜಕ್ಕಿ ಸುಂದರಿ** : ನಿಮ್ಮ ಕಿವಿಗೆ ನನ್ನ ವಿಚಾರಬಿದ್ದ ಗಳಿಗೆಗಳಲ್ಲಾದರೂ ನನ್ನ ಬಗ್ಗೆ ಕೆಡುಕೆನಿಸಿರಬೇಕಲ್ಲ?

**ಬೊಂತಾದೇವಿ** : ಹಾಂ! ಬಿದ್ದಿದೆ. ಆದರೆ ಅದೇಕೋ ನಿಮ್ಮನ್ನು ನೋಡಿದ್ದ ನನಗೆ. ಆ ಮಾತುಗಳಲ್ಲಿ ನಂಬಿಕೆ ಬರಲಿಲ್ಲ. ಅದು ನಿಜವೆಂದು ಒಪ್ಪುವುದಕ್ಕೂ ನನ್ನ ಮನಸ್ಸು ಸಿದ್ಧವಿರಲಿಲ್ಲ.............ಹೋಗಲಿ ಬಿಡಿ ಕೆಲಸಕ್ಕೆ ಬಾರದ ಮಾತುಗಳಿಂದ ಆಗುವ ಪ್ರಯೋಜನವಾದರೂ ಏನು?............ಯುದ್ಧ ಭೂಮಿಯಿಂದ ಏನಾದರೂ ಬೇಹು ಬಂದಿರಬಹುದೇ?

**ಜಕ್ಕಿ ಸುಂದರಿ** : ನಿಮಗೇ ನೇರವಾಗಿ ಬರಬಹುದಲ್ಲ?

**ಬೊಂತಾದೇವಿ** : ನನಗೇನೂ ನೇರವಾಗಿ ಬರುವುದಿಲ್ಲ. ಒಂದು ವೇಳೆ ಬರುವುದೇ ಆದರೆ ನನ್ನ ಮಗನ ಮೂಲಕ ಬರುತ್ತದೆ. ನನ್ನ ಸೊಸೆಗೆ ತಂದೆಯ ದೊಡ್ಡಪ್ಪನವರಿಂದ ಏನಾದರು ಬಂದಿದ್ದರೆ! ನಾಲ್ಕೈದು ಮಾಸಗಳಿಂದ ಸುದ್ದಿ ಹಸಿವಿನಿಂದ ಕಂಗಲಾಗಿದ್ದೇವೆ.

**ಜಕ್ಕಿ ಸುಂದರಿ** : ಒಂದು ಪಕ್ಷದ ಹಿಂದೆ ಸುದ್ದಿ ಬಂದಿತ್ತು. ವಿಷಯ ಹೆಚ್ಚಿರಲಿಲ್ಲ. ಪರಮಾರರನ್ನು ಹೇಗೆ ಸಿಕ್ಕಿಸಬೇಕೆಂಬ ಯುದ್ಧ ತಂತ್ರದ ನೀತಿಯ ಯೋಜನೆ ರೂಪಿತವಾಗುತ್ತಿತ್ತಂತೆ. ಆದಷ್ಟು ಬೇಗ ಪರಮಾರ ಸೀಯಕ ಹರ್ಷನ ಹುಟ್ಟಡಗಿಸುವ ಭರವಸೆ ಮೂಡುತ್ತಿದೆ ಎಂಬುದಾಗಿತ್ತು, ಸುದ್ದಿ.

**ಬೊಂತಾದೇವಿ** : ಯುದ್ಧದ ರೀತಿ–ನೀತಿಗಳನ್ನು ಅರಿಯುವಷ್ಟು ಜಾಣ್ಮೆ ನನ್ನಲಿಲ್ಲ.

**ಜಕ್ಕಿ ಸುಂದರಿ** : ನಾನು ಮಾತ್ರ ಬಲ್ಲನೆ?

**ಬೊಂತಾದೇವಿ** : ಆದಷ್ಟು ಬೇಗ ಯುದ್ಧದ ಬೇಗೆ ಕಳೆದು ವಿಜಯ ಡಿಂಡಿಮದೊಂದಿಗೆ ಹಿಂತಿರುಗಿ ತಣ್ಣಗೆ ಉಸಿರಾಡುವಂತೆ ಆದರೆ ಸಾಕು.

**ಜಕ್ಕಿ ಸುಂದರಿ** : ಅಷ್ಟೊಂದು ಬೇಸರಗೊಂಡಿದ್ದೀರಿ ಏಕೆ? ಅರಮನೆಯಲ್ಲಿ ನಿಮಗೇನಾದರೂ ತೊಂದರೆಯಾಗಿದೆಯೇ? ಹಾಗಿದ್ದರೆ ಹೇಳಿ. ನಾನು ನಿಮಗೆ ಸರಿಯಾದ ವ್ಯವಸ್ಥೆ ಮಾಡಿಸುತ್ತೇನೆ.

**ಬೊಂತಾದೇವಿ** : ಛೆ! ಛೆ! ನಮಗೆ ಯಾವುದೇ ತೊಂದರೆಯಿಲ್ಲ. ಎಲ್ಲವೂ ವ್ಯವಸ್ಥಿತವಾಗಿದೆ. ಆದರೆ ಬೀಗರ ಮನೆಯಲ್ಲಿ ಎಷ್ಟು ದಿನಾಂತ ಕಾಲ ತಳ್ಳುವುದು. ಒಂದು ಬಗೆಯ ಕಸಿಪಿಸಿ ಮನಸ್ಸಿಗೆ ಅಷ್ಟೆ!

**ಜಕ್ಕಿ ಸುಂದರಿ** : ಕಸಿಪಿಸಿಗೆ ಅವಕಾಶವೆಲ್ಲಿದೆ. ಅರಮನೆಯಲ್ಲಿ ಮಹಾರಾಣಿ, ರಾಣಿ. ಯುವರಾಣಿಯರೂಂತ ಇದ್ದರೆ ನಿಮ್ಮ ಕಸಿಪಿಸಿಗೆ ಕಾರಣ ಅರ್ಥವಾಗುತ್ತಿತ್ತು. ಈಗ ಮಹಾರಾಜರೂ ಒಂಟಿ. ಕರ್ಕದೇವರೂ ಒಂಟಿ. ಅಲ್ಲದೆ ನಿಮ್ಮ ಸೊಸೆಗೆ ಇದು ತವರು ಮನೆ ತಾನೇ? ಈಗ ಸದ್ಯಕ್ಕಂತೂ ಅವಳೇ ಇಲ್ಲಿಗೆ ಒಡತಿ........ಮತ್ತೇಕೆ ನೀವು ಬೇಸರವೆಂದುಕೊಳ್ಳುತ್ತೀರಿ?

**ಬೊಂತಾದೇವಿ** : ಎಷ್ಟಾದರೂ ನಮ್ಮ ಮನೆಯಲ್ಲಿ ನಮಗೆ ಮೂಡುವ ಸ್ವತಂತ್ರಭಾವ, ಸ್ವೇಚ್ಛೆಗಳು ಬಂದ ಕಡೆಯಲ್ಲಿ ಬರಲು ಸಾಧ್ಯವೇ?

**ಜಕ್ಕಿ ಸುಂದರಿ** : ನೀವು ಹೇಳುವ ಮಾತು ನೂರಕ್ಕೆ ನೂರು ಪಾಲು ಸತ್ಯ. ಆದರೂ ಒಮ್ಮೆ ಬಂದಾಗ ಆದಷ್ಟು ನಮ್ಮದೆನ್ನುವ ಭಾವನೆಯಿಂದ ವರ್ತಿಸಿದಾಗ ಇಲ್ಲಿನ ಜನರೊಂದಿಗೆ ಆತ್ಮೀಯತೆಯೊಂದಿಗೆ ಬೆರೆಯಲು ಅನುಕೂಲವಾಗುತ್ತದೆ. ಈಗ ನೋಡಿ ನನ್ನನ್ನೇ! ನಾನಿಲ್ಲಿಗೆ ಬಂದು ಎಷ್ಟು ಕಾಲವಾಯಿತು?

**ಬೊಂತಾದೇವಿ** : ಜಕ್ಕಿಯವರೇ ನಿಮಗಾದರೆ ಒಂದು ಗುರಿಯಿದೆ; ರಾಜಕೀಯ ಉದ್ದೇಶವಿದೆ. ಅದಕ್ಕೇ ನಿಮಗೆ ಬೇಡವೆನಿಸಿದರೂ ಅನಿವಾರ್ಯವಾಗಿದೆ.

**ಜಕ್ಕಿ ಸುಂದರಿ** : ಬೀಗರಾಗಿರುವುದರಿಂದ ನಿಮಗೂ ಅನಿವಾರ್ಯವೇ! (ಕಂಸಾಳವ ಸದ್ದು ಕೇಳಿಸುವುದು) (ತೈಲಪ ಜಕ್ಕಲೆಯರು, ಜಯಲಕ್ಷ್ಮಿ ಪ್ರವೇಶಿಸುತ್ತಾರೆ).

**ಬೊಂತಾ+ಜಕ್ಕಿ**: ಅರೆ ಯಾವಾಗ ಬಂದಿರಿ? ನೀವು ಬಂದದ್ದು ನಮ್ಮ ಗಮನಕ್ಕೆ ಬರಲೇ ಇಲ್ಲ.

**ಬೊಂತಾದೇವಿ** : ಏನೋ ಹೀಗೆ ಮಾತಾಡುತ್ತ ಮೈಮರೆತಿದ್ದೆವು. ಹೊತ್ತು ಹೋದದ್ದೇ ತಿಳಿಯಲಿಲ್ಲ.

**ಜಕ್ಕಿ ಸುಂದರಿ** : ಅದೇಕೆ ಸಂಕೋಚದಿಂದ ಅಲ್ಲೇ ನಿಂತಿರಿ. ಬಂದು ಇಲ್ಲಿ ಕುಳಿತುಕೊಳ್ಳಿ.

**ತೈಲಪ** : ನಾವು ಬಂದು ಆಗಲೇ ಒಂದೈದು ಗಳಿಗೆಗಳಾದವು. ನೀವು ಗಂಭೀರವಾದ ಚರ್ಚೆಯಲ್ಲಿ ತೊಡಗಿರುವಂತೆ ಅನಿಸಿದ್ದರಿಂದ ನಾನೂ ಜಕ್ಕಲೆ ಸುಮ್ಮನೆ ನಿಂತೆವು.

**ಬೊಂತಾದೇವಿ** : (ನಗುತ್ತಾ) ಬಹಳ ದೊಡ್ಡ ಕೆಲಸ ಮಾಡಿದಿರಿ. ಮಾತೃ ಸಮಾನರಾದವರ ಮುಂದೆ ಸಂಕೋಚಗಳೇಕೆ?

ಜಕ್ಕಿ ಸುಂದರಿ : ನಮ್ಮ ನಡುವೆ ಗಂಭೀರವಾದ ಮಾತೂ ಇಲ್ಲ ಗುಟ್ಟಿನ ಮಾತೂ ಇಲ್ಲ.

ಬೊಂತಾದೇವಿ : ಇನ್ನೇನು ಇರುತ್ತದೆ. ಯುದ್ಧಕ್ಕೆ ಹೋಗಿರುವ ಗಂಡಸರ ಬಗ್ಗೆ ಸ್ವಲ್ಪ ಆತಂಕ. ಸುರಕ್ಷಿತವಾಗಿ ಹಿಂದಿರುಗಲೆಂಬ ಹಾರೈಕೆ. ಅದನ್ನೇ ಮಾತಾಡುತ್ತಿದ್ದೆವು. ಸುದ್ದಿಗಳೇನಾದರೂ ಬಂದಿರಬಹುದೇ ಎಂದು ಆಲೋಚಿಸುತ್ತಿದ್ದೆವು.

ಜಕ್ಕಿ ಸುಂದರಿ : ತೈಲಪ ಕುಮಾರರ ಶಸ್ತ್ರ ವಿದ್ಯಾಭ್ಯಾಸ ಎಲ್ಲೀವರೆಗೆ ಬಂತೋ?

ತೈಲಪ : ಪರವಾಗಿಲ್ಲ. ತೃಪ್ತಿಕರವಾಗಿಯೇ ಮುನ್ನಡೆದಿದೆ.

ಜಕ್ಕಿ ಸುಂದರಿ : ನೀವು ಅಭ್ಯಾಸ ನಿರತರಾಗಿದ್ದಾಗ ಗಬ್ಬೀಂದ್ರರು ಎಂದಾದರೂ ಬಂದಿದ್ದರೇನು?

ತೈಲಪ : ಬರುವ ಮೊದಲು ನಿಮಗೆ ಹೇಳಿರಬಹುದಲ್ಲ?

ಬೊಂತಾದೇವಿ : ತೈಲಪ ಹಾಗೆಲ್ಲ ಉತ್ತರಿಸಬಾರದು. ಕೇಳಿದ ಪ್ರಶ್ನೆಗೆ ನೇರವಾಗಿ ವಿನಯದಿಂದ ಉತ್ತರಿಸಬೇಕು. ಆಗಲೇ ಅದು ಸಭ್ಯತೆ ಎನಿಸಿಕೊಳ್ಳುವುದು.

ಜಕ್ಕಿ ಸುಂದರಿ : ಹೋಗಲಿ ಬಿಡಿ ವಯಸ್ಸು ಕಿರಿದು. ಲೋಕ ಜ್ಞಾನ ಸಾಲದು. ಅವರು ಹಾಗೆ ಉತ್ತರಿಸಿದ್ದರಿಂದ ನನಗೇನೂ ಬೇಸರವಿಲ್ಲ.

ತೈಲಪ : ನನ್ನ ಉದ್ಧಟತನವನ್ನು ಕ್ಷಮಿಸಬೇಕು..........

ಜಕ್ಕಿ ಸುಂದರಿ : ಇರಲಿ ಬಿಡು ಮಗು.

ತೈಲಪ : ಗಬ್ಬೀಂದ್ರರು ಒಂದೆರಡು ಸಲ ಬಂದಿದ್ದರು. ನನಗೆ ಬಿಲ್ವಿದ್ಯೆ ಕಲಿಸುತ್ತಿದ್ದ ನನ್ನಿಯರಸರ ಕೂಡ ಏನೋ ಮಾತನಾಡಿ ಹೊರಟು ಹೋದರು.

ಜಕ್ಕಿ ಸುಂದರಿ : ಆ ನನ್ನಿಯರಸರು ಹೇಗೆ?

ತೈಲಪ : ಸ್ವಲ್ಪ ಸಿಡುಕು ಸ್ವಭಾವದವರು.

ಜಕ್ಕಿ ಸುಂದರಿ : ನಿನ್ನ ಮೇಲೂ ಸಿಡುಕುತ್ತಾರೆಯೇ?

ತೈಲಪ : ಹೂಂ ತಪ್ಪು ಮಾಡಿದರೆ ಸಿಡುಕದೆ ಇರುತ್ತಾರೆಯೇ?

ಜಕ್ಕಿ ಸುಂದರಿ : ಅವರು ಕಲಿಸಿರುವುದು ಎಷ್ಟರಮಟ್ಟಿಗೆ ಸಾಗಿದೆ?

ತೈಲಪ : ನಮ್ಮ ಮಾವನವರು ಕಲಿಸಿದ ಕರವಾಳ ವಿದ್ಯೆಯಷ್ಟೇ ಸಾಗಿದೆ.

ಜಕ್ಕಿ ಸುಂದರಿ : ಶಸ್ತ್ರ ವಿದ್ಯೆಯ ಜೊತೆಗೆ ರಾಜವಂಶಗಳ ಕಥೆಗಳನ್ನು ಹೇಳುತ್ತಿದ್ದರೇನು?

ತೈಲಪ : ಹುಂ! ಹೇಳುತ್ತಿದ್ದರು. ಹಾಗೆಯೇ ಅವಕಾಶವಾದಾಗಲೆಲ್ಲ ಕಲಿತ ವಿದ್ಯೆಯನ್ನು ಖೊಟ್ಟಿಗ ಪ್ರಭುಗಳ ಏಳಿಗೆಗಾಗಿ ವಿನಿಯೋಗಿಸಬೇಕೆಂದು ಸೂಚಿಸುತ್ತಿದ್ದರು.

ಜಕ್ಕಿ ಸುಂದರಿ : ಇದರ ಅರ್ಥ ನನ್ನಿಯರಸರ ನಿಷ್ಠೆ ಖೊಟ್ಟಿಗರ ಕಡೆಗೆ ಇದೆ ಎಂದಾಯಿತು.

ತೈಲಪ : ಸದ್ಯಕ್ಕೆ ಹಾಗೇ ಎನಿಸುತ್ತದೆ.

ಜಕ್ಕಿ ಸುಂದರಿ : ಸದ್ಯಕ್ಕೆ ಎಂದರೆ?..............ಮುಂದೆ ಬದಲಾಗಬಹುದು ಎಂಬ ಅನುಮಾನಕ್ಕೆ ದಾರಿಯಾಗಿದೆಯೇ?

ತೈಲಪ : ಇನ್ನೊಬ್ಬರ ನಿಷ್ಠೆಯ ಬಗ್ಗೆ ಮಾತಾಡುವಷ್ಟು ಯೋಗ್ಯತೆ ನನಗಿಲ್ಲ. ನಾನೇನಿದ್ದರೂ ನನ್ನ ತಂದೆಯ ಆದೇಶದಂತೆ ಅವರು ಹೇಳಿದಷ್ಟನ್ನು ಮಾತ್ರ ನಿರ್ವಹಿಸುತ್ತೇನೆ.

ಜಕ್ಕಿ ಸುಂದರಿ : ನಿಷ್ಠೆ ಬದಲಾಯಿಸುವ ಜನ ಇದ್ದಾಗಲೂ ನೀವು ತಂದೆಯ ಮಾತಿನಂತೆಯೇ ನಡೆಯುವವರೋ?

ತೈಲಪ : ಹೌದು. ಇಲ್ಲೀವರೆಗೆ ಅವರು ಹಾಕಿದ ಗೆರೆ ದಾಟಲಿಲ್ಲ. ಅವರ ಮಾತಿಗೆ ಪ್ರತಿ ಆಡಲಿಲ್ಲ. ನನ್ನ ಮದುವೆಯ ವಿಚಾರದಲ್ಲೂ ನನ್ನ ಸ್ವಂತಿಕೆಯಿಲ್ಲ. ನಾವಿಬ್ಬರೂ ಇದಕ್ಕೆ ಸಾಕ್ಷಿ. ತಂದೆ ತಾಯಿಗಳು ನಿರ್ಧರಿಸಿದ್ದನ್ನು ಒಪ್ಪಿಕೊಂಡೆವು.

ಜಕ್ಕಿ ಸುಂದರಿ : ಮಕ್ಕಳು ತಂದೆ ತಾಯಿಯರನ್ನು ಗೌರವಿಸಬೇಕಾದ ರೀತಿಯೇ ಇದು.

ತೈಲಪ : ಆ ಭಾವನೆಯಿಂದಲೇ ಯಾವುದೇ ಪ್ರತಿರೋಧವಿಲ್ಲದೆ ಒಪ್ಪಿಕೊಂಡೆವು.

ಜಕ್ಕಿ ಸುಂದರಿ : ಮಕ್ಕಳ ಶ್ರೇಯೋಭಿಲಾಷೆ ಉಳ್ಳ ತಂದೆ ತಾಯ್ಗಳು ಅವರ ಭವ್ಯ ಭವಿಷ್ಯತ್ತಿನ ಆಲೋಚನೆಯೊಂದಿಗೇ ಮಕ್ಕಳ ಸಂಬಂಧವಾಗಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾರೆ. ಆದ್ದರಿಂದ ಅವರ ಯಾವುದೇ ನಿರ್ಣಯಗಳ ಬಗ್ಗೆ ಮಕ್ಕಳು ಅಸಮಾಧಾನಪಟ್ಟುಕೊಳ್ಳಬೇಕಾದ್ದಿಲ್ಲ.

ತೈಲಪ : ನನ್ನ ತಂದೆ ತಾಯ್ಗಳ ವಿಚಾರದಲ್ಲಂತೂ ನೀವು ಹೇಳಿದ್ದೆಲ್ಲ ನೂರಕ್ಕೆ ನೂರರಷ್ಟು ಸತ್ಯ.

ಜಕ್ಕಿ ಸುಂದರಿ : ನಿನ್ನ ತಂದೆ ತಾಯ್ಗಳ ಹಾರೈಕೆಯಂತೆ, ನಾನೂ ಆ ನಿಟ್ಟಿನಿಂದಲೇ ಮನಃ ಪೂರ್ವಕವಾಗಿ ನಿಮ್ಮನ್ನು ಆಶೀರ್ವದಿಸುತ್ತೇನೆ. ನಿಮ್ಮ ದಾಂಪತ್ಯ ಹಾಲ್ಜೇನಿನಂತೆ ಸವಿಯಾಗಿರಲಿ. ನಿಮ್ಮ ಪೂರ್ವಿಕರ ವೈಭವ ಮರಳಿ ಬಂದು ಚಾಲುಕ್ಯ ಚಕ್ರೇಶ್ವರನಾಗಿ ನೀನು ಮೆರೆಯುವಂತಾಗಲಿ.

ತೈಲಪ : ಹಿರಿಯರ ಆಶೀರ್ವಾದ ಫಲಿಸಿದರೆ ನಾನು ನಿಜವಾಗಿಯೂ ಧನ್ಯನಾದೆ. ನನ್ನ ತಂದೆಯ ಕನಸು ನನಸಾಗಿಸುವ ಗೌರವ ನನ್ನದಾದರೆ ಈ ಜನ್ಮದಲ್ಲಿ ಮತ್ತೊಂದರ ಹಾರೈಕೆಯಿಲ್ಲ.

ಜಕ್ಕಿ ಸುಂದರಿ : ಬನ್ನಿ. ಈ ಆತ್ಮೀಯ ಸಮಾವೇಶವನ್ನು ಇಲ್ಲಿಗೆ ಮುಗಿಸೋಣ. ಆರೋಗಣೆಗೆ ವೇಳೆಯಾಗಿದೆ..........ಸಂಜೆಗೆ ಸಾಧ್ಯವಾದರೆ ಮತ್ತೆ ಸೇರೋಣ. ಒಂದಷ್ಟು ಸುದ್ದಿಗಳು ಬಂದು ಸೇರುವ ಅವಕಾಶವಿದೆ.

– – ವಿರಾಮ – –

ತೈಲಪ : ಜಕ್ಕಲೆ, ಜಕ್ಕಿ ಸುಂದರಿಯವರೊಡನೆ ಮಾತನಾಡುವಾಗ ನಿನ್ನನ್ನು ಗಮನಿಸುತ್ತಲೇ ಇದ್ದೆ. ಅವರ ಬಗ್ಗೆ ನಿನಗುಂಟಾಗಿರುವ ಅನುಮಾನಗಳು ದೂರವಾದಂತೆ ಕಾಣಲಿಲ್ಲ. ಅವರ ಪ್ರತಿ ಮಾತನ್ನು ಸಂದೇಹಿಸುತ್ತಿರುವಂತೆಯೇ ನನಗನ್ನಿಸಿತು.

ಜಕ್ಕಲೆ : ಹೌದು. ನಾನೇನೋ ಅವರನ್ನು ನಂಬಿದಂತೆ ಎನಿಸಲಿಲ್ಲವೆಂದು ಹೇಳಿದಿರಿ. ನಿಮಗೆ ಮಾತ್ರ ಅವರ ವಿಚಾರದಲ್ಲಿ ಪೂರ್ಣ ನಂಬಿಕೆಯೆಂದು ಎದೆ ಮುಟ್ಟಿ ಹೇಳಬಲ್ಲಿರಾ?

ತೈಲಪ : ನಿಜ ಜಕ್ಕಲೆ. ನನಗೂ ಅವರ ಸ್ವಭಾವದ ಜಾಡು ಹಿಡಿಯಲು ಸಾಧ್ಯವಾಗಿಲ್ಲವಾಗಿದೆ. ನಮ್ಮೆಲ್ಲರ ಭಾವನೆಯಂತೆ ಆಕೆ ಗಬ್ಬೀಂದ್ರರ ಕಡೆಯವಳು. ಗಬ್ಬೀಂದ್ರರು ಚಕ್ರವರ್ತಿ ಖೊಟ್ಟಿಗರ ಪರವಾಗಿರುವಂತೆ ಇವರೂ ಅವರ ಪರವೇ!

ಜಕ್ಕಲೆ : ಹೌದು, ಅವರು ನಿಮ್ಮ ಗುರುಗಳು ನನ್ನಿಯರಸರ ಬಗ್ಗೆ ಕೇಳಿದಾಗ ಅವರ ಮುಖಭಾವವನ್ನು ಗಮನಿಸಲಿಲ್ಲವೇ?

ತೈಲಪ : ಅವರು ಕೇಳಿದ ಪ್ರಶ್ನೆ ಸಹಜವಾದದ್ದೆ ಅಲ್ಲವೇ? ಅಪಾರ್ಥಗಳಿಗೆ ಅವಕಾಶವೇ ಇಲ್ಲಂದಂತಹ ಪ್ರಶ್ನೆ ಅದಾಗಿತ್ತು.

ಜಕ್ಕಲೆ : ಪ್ರಶ್ನೆ ಸಹಜವಿರಬಹುದು. ನಿಮ್ಮ ಗುರುಗಳ ಆದೇಶವನ್ನು, ಅದೇ ನಿಮ್ಮೆಲ್ಲ ಶಕ್ತಿ ಸಾಮರ್ಥ್ಯಗಳು ಖೊಟ್ಟಿಗರ ಸೇವೆಗೆ ಮೀಸಲಿಡಬೇಕೆಂದು ಹೇಳಿದ ಮಾತುಗಳನ್ನು ಕೇಳಿ ಮುಖದಲ್ಲಿನ ಸಂತೋಷಕ್ಕಿಂತ ಕಣ್ಣುಗಳಲ್ಲಿ ಕೆಂಡಗಳು ಕಾಣಿಸಿಕೊಂಡವು.

ತೈಲಪ : ಅಂದರೆ ಗುರುಗಳ ಸಲಹೆ ಆಕೆಗೆ ಇಷ್ಟವಾಗಲಿಲ್ಲ ಎಂದಾಯಿತು.

ಜಕ್ಕಲೆ : ನನಗೇನೋ ಆ ಕ್ಷಣಗಳಲ್ಲಿ ಆ ಅರ್ಥವನ್ನೇ ಹೊಳೆಸಿತು. ಏನಾದರಾಗಲಿ ಜಕ್ಕಿ ಸುಂದರಿಯವರು ಬಹಳ ನಿಗೂಢರಾಗಿ ಕಾಣುತ್ತಾರೆ. ಅವರ ಆಂತರ್ಯದ ಜಾಡು ಹಿಡಿಯುವುದೇ ದೊಡ್ಡ ಪ್ರಯಾಸದ ಕೆಲಸ.

ತೈಲಪ : ಅವ್ವೆಗೆ ಹೇಗೆ ಅನಿಸಿರಬಹುದು!.....ಇತ್ತೀಚೆಗೆ ಅವರಿಬ್ಬರ ನಡುವಿನ ಸ್ನೇಹ ಬಲಿಯುತ್ತಿದೆ. ಜಕ್ಕಿ ಸುಂದರಿಯವರು ಅವ್ವೆಯೊಂದಿಗೆ

ಮನತೆರೆದು ಮಾತನಾಡುತ್ತಿರಬಹುದು. ಅವ್ವೆಯ ರೀತಿ ನೋಡಿದರೆ, ಜಕ್ಕಿ ಸುಂದರಿಯವರನ್ನು ಪೂರ್ತಿಯಾಗಿ ನಂಬಿದಂತಿದೆ.

ಜಕ್ಕಲೆ : ನಾವೇ ತೀರ್ಮಾನಿಸುವುದಕ್ಕೆ ಬದಲಾಗಿ ಅವ್ವೆಯನ್ನು ಕಂಡು ಖುದ್ದಾಗಿ ನೀವೇ ವಿಚಾರಿಸಿ ತಿಳಿಯಬಹುದಲ್ಲ.

ತೈಲಪ : ಹೌದು ಹಾಗೇ ಮಾಡೋಣ.

ಜಕ್ಕಲೆ : ಆಕೆಯ ಪತಿ ಪಂಡಿಗರು ನಮ್ಮವರ ಜೊತೆಗೇ ಹೋಗಿದ್ದಾರೆ. ಅವರಿಂದ ನಮ್ಮ ಮಾವನವರಿಗಾಗಲೀ ಅಥವಾ ನಮ್ಮ ಕಡೆಯವರಿಗಾಗಲೀ ಏನೂ ವಂಚನೆ ಆಗಲಾರದಲ್ಲ!

ತೈಲಪ : ವಿನಾಕಾರಣ ಏನೇನೋ ಕಲ್ಪಿಸಿ ಮಾತನಾಡುತ್ತಿರುವೆ. ಎಲ್ಲರೂ ಚಕ್ರವರ್ತಿಗಳ ಪರವಾಗಿ ಹೋರಾಟ ಮಾಡಲು ಹೋಗಿರುವಾಗ ಯಾರಿಗೇಕೆ ತೊಂದರೆಯಾಗುತ್ತದೆ, ಹೇಳು.

ಜಕ್ಕಲೆ : ಹೊರಟವರೆಲ್ಲರೂ ಚಕ್ರವರ್ತಿಗಳ ಪರ ಎಂದು ಮೇಲು ನೋಟಕ್ಕೆ ಕಾಣಿಸಿಕೊಳ್ಳಬಹುದು. ಅವರಲ್ಲಿ ಕೆಲವಾದರೂ ನನ್ನ ತಂದೆಯ ಪರ ಇದ್ದಾರೆ. ಅಕಸ್ಮಾತ್ತಾಗಿ ಅವರೇನಾದರೂ ಮೈಮರೆವಿನಲ್ಲಿ ನನ್ನ ತಂದೆಯ ಆಸೆಯನ್ನು ಹೊರಗೆಡಹಿದರೆ ದೊಡ್ಡ ಅನಾಹುತ ಸಂಭವಿಸಬಹುದು.

ತೈಲಪ : ನನಗೆ ತಿಳಿದ ಮಟ್ಟಿಗೆ ಅಂತಹವರು ಯಾರೂ ಇಲ್ಲ. ನಿನ್ನ ತಂದೆಯ ಪರ ಇರುವವರೆಂದರೆ ನನ್ನ ತಂದೆ, ನನ್ನ ಮಾವ ಅಮ್ಮುಗಿ, ಯಾಧವ ವಾಡುಗಿ ಇಷ್ಟೇ ಮಂದಿ. ಇವರ ಹೊರತು ಮತ್ತೊಬ್ಬರಿಗೆ ಈ ವಿಷಯ ತಿಳಿದಿಲ್ಲ.

ಜಕ್ಕಲೆ : ಹಾಗಾದರೆ ನಮ್ಮ ಮನಸ್ಸನ್ನು ತಿಳಿಯಲು ಜಕ್ಕಿ ಸುಂದರಿಯವರು ಈ ಸ್ನೇಹದ ನಾಟಕ ಆಡುತ್ತಿರಬಹುದೇ?

ತೈಲಪ : ನಿನಗೆ ಆಕೆಯ ಬಗ್ಗೆ ಅಷ್ಟೊಂದು ಅನುಮಾನವಿದ್ದರೆ ಇನ್ನು ಮುಂದೆ ಅವರಿಂದ ಆದಷ್ಟು ದೂರ ಇದ್ದುಬಿಡೋಣ.

ಜಕ್ಕಲೆ : ಹಾಗೆ ಮಾಡಿದರೆ ಹುಚ್ಚರಾಗುತ್ತೇವೆ. ನಾವೂ ಆಕೆಯೊಂದಿಗೆ ಸ್ನೇಹದಿಂದ ಇರುತ್ತಲೇ ಪ್ರತಿಯೊಂದು ಚಲನವನ್ನು ಗಮನಿಸಬೇಕು. ಹೇಗಾದರೂ ಉಪಾಯಾಂತರದಿಂದ ಆಕೆಯ ಅಂತರಂಗವನ್ನು ಭೇದಿಸುವ ಕೆಲಸ ಮಾಡಬೇಕು.

**ತೈಲಪ** : ಹೌದು ಹಾಗೆಯೇ ಮಾಡೋಣ. ನೀನು ನಿನ್ನ ಪ್ರಯತ್ನದಲ್ಲಿರು. ನಾನು ನನ್ನ ಪ್ರಯತ್ನದಲ್ಲಿರುತ್ತೇನೆ. ಜಕ್ಕಿ ಸುಂದರಿಯವರು ಸಂಜೆಗೆ ಸುದ್ದಿ ಬರಬಹುದೆಂದು ಹೇಳಿದ್ದರು. ನಾನೀಗಲೇ ಹೋಗಿ ಅವರನ್ನು ಕಾಣುತ್ತೇನೆ. ಅವರು ಹೇಳುವುದೆಲ್ಲವನ್ನೂ ಕೇಳಿ ನಮಗೆ ಯಾವುದು ಅನುಕೂಲ ಎಂಬುದನ್ನು ತಿಳಿದು, ವೇಷಾಂತರದಲ್ಲಿ ಹೋಗಿ ತಂದೆಯವರನ್ನು ಕಂಡು ಮಾತನಾಡಿ ಬರುತ್ತೇನೆ.

– – ವಿರಾಮ – –

**ಜಕ್ಕಲೆ** : ಇದೇನು ಸ್ವಾಮಿ ಹೀಗೆ ಅಸ್ವಸ್ಥರಂತೆ ಶತಪಥಿಸುತ್ತಿದ್ದೀರಿ. ಜಕ್ಕಿ ಸುಂದರಿಯವರನ್ನು ಕಂಡು ಬಂದಿರಾ?

**ತೈಲಪ** : ಹಾಂ! ಜಕ್ಕಿ ಸುಂದರಿಯವರನ್ನು ಕಾಣಲು ಹೋದರೆ ಅವ್ವೆಯೂ ಅಲ್ಲಿದ್ದರು. ನನಗೆ ಆಶ್ಚರ್ಯವಾಯಿತು. ಆದರೆ ಅದನ್ನು ನಾನು ತೋರಿಸಿಕೊಳ್ಳದೆ ಸಹಜವಾಗಿ ಇದ್ದು ಬಿಟ್ಟೆ.

**ಜಕ್ಕಲೆ** : ಜಕ್ಕಿ ಸುಂದರಿಯವರು ಏನೂ ಹೇಳಲಿಲ್ಲವೇ?

**ತೈಲಪ** : ಹೇಳಿದರು. ಅದರಿಂದಲೇ ಮನಸು ಕಸಿವಿಸಿಯಾಗಿದೆ.

**ಜಕ್ಕಲೆ** : ಏನು ಹೇಳಿದರು?

**ತೈಲಪ** : ನಮ್ಮ ತಂದೆ, ನಿಮ್ಮ ತಂದೆ ಮತ್ತು ನಮ್ಮೆಲ್ಲರ ಗುರಿಗೆ ಗಬ್ಬೀಂದ್ರರಿಂದ ತೊಂದರೆಯಾಗಲಿದೆಯಂತೆ. ಅರಮನೆಯ ವ್ಯವಹಾರಗಳಲ್ಲಿ ಗಬ್ಬಿಂದ್ರರ ಅತಿಯಾದ ಹಸ್ತಕ್ಷೇಪವಾಗುತ್ತಿದೆ ಎಂದು ತಿಳಿಸಿದರು.

**ಜಕ್ಕಲೆ** : ಯಾವ ಬಗೆಯ ಹಸ್ತಕ್ಷೇಪ?

**ತೈಲಪ** : ಖೊಟ್ಟಿಗರ ಮಗ ಕೃಷ್ಣನನ್ನು ಬನವಾಸಿಯಿಂದ ಸೈನ್ಯವನ್ನು ತೆಗೆದುಕೊಂಡು ಬಂದು ರಾಜಧಾನಿಯನ್ನು ಆಕ್ರಮಿಸುವಂತೆ ಆದೇಶ ಹೋಗಿದೆಯಂತೆ.

**ಜಕ್ಕಲೆ** : ಅಯ್ಯಯ್ಯೋ! ಹಾಗಾದರೆ ಇಲ್ಲಿನ ಗತಿ?

**ತೈಲಪ** : ಅದಕ್ಕೇ ಹೇಳುತ್ತಿರುವುದು. ಕೃಷ್ಣನ ಸೈನ್ಯ ಇಲ್ಲಿಗೆ ಬರುವುದಕ್ಕೆ ಮೊದಲೇ ಇಲ್ಲಿನ ಆಡಳಿತದ ಸೂತ್ರ ನಿಮ್ಮ ತಂದೆಯವರ ಗುರಿ ಮುಟ್ಟಿಸುವಂತಹ ನಂಬಿಕಸ್ಥರ ಕೈ ಸೇರಬೇಕು. ಈ ವಿಷಯಗಳು ನಿಮ್ಮ ತಂದೆಯವರಿಗೆ ತಲುಪಿಸುವ ವ್ಯವಸ್ಥೆಯಾಗಬೇಕು. ಎಂದು ಹೇಳಿದರು.

ಜಕ್ಕಲೆ : ಅದಕ್ಕೆ ನೀವೇನು ಯೋಚಿಸಿದ್ದೀರಿ?

ತೈಲಪ : ಯಾರನ್ನಾದರೂ ದೇವಗಿರಿಯತ್ತ ಓಡಿಸಬೇಕು. ಇಲ್ಲ ನಾನೇ ಹೋಗಬೇಕು...........ಅದು ಸರಿ ನಾನು ಬಂದು ಸಾಕಷ್ಟು ಸಮಯವಾಯಿತು. ನೀನೆಲ್ಲಿಗೆ ಪಾದ ಬೆಳೆಸಿದ್ದೆ?

ಜಕ್ಕಲೆ : ಚಕ್ರವರ್ತಿಗಳು ಕರೆ ಕಳಿಸಿದ್ದರು.

ತೈಲಪ : (ಆಶ್ಚರ್ಯದಿಂದ) ಚಕ್ರವರ್ತಿಗಳ ಕರೆಯೇ? ಏನು ವಿಶೇಷ?

ಜಕ್ಕಲೆ : ಅವರು ಯಾವುದಕ್ಕೋ ತಳಮಳಗೊಂಡಿದ್ದಾರೆ. ಪರಿಸ್ಥಿತಿ ಏನೆಂದು ಅವರಿಗೆ ತಿಳಿದುಬಂದಿಲ್ಲ. ಯುದ್ಧದ ವಿಚಾರವಾಗಿಯೂ ಗಾಭರಿಗೊಂಡಿದ್ದಾರೆ. ಏನಾಗುವುದೋ ಎಂಬ ಭೀತಿಗೆ ಒಳಗಾಗಿದ್ದಾರೆ.

ತೈಲಪ : ಯಾಕೆ? ಒಂದೊಂದು ವಿವರವನ್ನೂ ನೀಡಬಲ್ಲ ಅವರ ಆಪ್ತವರ್ಗದ ಗಬ್ಬೀಂದ್ರರು ಇಲ್ಲೇ ಇರುವರಲ್ಲ.

ಜಕ್ಕಲೆ : ಅವರು ಹೇಳಿರಬಹುದಾದ ವಿಷಯದಿಂದಲೇ ದಿಕ್ಕು ಕಾಣದವರಂತಾಗಿದ್ದಾರೆ ಎಂಬುದು ನನ್ನ ಭಾವನೆ.

ತೈಲಪ : ಏನು ಅಂತಹ ವಿಷಯ?

ಜಕ್ಕಲೆ : ಅದೇ ಪರಮಾರರಿಂದ ರಾಷ್ಟ್ರಕೂಟರ ಸೋಲು ಖಂಡಿತ ಎಂಬ ಸುದ್ದಿ. ರಾಜವಂಶದವರಿಗೆ ಇನ್ನು ಉಳಿಗಾಲವಿರುವುದಿಲ್ಲ. ಬನವಾಸಿಯಿಂದ ಸೈನ್ಯದ ನಿರೀಕ್ಷೆ ಇದೆ. ಅದು ಬಂದ ಕೂಡಲೇ ಎಲ್ಲರೂ ಬನವಾಸಿಗೆ ಹೊರಟು ಬಿಡೋಣ ಎನ್ನುತ್ತಿದ್ದಾರೆ.

ತೈಲಪ : ಈ ರೀತಿಯ ಭಯ ಹುಟ್ಟಿಸಿರುವವರು ಗಬ್ಬೀಂದ್ರರೇ ಆಗಿರುವುದರಿಂದ, ಇದರ ಹಿಂದೆ ಅವರ ಪಿತೂರಿ ಇದೆ ಎಂದು ಅರ್ಥ........ನೀನೇನೆನ್ನುತ್ತಿ?

ಜಕ್ಕಲೆ : ಗಬ್ಬೀಂದ್ರರು ಅವರ ಕಡೆಗೇ ಎಂದ ಮೇಲೆ ಇಂತಹ ಸುದ್ದಿಗಳನ್ನು ಹಬ್ಬಿಸಿ ಅವರು ಪಡೆದುಕೊಳ್ಳುವ ಲಾಭವಾದರೂ ಏನಿದ್ದೀತು?

ತೈಲಪ : ನಾವೆಲ್ಲ ಅಷ್ಟು ಸುಲಭವಾಗಿ ಊಹಿಸಬಹುದಾದರೆ ರಾಜಕೀಯ ನಿಗೂಢತೆಗೆ ಅರ್ಥವೆಲ್ಲಿರುತ್ತೆ.

ಜಕ್ಕಲೆ : ನೇರವಾಗಿ ಯುದ್ಧ ಶಿಬಿರದಿಂದ ಬೇಹು ಬಂದಲ್ಲದೆ ಇಂತಹ ಸುದ್ದಿಗಳಿಗೆ ಹೆದರಿಕೊಳ್ಳುವುದೇಕೆ?

ತೈಲಪ : ಬೇಹು ಬರದಿರುವುದೇ ಹೆದರಿಕೆಗೆ ಕಾರಣವಾಗಬಹುದಲ್ಲ? ...........ರಾಜಧಾನಿಯಲ್ಲಿ ಬೇರೆ ಏನೋ ಸಮಸ್ಯೆ ತಲೆ ಹಾಕಲಿದೆ, ಈ ಗಬ್ಬೀಂದ್ರರಿಂದ. ಅದಕ್ಕೇ ನಮ್ಮ ಸೈನ್ಯಕ್ಕೆ ಸುದ್ದಿ ಮುಟ್ಟಿಸಬೇಕೆಂದು

ಜಕ್ಕಿ ಸುಂದರಿಯವರು ಹೇಳಿದ್ದು. ನಿನಗೆ ತಿಳಿದ ನಂಬಿಕಸ್ಥ ಅಂಕಕಾರರನ್ನು ವೇಗಾಶ್ವದೊಂದಿಗೆ ಸುದ್ದಿ ಮುಟ್ಟಿಸಲು ಕಳಿಸೋಣ.

**ಜಕ್ಕಲೆ** : ಹಾಗಾದರೆ ಯಾರನ್ನು ಕಳಿಸೋಣ?

**ತೈಲಪ** : ನನಗಿಂತಲೂ ಇಲ್ಲಿನವರ ಸ್ವಭಾವ. ಪರಿಚಯ ನಿನಗೇ ಚೆನ್ನಾಗಿದೆ. ನೀನೇ ಯಾರನ್ನಾದರೂ ಸೂಚಿಸು. ನಾನು ಈ ವಿಷಯ ಹೇಳಲೆಂದೇ ಬಂದೆ.

**ಜಕ್ಕಲೆ** : ಯಾರನ್ನು ನಂಬುವುದೋ.............ದೊಡ್ಡ ಸಮಸ್ಯೆಯೇ ಆಗಿದೆ.

**ತೈಲಪ** : ಈಗ ನೋಡು ನಿನ್ನ ತಂದೆ ಯುದ್ಧ ಶಿಬಿರದಲ್ಲಿ ಇದ್ದಾರೆ. ನಮ್ಮ ತಂದೆಯ ಅಪ್ಪಣೆ ಇಲ್ಲದೆ ನಾನಾಗಲೀ, ನನ್ನ ತಾಯಿಯಾಗಲೀ, ನೀನಾಗಲೀ ಇಲ್ಲಿಂದ ಕದಲುವ ಹಾಗೇ ಇಲ್ಲ. ಒಂದು ವೇಳೆ ಚಕ್ರವರ್ತಿಗಳು ಒತ್ತಾಯ ಮಾಡಿದರೆ ನಮ್ಮ ನಿರ್ಧಾರ ಹೇಳಿ ಬಿಡೋಣ.

**ಜಕ್ಕಲೆ** : ಹಾಗೇ ಮಾಡೋಣ. ಅವರು ಹೋಗುವುದಾದರೆ ಬನವಾಸಿಗೆ ಹೋಗಲಿ ಇಲ್ಲವಾದರೆ ನಮ್ಮೊಟ್ಟಿಗೆ ಇರಲಿ.

**ತೈಲಪ** : ಯಾರೂ ಸಿಗದಿದ್ದರೆ ನಾನೇ ವೇಷಾಂತರ ಮಾಡಿಕೊಂಡು ಹೋಗೋಣವೆಂದಿದ್ದೇನೆ.

**ಜಕ್ಕಲೆ** : ಹಾಗಾದರೆ ಇನ್ನೂ ಒಳ್ಳೆಯದೇ. ಬೇಕಾದರೆ ಜೊತೆಗೆ ಚಮೂಪ ಸೋದರರಾದ ಮಲ್ಲಪ, ಪುನ್ನಿಮಯ್ಯರನ್ನು ಕರೆದೊಯ್ಯಬಹುದು.

**ತೈಲಪ** : ನಾನು ಹೋಗುವುದಕ್ಕೆ ಮೊದಲು 'ಅವ್ವೆ'ಯನ್ನು, ಜಕ್ಕಿ ಸುಂದರಿಯವರನ್ನು ಮತ್ತೊಮ್ಮೆ ಕಂಡು ಅವರು ಏನು ಹೇಳುತ್ತಾರೆಂದು ಕೇಳೋಣ.

**ಸೇವಕ** : (ಪ್ರವೇಶಿಸಿ) ರಾಜಕುಮಾರರು ಕ್ಷಮಿಸಬೇಕು. ಈ ಕೂಡಲೇ ತಾವಿಬ್ಬರೂ ಚಕ್ರವರ್ತಿಗಳನ್ನು ಕಾಣಬೇಕಂತೆ.

**ತೈಲಪ** : ವಿಷಯ ಏನಂತೆ?

**ಸೇವಕ** : ತಿಳಿಯದು. ಬಹಳ ಆತುರದಲ್ಲಿದ್ದಂತೆ ತೋರುತ್ತಿದ್ದರು.

**ತೈಲಪ** : ಸರಿ. ಹಾಗಾದರೆ ನೀನು ಹೋಗು. ಇನ್ನೊಂದೆರಡು ಗಳಿಗೆಗಳಲ್ಲಿ ಬಂದು ಕಾಣುತ್ತೇವೆ.........ಇನ್ನೂ ಯಾರಿಗಾದರೂ ಬರಹೇಳಿದ್ದಾರೇನು?

**ಸೇವಕ** : ತಿಳಿಯದು

**ತೈಲಪ** : ಸರಿ. ನೀನು ಹೋಗು.

ತೈಲಪ : ಜಕ್ಕಲೆ ಪರಿಸ್ಥಿತಿ ನಾವು ಊಹಿಸುವುದಕ್ಕಿಂತ ಗಂಭೀರವಾಗಿದೆ. ನಾವು ತ್ವರೆ ಮಾಡಿ ಅವ್ವೆಯನ್ನು ಜಕ್ಕಿ ಸುಂದರಿಯವರನ್ನು ಕಂಡು ಮಾತಾಡಿಕೊಂಡು ಚಕ್ರವರ್ತಿಗಳನ್ನು ಕಾಣುವುದು ಒಳ್ಳೆಯದು. ಏಕೆಂದರೆ ನಮ್ಮ ತೀರ್ಮಾನಕ್ಕೆ ಅವ್ವೆಯವರ ಬೆಂಬಲವೂ ಇದ್ದಂತೆ ಆಗುವುದು.

ಜಕ್ಕಲೆ : ಹಾಗಾದರೆ ತ್ವರೆ ಮಾಡಿ.

– – ವಿರಾಮ – –

ಜಕ್ಕಲೆ : ಏನು ತಾತನವರೇ ಇಷ್ಟೊಂದು ಆತುರವಾಗಿ ಹೇಳಿ ಕಳಿಸಿದಿರಿ?

ಖೊಟ್ಟಿಗ : ಬನ್ನಿ ಮಕ್ಕಳೆ. ನಿಮಗೆ ನಾನು ಕರೆ ಕಳಿಸಿದ್ದು ಬೇಸರವಿಲ್ಲ ತಾನೇ?

ತೈಲಪ : ಬೇಸರವೇನು ಬಂತು? ವಿಷಯ ತಿಳಿಸಿ.

ಖೊಟ್ಟಿಗ : ಏನಿಲ್ಲ ಮಗು. ನಮ್ಮ ಅನಿಶ್ಚಿತವಾದ ಸೋಲು ಗೆಲುವುಗಳ ಯೋಚನೆಯಿಂದ ಅಧೀರನಾಗಿದ್ದೇನೆ. ಪರಮಾರರದೇ ಮೇಲುಗೈಯಾಗಿದೆಯಂತೆ. ರಾಷ್ಟ್ರಕೂಟರ ಸೋಲು ನಿಶ್ಚಿತವೆಂಬ ಸುದ್ದಿಯೇ ಹೆಚ್ಚು ವಿಶ್ವಾಸನೀಯವಾಗಿ ತೋರುತ್ತಿದೆ. ನಮ್ಮವರಿಂದ ಯಾವುದೇ ಸುದ್ದಿ ಬಂದಿಲ್ಲ.

ತೈಲಪ : ಅದಕ್ಕಾಗಿ ಗಾಬರಿಯಾಗಿ ರಾಜಧಾನಿ ಬಿಟ್ಟು ಓಡಿ ಹೋಗಬೇಕೇಕೆ?

ಖೊಟ್ಟಿಗ : ನಿನಗೆ ತಿಳಿಯುವುದಿಲ್ಲ ಮಗು. ಶತ್ರುಗಳು ಇಲ್ಲಿಗೆ ನುಗ್ಗಿ ಅರಮನೆಯ ಆಸ್ತಿ ಪಾಸ್ತಿ. ಜನ ಯಾವುದನ್ನೂ ಬಿಡುವುದಿಲ್ಲ. ಆಸ್ತಿ ಪಾಸ್ತಿ ಹೋದರೆ ಹೋಗಲಿ. ಪ್ರಾಣಕ್ಕೆ ಸಂಚಕಾರ ಬರಬಾರದಲ್ಲ ಅದಕ್ಕೆಂದೇ ಎಲ್ಲರೂ ಸೈನ್ಯದ ರಕ್ಷಣೆಯಲ್ಲಿ ಬನವಾಸಿಗೆ ಹೋಗಿ ಬಿಡೋಣ ಎಂದೆ.

ತೈಲಪ : ತಾತನವರೇ ನಿಮ್ಮ ಆಲೋಚನೆ ನಿಮ್ಮ ತರ್ಕದಿಂದ ಸರಿಯೆನಿಸಬಹುದಾದರೆ, ಇದಕ್ಕೆ ನನ್ನ ಸಹಮತಿಯಿಲ್ಲ.

ಖೊಟ್ಟಿಗ : ಅಂದರೆ ನೀವು ಬನವಾಸಿಗೆ ಬರುವುದಿಲ್ಲವೇ?

ತೈಲಪ : ಕ್ಷಮಿಸಬೇಕು. ನನ್ನ ತಂದೆಯವರ ಆದೇಶವಿಲ್ಲದೆ ನಾನು ಈ ಅರಮನೆ ಬಿಟ್ಟು ಎಲ್ಲಿಗೂ ಹೋಗಲಾರೆ. ನಾನಷ್ಟೇ ಅಲ್ಲ ನನ್ನವ್ವೆ, ಜಕ್ಕಲೆ ನಾವು ಯಾರೂ ಇಲ್ಲಿಂದ ಕದಲುವುದಕ್ಕೆ ಇಷ್ಟಪಡುವುದಿಲ್ಲ.

ಖೊಟ್ಟಿಗ : ಅಂದರೆ ಶತ್ರುಗಳ ಆಕ್ರಮಣದ ಭೀತಿ ಇಲ್ಲವೇ?

ತೈಲಪ : ಆದದ್ದು ಆಗಲಿ. ರೆಟ್ಟೆಯಲ್ಲಿ ಬಲವಿರುವವರೆಗೆ ಶತ್ರುಗಳನ್ನು ಎದುರಿಸಿ ಈ ಅರಮನೆಯನ್ನು ಅರಮನೆಯ ಜನರನ್ನು ರಕ್ಷಿಸಲು ಯತ್ನಿಸುತ್ತೇನೆ. ಉಳಿದದ್ದು ದೇವರಿಗೆ ಬಿಡುತ್ತೇನೆ.

ಖೊಟ್ಟಿಗ : ಅಂದರೆ ನೀವು ಬರುವುದಿಲ್ಲ ಹಾಗಾದರೆ?

ತೈಲಪ : ಖಂಡಿತ ಇಲ್ಲ.

ಗಬ್ಬೀಂದ್ರ : ಮಧ್ಯೆ ಪ್ರವೇಶಿಸುತ್ತಿರುವುದಕ್ಕೆ ಕ್ಷಮಿಸಬೇಕು. ಕುಮಾರ ಚಕ್ರವರ್ತಿಗಳು ನಿಮ್ಮ ಕ್ಷೇಮದ ದೃಷ್ಟಿಯಿಂದ ಹೇಳುತ್ತಿದ್ದಾರೆ. ಮತ್ತೊಮ್ಮೆ ಆಲೋಚಿಸು.

ತೈಲಪ : ಇದು ನನ್ನೊಬ್ಬನ ತೀರ್ಮಾನವಲ್ಲ. ನಮ್ಮ ತೀರ್ಮಾನ! ನನ್ನ ಅವ್ವೆಯೂ ಇಲ್ಲಿಂದ ಹೊರಡಲು ಒಪ್ಪುತ್ತಿಲ್ಲ......ಇಷ್ಟಕ್ಕೂ ನೀವೆಲ್ಲಿ ಇರುತ್ತೀರಿ?

ಗಬ್ಬೀಂದ್ರ : ನಾನೇ............? ನಾನು ಪ್ರಭು ಸೇವಕ. ಪ್ರಭುಗಳ ಧನ, ಮಾನ, ಪ್ರಾಣಗಳನ್ನು ಕಾಪಾಡಬೇಕಾದವನು. ಅವರ ಪರವಾಗಿ ರಾಜಧಾನಿಯಲ್ಲಿಯೇ ಅರಮನೆಯ ರಕ್ಷಣೆಗೆ ಉಳಿಯುತ್ತೇನೆ.

ತೈಲಪ : ನೀವೇ ಇಲ್ಲಿನ ರಕ್ಷಣೆಗೆ ನಿಂತ ಮೇಲೆ ನಮಗೇತರ ಭಯ?

ಗಬ್ಬೀಂದ್ರ : ಚಕ್ರವರ್ತಿಗಳೇ ಇಷ್ಟರ ಮೇಲೆ ಅವರ ಇಚ್ಛೆ. ಹೇಳಿ ಎಚ್ಚರಿಸಬೇಕಾದ ಕರ್ತವ್ಯ. ಹೇಳಿಯಾಯಿತು.

ಖೊಟ್ಟಿಗ : ಮಕ್ಕಳು ಅರಿಯದವರು ಏನೋ ಹೇಳುತ್ತಾರೆ. ಅದಕ್ಕೆ ಅವರ ಪ್ರಾಣಗಳನ್ನು ಅಪಾಯದಲ್ಲಿರಿಸುವುದೇ?

ಗಬ್ಬೀಂದ್ರ : ಹಾಗಾದರೆ ಮತ್ತೇನು ಮಾಡೋಣವೆನ್ನುತ್ತೀರಿ?

ಖೊಟ್ಟಿಗ : ಒಂದು ಕೆಲಸ ಮಾಡೋಣ. ಬನವಾಸಿಯಿಂದ ಕೃಷ್ಣನೊಟ್ಟಿಗೆ ಬಂದಿರುವ ಸೈನ್ಯವನ್ನು ಇಲ್ಲಿನ ಸೈನ್ಯದ ಜೊತೆಗೇ ಇರಿಸಿ ನಾವು ಕೇವಲ ರಕ್ಷಕ ಸೈನ್ಯವನ್ನು ಜೊತೆಗಿರಿಸಿಕೊಂಡು ಹೋಗುತ್ತೇವೆ. ಹೇಗಿದ್ದರೂ ನಮ್ಮ ಕುಮಾರ ಕೃಷ್ಣರು ಜೊತೆಗಿರುತ್ತಾರೆ.

ಗಬ್ಬೀಂದ್ರ : ಆಗಬಹುದು ಪ್ರಭುಗಳೇ.

ಖೊಟ್ಟಿಗ : ನಮ್ಮ ಪ್ರಯಾಣ ಹಾಗಾದರೆ ನಿಶ್ಚಿತವಾದಂತೆ. ಕುಮಾರ ಅರಮನೆಯ ರಕ್ಷಣೆಯ ಹೊಣೆಯನ್ನು ಗಬ್ಬೀಂದ್ರರು ವಹಿಸಿಕೊಂಡಿದ್ದಾರೆ. ಅವರಿರುವಾಗ ನಿಮಗೆ ಯಾವ ತೊಂದರೆಯೂ ಇರಲಾರದೆಂದು ಭಾವಿಸುತ್ತೇನೆ........ಎಲ್ಲವೂ ಸರಿ ಹೋದರೆ ಮತ್ತೆ ಮಾನ್ಯಖೇಟಕ್ಕೆ ಬರಲೇಬೇಕು.........ನೀನೂ ಸ್ವಲ್ಪ ಎಚ್ಚರಿಕೆಯಿಂದಿರು. ಮುಖ್ಯವಾದ

ಸುದ್ದಿಯೇನಾದರೂ ಬಂದಲ್ಲಿ ನಮಗೆ ಬೇಹಿನ ಮೂಲಕ ತಿಳಿಸು. ನನಗೆ ಕರ್ಕನದೇ ಚಿಂತೆ. ಯುದ್ಧದಲ್ಲಿ ಏನಾಗಿದೆಯೋ.

**ಜಕ್ಕಲೆ** : ನಿಮಗೆ ಚಿಂತೆ ಬೇಡಿ ತಾತನವರೇ. ನನ್ನ ತಂದೆ ಸುರಕ್ಷಿತವಾಗಿರುತ್ತಾರೆ.

**ಖೊಟ್ಟಿಗ** : ದೇವರು ನಿಮ್ಮನ್ನು ಕಾಪಾಡಲಿ.

OO

# ದೃಶ್ಯ – ೪

## ಹಿನ್ನೆಲೆಯಲ್ಲಿ ಯುದ್ಧದ ಸದ್ದುಗಳು

[**ನಿರೂಪಕ** : ದಿನಪಕ್ಷ ಮಾಸಗಳು ಕಳೆದ ಮೇಲೆ ನಿರೀಕ್ಷಿಸಿದ ಯುದ್ಧ ಆರಂಭವಾಯಿತು. ರಾಷ್ಟ್ರಕೂಟ, ಪರಮಾರ ಸೈನ್ಯಗಳು ಲತ್ತಲೂರಿನಲ್ಲಿ ಮುಖಾಮುಖಿಯಾಗಿವೆ. ಪರಸ್ಪರ ಸೈನ್ಯಗಳು ದಾರಿ ತಪ್ಪಿಸುವ ತಂತ್ರ ಕುತಂತ್ರಗಳಲ್ಲಿ ತೊಡಗಿವೆ. ಜಯ ತಮ್ಮದಾಗಿಸಿಕೊಳ್ಳುವ ಮಾರ್ಗದಳಿಗಾಗಿ ಹೊಂಚಿ ಕಾಯುತ್ತಿವೆ. ತೈಲಪ, ವಾಡುಗಿಯ ಮಗ, ಭಿಲ್ಲಮರಂತಹ ಉತ್ಸಾಹಿ ವೀರ ಯುವಕರು, ಪಂಡಿಗ, ಕರ್ಕ, ವಾಡುಗಿಯಂತಹ ಹಿರಿಯರ ನಾಯಕತ್ವದಲ್ಲಿ ಪರಮಾರ ಸೀಯಕ ಹರ್ಷನನ್ನು ಅವನ ಮಗ ಸಿಂಧುಲನನ್ನು ಪರಾಭವಗೊಳಿಸುವ ತೀರ್ಮಾನದೊಂದಿಗೆ ಪ್ರಾಣವನ್ನೇ ಪಣವಾಗಿಟ್ಟು ಹೋರಾಡುತ್ತಿವೆ. ಸೈನ್ಯಗಳು ಎರಡೂ ಕಡೆ ಆತಂಕ ತುಂಬಿದೆ. ರಾಷ್ಟ್ರಕೂಟರ ಯುದ್ಧ ಶಿಬಿರದಲ್ಲಿ ಸಮಾವೇಶ ಸೇರಿದೆ.]

**ಕರ್ಕದೇವ** : ಪಂಡಿಗರೇ, ಈಗ ನಮಗೆ ಸಿಕ್ಕಿರುವ ಗೆಲುವು ಗೆಲುವಲ್ಲ. ಇನ್ನು ಮುಂದೆಯೇ ನಮಗೆ ಸಮಸ್ಯೆ. ಅನಿರೀಕ್ಷಿತವಾಗಿ ಪರಮಾರರ ಮೇಲೆ ವಾಡುಗಿಯವರು ಮಾಡಿದ ಆಕ್ರಮಣದಿಂದ ಅವರು ತತ್ತರಿಸುವುದು ನಿಜವಾದರೂ, ಇದರಿಂದ ಎಚ್ಚೆತ್ತುಕೊಂಡು ಮುಂದಿನವರ ಬಗ್ಗೆ ಬಹಳ ಜಾಗರೂಕರಾಗಿರುತ್ತಾರೆ.

**ವಾಡುಗಿ** : ಅವರಿಗೆ ಸಾಕಷ್ಟು ಸಾವು ನೋವು ಉಂಟು ಮಾಡಿ ರಾಷ್ಟ್ರಕೂಟರೊಂದಿಗ ಯುದ್ಧವೆಂದರೆ ಏನೆಂಬುದನ್ನು ತಿಳಿಸಿಕೊಟ್ಟಿದ್ದೇನೆ.

**ಪಂಡಿಗ** : ಸಿಂಧುಲನೂ ಬಹಳ ಪರಾಕ್ರಮಿ. ಅವನು ಸುಮ್ಮನೆ ಕೂಡುವುದಿಲ್ಲ. ಪರಮಾರರು ಕೋಟೆಯ ಒಳಗೆ ಸುರಕ್ಷಿತರಾಗಿ ಕುಳಿತಿದ್ದಾರೆ. ಆದ್ದರಿಂದ ಮುಂದೆ ನಾವೇನು ಮಾಡಬೇಕೆಂಬುದು ತೋಚದಾಗಿದೆ.

ಕರ್ಕದೇವ : ಕೋಟೆಯನ್ನು ಭೇದಿಸಿದಲ್ಲದೆ ಅವರೊಂದಿಗೆ ಯುದ್ಧ ಸಾಧ್ಯವಿಲ್ಲ. ನಾವು ಕೋಟೆಗೆ ಲಗ್ಗೆ ಹಾಕಿ ಪರಮಾರರನ್ನು ಎದುರಿಸಬೇಕು.

ಪಂಡಿಗ : ಕೋಟೆಯನ್ನು ಭೇದಿಸುವುದು ಹೇಗೆ ಎಂಬುದೇ ಸಮಸ್ಯೆ.......... ವಿಕ್ರಮಾದಿತ್ಯರು ಈ ಸಮಯದಲ್ಲಿ ಇಲ್ಲಿದಿದ್ದರೆ ಅನುಕೂಲವಾಗುತ್ತಿತ್ತು.

ಕರ್ಕದೇವ : ಇಲ್ಲಿಗಿಂತ ಗಂಭೀರವಾದ ಸಮಸ್ಯೆ ಅಲ್ಲಿಯೂ ತಲೆದೋರಿದೆ. ಆ ಸಮಸ್ಯೆ ಏನೆಂಬುದನ್ನು ಪಂಡಿಗರೇ ಸರಿಯಾಗಿ ವಿವರಿಸಬಲ್ಲರು.

ಪಂಡಿಗ : ನಾನು ಹೇಗೆ ವಿವರಿಸಬಲ್ಲೆ ಪ್ರಭುಗಳೇ. ನಾನೂ ಕೂಡಾ ನಿಮ್ಮೊಂದಿಗೆ ಸಮರ ಸಹಚರನಾಗಿಯೇ ಇರುವೆನಲ್ಲ.

ಕರ್ಕದೇವ : ನೋಡಿ. ಸಾಮಂತ ಪಂಡಿಗರೇ, ನಿಮಗೂ ಬನವಾಸಿಯ ಆಡಳಿತಾಧಿಕಾರಿ ಗಜ್ಜಿಂದ್ರರಿಗೂ ತೀರ ಆಪ್ತತೆ ಇದೆಯೆಂತಲೂ ಪರಸ್ಪರರು ತಮ್ಮ ಅಂತರಂಗ ಬಿಚ್ಚಿ ಮಾತನಾಡಿಕೊಳ್ಳುತ್ತಾರೆ. ಎಂತಲೂ ಅರಮನೆಯಲ್ಲಿ ಎಲ್ಲರೂ ಮಾತನಾಡಿಕೊಳ್ಳುತ್ತಾರೆ.

ಪಂಡಿಗ : ಅರಮನೆಯಲ್ಲಿ ನಮ್ಮಿಬ್ಬರ ಬಗ್ಗೆ ಅಂದುಕೊಳ್ಳುತ್ತಿರುವುದು ಸ್ವಾಭಾವಿಕವೇ. ನಾವು ಬಯಸಿದ್ದೂ ಹಾಗೆ ಆಗಬೇಕೆಂತಲೇ.

ಕರ್ಕದೇವ : ಹಾಗಾದರೆ ಗಜ್ಜಿಂದ್ರರ ವ್ಯವಹಾರದ ಬಗ್ಗೆ ನಿಮಗೆಷ್ಟು ತಿಳಿದಿದೆಯೋ, ನಮಗೆ ತಿಳಿದುಕೊಳ್ಳುವ ಕುತೂಹಲ. ಗಜ್ಜಿಂದ್ರರಿಗೆ ನೀವಷ್ಟು ಆತ್ಮೀಯರಾದರೂ, ನಿಮ್ಮನ್ನು ತನ್ನೊಂದಿಗೆ ಉಳಿಸಿಕೊಳ್ಳದೆ ಯುದ್ಧಕ್ಕೆ ಕಳಿಸಿ, ನನ್ನಿಯರಸರನ್ನು ಉಳಿಸಿಕೊಂಡರಲ್ಲ, ಯಾಕೆಂದು ಅರ್ಥವಾಗುತ್ತಿಲ್ಲ.

ಪಂಡಿಗ : ಈಗ ರಾಜಧಾನಿಯಲ್ಲಿ ಏನೆಲ್ಲ ನಡೆದಿದೆಯೋ ಅದು ಗಜ್ಜಿಂದ್ರರ ಸಲಹೆಯಿಂದಲೇ ನಡೆದಿದೆ. ಆದರೆ ಹೀಗಾಗುವುದೆಂದು ನಾವು ಊಹಿಸಿರಲಿಲ್ಲ.

ಕರ್ಕದೇವ : ಅವರ ಮೊದಲಿನ ಯೋಚನೆ ಏನಾಗಿತ್ತೋ?

ಪಂಡಿಗ : ಮತ್ತೇನು ಯೋಚನೆ ಇದ್ದೀತು. ತಮ್ಮ ಸೋದರ ಕೃಷ್ಣನನ್ನು ಸಿಂಹಾಸನಕ್ಕೆ ತಂದು ಕೂರಿಸಿ, ತಾನು ಅವನ ನೆಪದಲ್ಲಿ ಸರ್ವಾಧಿಕಾರಿಯಾಗಬೇಕೆಂಬ ಆಸೆಯಿತ್ತು.

ಕರ್ಕದೇವ : ಅದೆಲ್ಲ ಗೊತ್ತಿದ್ದೂ ನೀವೇಕೆ ಸುಮ್ಮನಿದ್ದೀರಿ?

ಪಂಡಿಗ : ಅದು ಕೇವಲ ಆಸೆ ಮಾತ್ರವೇ ಆಗಿರುತ್ತೆ. ಅದು ಫಲಿಸುವುದಕ್ಕೆ ಅವಕಾಶವೇ ಇಲ್ಲವೆಂದು ಭಾವಿಸಿದ್ದೆವು.

ಕರ್ಕದೇವ : ಮತ್ತೆ ಈಗ?

ಪಂಡಿಗ : ಅದೇ ತೈಲಪ ಕುಮಾರರಿಂದ ನಡೆದ ಸಂಗತಿಗಳೆಲ್ಲ ತಿಳಿದು ಬಂದುವಲ್ಲ. ಗಬ್ಬೀಂದ್ರರ ಆಸೆಗೆ ಚಿಗುರೊಡೆಯುವ ಅನುಕೂಲ ಪರಿಸರ ನಿರ್ಮಾಣವಾಗಿದೆ ಎನಿಸುತ್ತಿದೆ.

ಕರ್ಕದೇವ : ಇಂತಹ ಪರಿಸ್ಥಿತಿಯನ್ನು ಪಲ್ಲಟಗೊಳಿಸುವುದಕ್ಕೆ ಏನಾದರೂ ಮಾಡಬೇಕಲ್ಲ.

ವಾಡುಗಿ : ಪರಿಸ್ಥಿತಿ ತೀರ ಗಂಭೀರವಾಗಿದೆ. ನಮ್ಮಲ್ಲಿ ಯಾರನ್ನಾದರೂ ಸೈನ್ಯದೊಂದಿಗೆ ರಾಜಧಾನಿಗೆ ಕಳಿಸಿ ಕೊಡುವುದು ಬಹಳ ಮುಖ್ಯ.

ಭಿಲ್ಲಮ : ಪ್ರಭು ಬೇಕಾದರೆ ನಾನೇ ಹೋಗುತ್ತೇನೆ. ಸೈನ್ಯವೂ ಬೇಡ. ನಾನೊಬ್ಬನೇ ಪರಿಸ್ಥಿತಿಯನ್ನು ಹತೋಟಿಗೆ ತರಬಲ್ಲೆ.

ಕರ್ಕದೇವ : ಭಿಲ್ಲಮ ನಿನ್ನ ಸಾಹಸದ ಮಾತುಗಳು ಮೆಚ್ಚುಗೆ ಮೂಡಿಸುತ್ತಿವೆಯಾದರೂ ಗಬ್ಬೀಂದ್ರರ ಹುನ್ನಾರಗಳು ಭೇದಿಸಲು ಸುಲಭವಲ್ಲ.

ಪಂಡಿಗ : ಮತ್ತಾರನ್ನು ಕಳಿಸುವುದು? ಇಲ್ಲಿಯೂ ನಮಗೆ ಸಂದಿಗ್ಧ ಪರಿಸ್ಥಿತಿ ಉಂಟಾಗಿದೆ. ಯಾವ ಕ್ಷಣದಲ್ಲಿ ಪರಮಾರರನ್ನು ಎದುರಿಸಿ ನಿಲ್ಲಬೇಕಾಗುವುದೋ.

ಕರ್ಕದೇವ : ನೀವೇನೂ ಚಿಂತಿಸಬೇಡಿ. ನಮ್ಮ ಅಳಿಯಂದಿರು ವಿಷಯವನ್ನೆಲ್ಲ ವಿವರಿಸಿದ ಕೂಡಲೇ, ನಮ್ಮ ಬೀಗರೊಂದಿಗೆ ಸಮಾಲೋಚನೆ ನಡೆಸಿ, ಅವರನ್ನೇ ಸೈನ್ಯದೊಂದಿಗೆ ರಾಜಧಾನಿಗೆ ಹೋಗಲು ವ್ಯವಸ್ಥೆ ಮಾಡಿದ್ದೇನೆ.

ವಾಡುಗಿ : ಬಹಳ ಒಳ್ಳೆಯ ಕೆಲಸ ಮಾಡಿದಿರಿ.

ಕರ್ಕದೇವ : ಅದು ಹೇಗೆ ಒಳ್ಳೆಯ ಕೆಲಸ?

ಪಂಡಿಗ : ಒಳ್ಳೆಯ ಕೆಲಸವಷ್ಟೆ ಅಲ್ಲ. ಪ್ರಶಸ್ತವೂ ಆಗಿದೆ. ಈ ಯುದ್ಧದಲ್ಲಿ ಭಾಗಿಗಳಾಗಿರುವ ನಿಮ್ಮ ಬೆಂಬಲಿಗರೆಲ್ಲ ಗುರಿ ಮುಟ್ಟುವುದಕ್ಕೆ ಈ ನಿರ್ಧಾರವು ಪ್ರಶಸ್ತವೂ ಸೂಕ್ತವೂ ಆಗಿದೆ.

ಕರ್ಕದೇವ : ನಮ್ಮ ಗುರಿ ಎಲ್ಲರಿಗೂ ತಿಳಿದೇ ಇದೆಯಲ್ಲ. ಪರಮಾರರನ್ನು ಸದೆಬಡಿಯುವುದು ತಾನೇ?

ವಾಡುಗಿ : ಪರಮಾರರನ್ನು ಸದೆಬಡಿಯುವುದಕ್ಕೂ, ವಿಕ್ರಮಾದಿತ್ಯರು ರಾಜಧಾನಿಗೆ ಹೋಗುವುದಕ್ಕೂ ಏನು ಸಂಬಂಧ?

ಪಂಡಿಗ : ವಿಜಯಿಗಳಾಗಿ ಅರಮನೆಗೆ ಹೋದಾಗ ಅಲ್ಲಿ ತಡೆಯುಂಟಾದರೆ ನಾವು ಗುರಿ ಮುಟ್ಟಿದಂತೆ ಹೇಗಾಗುತ್ತದೆ?

ವಾಡುಗಿ : ಹೌದು ಅದೂ ನಿಜವೆ.

ಭಿಲ್ಲಮ : ವಿಕ್ರಮಾದಿತ್ಯರು ಹೊರಡುವುದು ಯಾವಾಗ?

ಕರ್ಕದೇವ : ನಾಳೆಯೇ. ಏಕೆ?

ಭಿಲ್ಲಮ : ಅವರ ಮೃಗಾವಲಿಗೆ ಬೇಕಾದರೆ ನಾನೇ ಹೋಗೋಣ ಎಂದು ಯೋಚಿಸುತ್ತಿದ್ದೇನೆ.

ಪಂಡಿಗ : ಅಗತ್ಯವಿಲ್ಲ ಭಿಲ್ಲಮ. ಅಲ್ಲದೆ ವಿಕ್ರಮಾದಿತ್ಯರನ್ನು ಬಿಟ್ಟು ನಾವೆಲ್ಲ ಇಲ್ಲಿರಬೇಕಾದ ಅಗತ್ಯವಿದೆ... ವಿಕ್ರಮಾದಿತ್ಯರಿಗೆ ಬೇಕಾದರೆ ಒಂದಷ್ಟು ಸೂಚನೆಗಳನ್ನು ಕೊಟ್ಟು ಕಳುಹಿಸುವುದು ಸೂಕ್ತವೆನಿಸುತ್ತದೆ.

ಕರ್ಕದೇವ : ಹಾಗೆಯೇ ಮಾಡಿ..........ಈಗ ಅಮ್ಮಿಗಿಯವರು ಮಲ್ಲಪ, ಪುನ್ನಿಮಯ್ಯರು, ತೈಲಪಕುಮಾರರು. ವಿಕ್ರಮಾದಿತ್ಯರೊಂದಿಗೆ ಸಮಾಲೋಚನೆ ನಡೆಸುತ್ತಿದ್ದಾರೆ. ಅದು ಮುಗಿಯುತ್ತಿದ್ದಂತೆ ಇಲ್ಲಿಗೆ ಅವರಲ್ಲಿ ಯಾರಾದರೂ ಬರಬಹುದು.......ನಾವು ಅಷ್ಟರಲ್ಲಿ ಪರಮಾರರ ಸೈನ್ಯವನ್ನು ಭೇದಿಸುವ ವಿಚಾರವಾಗಿ ಆದಷ್ಟು ಬೇಗ ಮಾರ್ಗಗಳನ್ನು ಹುಡುಕಲೇಬೇಕು.

ಭಿಲ್ಲಮ : ತೈಲಪಕುಮಾರರು ಕೋಟೆಯನ್ನು ಭೇದಿಸುವ ವಿಚಾರವಾಗಿ ಯೋಚಿಸಿದ್ದಾರೆ. ಆದರೆ ಹಿರಿಯರಾದ ನಿಮ್ಮ ಮುಂದೆ ಹೇಳುವುದಕ್ಕೆ ಹಿಂಜರಿಯುತ್ತಿದ್ದಾರೆ. ನನ್ನೊಂದಿಗೆ ಇದ್ದಾಗ ಮಾತಿನ ಮಧ್ಯೆ ಈ ವಿಷಯ ಬಂದಾಗ ಹೇಳಿದರು.

ಪಂಡಿಗ : ಏನದು ಭಿಲ್ಲಮ?

ಭಿಲ್ಲಮ : ನನಗೆ ಸರಿಯಾಗಿ ವಿವರಗಳು ತಿಳಿದಿಲ್ಲ. ತೈಲಪ ಕುಮಾರರನ್ನೇ ಕೇಳಿದರೆ ಹೇಳುತ್ತಾರೆ.

ಕರ್ಕದೇವ : ಬಿಡಿ ಪಂಡಿಗರೇ ಹೇಗಿದ್ದರೂ ನಮ್ಮ ಅಳಿಯಂದಿರು ಇಷ್ಟರಲ್ಲೇ ಬರುತ್ತಾರೆ. ಕೇಳಿದರೆ ಆಯಿತು.

ಭಿಲ್ಲಮ : (ಹೆಜ್ಜೆ ಸಪ್ಪಳ ಕೇಳಿ) ಅಗೋ ತೈಲಪರೇ ಬಂದರೆನಿಸುತ್ತದೆ.

ಕರ್ಕ : ಬನ್ನಿ ಅಳಿಯಂದಿರೇ. ನಿಮ್ಮ ವಿಚಾರವಾಗಿಯೇ ಮಾತನಾಡುತ್ತಿದ್ದೆವು. ನೀವೇ ಬಂದಿರಿ.

ತೈಲಪ : ನನ್ನ ವಿಚಾರವಾಗಿಯೇ? ಹೇಳಿ ಅಪ್ಪಣೆ ಕೊಡಿಸಿ. ಈಗ ನನ್ನ ಮುಂದಿನ ಕೆಲಸ ಏನೆಂದು ನೀವು ಹಿರಿಯರು ಆದೇಶಿಸಿ.

ಪಂಡಿಗ : ಕುಮಾರರೇ ನಾವು ಆದೇಶಿಸುವುದಕ್ಕಿಂತ ಹೆಚ್ಚಾಗಿ ನಿಮ್ಮ ಆಲೋಚನೆ ನಮಗೆ ಬೇಕಾಗಿದೆ. ನಿಮಗೇ ತಿಳಿದಿದೆ. ಪರಮಾರರ ನಿಲುವು ನಮ್ಮ ಅತಿಯಾದ ಆತಂಕಕ್ಕೆ ಗುರಿ ಮಾಡಿದೆ. ಲತ್ತಲೂರಿನ ಕೋಟೆ ನಮಗೆ ಸವಾಲಾಗಿ ನಿಂತಿದೆ. ಅದನ್ನು ವಶಪಡಿಸಿಕೊಳ್ಳದ ಹೊರತು ನಮ್ಮ ಗೆಲುವು ಕೇವಲ ಕನಸಾಗುತ್ತದೆ.

ತೈಲಪ : ಅದಕ್ಕೆ ನಾವೇನು ಮಾಡಬೇಕೆಂದು ಆಲೋಚಿಸಿದ್ದೀರಿ?

ಪಂಡಿಗ : ಯಾರಾದರೂ ಗುಟ್ಟಿನಲ್ಲಿ ಕೋಟೆಯ ಒಳ ಸೇರಿ ಬಾಗಿಲನ್ನು ತೆರೆದ ಪಕ್ಷದಲ್ಲಿ ಕೆಲಸ ಸುಲಭವಾಗುವುದಾದರೂ ಅದು ಬಹಳ ಕಷ್ಟದ ಕೆಲಸ. ಪರಮಾರರು ಕೋಟೆಯಿಂದ ಹೊರ ಬಂದರೆ ಅವರನ್ನು ನುಚ್ಚು ನೂರು ಮಾಡಬಹುದು.

ತೈಲಪ : (ಮೌನ)

ಪಂಡಿಗ : ಏಕೆ ಕುಮಾರರೇ ಮಾತನಾಡದೆ ಮೌನ ತಳೆದಿರಿ? ಇದಕ್ಕೆ ತಮ್ಮಲ್ಲಿ ಉಪಾಯವಿದೆಯೆಂದು ಈಗ ತಾನೇ ಬಿಲ್ಲಮ ಹೇಳುತ್ತಿದ್ದ. ಹೇಳಿ ಕುಮಾರರೇ. ನೀವು ಸಣ್ಣವರೆಂಬ ಸಂಕೋಚ ಬೇಡ. ಬುದ್ಧಿವಂತಿಕೆಗೆ ರಾಜಕೀಯ ನೈಪುಣ್ಯಕ್ಕೆ ವಯಸ್ಸು ಅಡ್ಡಿ ಬರಲಾರದು.

ಕರ್ಕದೇವ : ಹೌದು ಕುಮಾರರೇ ಹೇಳಿ. ನಿಮಗೆ ಸಂಕೋಚ ಬೇಡ. ನೀವು ಹೇಳುವುದು ಸರಿತೋರಿದಲ್ಲಿ ನಾವೆಲ್ಲರೂ ಸಮ್ಮತಿಸುತ್ತೇವೆ. ಹಿರಿಯ ಕಿರಿಯ ಎಂಬ ಭಾವನೆಗಳು ಬೇಡ. ನಮ್ಮ ಆಗರ್ಭ ಶತ್ರುಗಳಾದ ಪರಮಾರರ ಉಚ್ಚಾಟನೆಯೇ ನಮಗೆ ಮುಖ್ಯ.

ತೈಲಪ : (ಒಂದು ನಿಟ್ಟುಸಿರು ಬಿಟ್ಟು) ಹೂಂ...............ಹಾಗಿದ್ದಲ್ಲಿ ನಾವು ಹೀಗೆ ಮಾಡೋಣ. ಪರಮಾರರ ಸೈನ್ಯ ಹೇಗೂ ಒಳಗೆ ಸೇರಿಕೊಂಡಿದೆ. ನಾವು ನಮ್ಮ ಇಡೀ ಸೈನ್ಯವನ್ನು, ನಮ್ಮೊಳಗಿನ ಉದ್ದೇಶ ಬಯಲಾಗದಂತೆ ನಮ್ಮ ರಾಜಧಾನಿಯತ್ತ ಹೊರಡಿಸಿ, ರಾಷ್ಟ್ರಕೂಟರು ಪರಮಾರರಿಗೆ ಹೆದರಿ ಪಲಾಯನ ಮಾಡಿದ್ದಾರೆ ಎಂಬ ವದಂತಿಯನ್ನು ಹಬ್ಬಿಸೋಣ. ಆ ಮೇಲಿನ ಪರಿಣಾಮಗಳು ನಮಗೆ ಅನುಕೂಲವಾಗುತ್ತವೆ ಎಂಬುದು ನನ್ನ ಊಹೆ. ಏನೋ ನನ್ನ ಈ ಹುಡುಗು ಬುದ್ಧಿಗೆ, ಅಲ್ಪಮತಿಗೆ ಹೊಳೆದದ್ದನ್ನು ಹೇಳಿದೆ.

ಪಂಡಿಗ : ಪ್ರಭುಗಳೇ ಕುಮಾರರು ನೀಡಿರುವ ಸಲಹೆ ಗಂಭೀರವಾಗಿ ಯೋಚಿಸಬೇಕಾದ್ದೆ.

ಕರ್ಕದೇವ : ಪಂಡಿಗರೆ, ಈ ವಿಚಾರಗಳಲ್ಲಿ ಹೆಚ್ಚಿನ ಅನುಭವ, ಆಲೋಚನಾ ಸಾಮರ್ಥ್ಯ ನಿಮ್ಮೆಲ್ಲರಿಗೂ ಇದೆ. ವಾಡುಗಿಯವರೂ ಇಲ್ಲಿಯೇ ಇದ್ದಾರೆ. ನೀವೆಲ್ಲ ಮತ್ತೊಮ್ಮೆ ಇದರ ಸೂಕ್ತಾಸೂಕ್ತತೆಯ ಬಗ್ಗೆ ಯೋಚಿಸಿ ಒಂದು ನಿರ್ಧಾರಕ್ಕೆ ಬನ್ನಿ. ಆಮೇಲೆ ಅದನ್ನು ಅಮಲುಗೊಳಿಸೋಣ.

ವಾಡುಗಿ : ಹೌದು ಪಂಡಿಗರೇ, ನೀವೇ ಆಲೋಚಿಸಿ ತೀರ್ಮಾನವನ್ನು ಹೇಳಿ.

ಪಂಡಿಗ : ಕುಮಾರರ ಸೂಚನೆ ಹಲವು ದೃಷ್ಟಿಗಳಿಂದ ಸೂಕ್ತ ಎನಿಸುತ್ತದೆ. ರಾಷ್ಟ್ರಕೂಟರು ಸೋತರು ಎಂಬ ಸಂಭ್ರಮದಲ್ಲಿ ಹುಚ್ಚೆದ್ದು, ಇನ್ನು ನಮಗೆ ಆಕ್ರಮಣದ ಭೀತಿ ಇಲ್ಲವೆಂದು ಪರಮಾರ ಸೈನ್ಯ ಕೋಟೆಯಿಂದ ಹೊರಗೆ ಬರುತ್ತದೆ. ಆಗ ನಾವು ಸುಲಭವಾಗಿ ಅನಿರೀಕ್ಷಿತ ಆಕ್ರಮಣ ಮಾಡಿ ಅವರನ್ನು ಸೋಲಿಸಬಹುದು.

ಕರ್ಕ : ಇದಲ್ಲದೆ ಮತ್ತೊಂದಕ್ಕೆ ಹೇಗೆ ಸಹಕಾರಿಯಾಗುತ್ತದೆ?

ಪಂಡಿಗ : ರಾಜಧಾನಿಯಲ್ಲಿ ನಮಗೆ ತಿಳಿದಂತೆ ಅಂತರ್ಯುದ್ಧದ ಕಿಡಿಗಳು ಉರುಬುತ್ತಿವೆ. ಅದು ಜ್ವಾಲೆಗಳಾಗಿ ರಾಜವಂಶವನ್ನು ಬೂದಿಗೊಳಿಸುವ ಮುನ್ನವೇ ಇದಾದಲ್ಲಿ ಕಿಡಿಗಳು ಎದ್ದಲ್ಲಿಯೇ ತಣ್ಣಗಾರಿ ಹೋಗುತ್ತವೆ

ಕರ್ಕದೇವ : ಹೌದು ಪಂಡಿಗರೇ, ಒಂದರಿಂದ ಎರಡು ಪ್ರಯೋಜನ. ಎರಡು ಪ್ರಯೋಜನಗಳಾದಲ್ಲಿ ನಮಗೇ ಲಾಭದಾಯಕವಲ್ಲವೇ?

ಪಂಡಿಗ : ನನಗೂ ಇದು ಸೂಕ್ತವೆನಿಸುತ್ತದೆ. ಆದರೆ ಈ ವಿಚಾರದಲ್ಲಿ ಭಿಲ್ಲಮ ತಂದೆಯವರ ಮತ್ತು ಕುಮಾರರ ಸೋದರ ಮಾವಂದಿರ ಸಲಹೆಯನ್ನು ಕೇಳುವುದು ಒಳಿತೆಂದು ನನ್ನ ಭಾವನೆ.

ಕರ್ಕದೇವ : ಸರಿ ಹಾಗಾದರೆ ಅವರೊಂದಿಗೆ ಸಮಾಲೋಚನೆಗೆ ಕೂಡಲೇ ಕಾರ್ಯಗತರಾಗೋಣ.

******

(ಹಿನ್ನೆಲೆಯಲ್ಲಿ)

ಅಯ್ಯೋ ಘಾತವಾಯಿತು. ರಾಷ್ಟ್ರಕೂಟರು ವಂಚಿಸಿದರು. ನಮ್ಮನ್ನು ಕೊಂದರು. ಪರಮಾರ ದೊರೆ ಸೀಯಕ ಹರ್ಷನ ಧ್ವನಿ: ಸೈನಿಕರೇ ಒಮ್ಮೆಟ್ಟದಿರಿ. ನಿಮ್ಮ ಛಲ ಬಲಗಳಿಂದ ಹೋರಾಡಿ ನಿಲುವು ನಮ್ಮದಾಗುತ್ತದೆ. ನೀವು ಹೆದರಬೇಡಿ. ನಮ್ಮ ಸೈನ್ಯವೊಂದು ರಾಷ್ಟ್ರಕೂಟ ರಾಜಧಾನಿಯ ಕಡೆಗೆ ಸಾಗಿದೆ. ಮೋಸಕ್ಕೆ ಮೋಸ, ರಕ್ತಕ್ಕೆ ರಕ್ತ,

ಸೇಡಿಗೆ ಸೇಡು. ರಾಷ್ಟ್ರಕೂಟರನ್ನು ಸದೆಬಡಿಯದೆ ಬಿಡುವುದಿಲ್ಲ- ಎಂಬ ಮಾತುಗಳು ಕೇಳಿ ಬರುತ್ತವೆ. ನಡ ನಡುವೆ ಶಸ್ತ್ರಾಸ್ತ್ರಗಳ ಖಣಿಲು ಖಣಿಲು. ನೋವು, ಯಾತನೆ ಚೀರಾಟಗಳು ಕೇಳಿಸಬೇಕು]

**ಇತಿಹಾಸಕಾರ** : ಯುದ್ಧ ಭೀಮಾ ನದಿಯ ತಟದಲ್ಲಿ ಭಯಂಕರವಾಗಿ ಜರುಗಿತು. ವಿಕ್ರಮಾದಿತ್ಯರಿಗೆ, ಪರಮಾರ ಸಿಂಧುಲರಿಗೆ ತೀವ್ರ ಗಾಯಗಳಾದವು. ಸಿಂಧುಲ ಒಳಮಾರ್ಗದಿಂದ ರಕ್ಷಕ ಸೈನ್ಯದೊಂದಿಗೆ ಧಾರಾ ನಗರವನ್ನು ತಲುಪಿದ. ಎರಡೂ ಕಡೆಯಲ್ಲಿ ಸಾವು ನೋವುಗಳು! ರಾಷ್ಟ್ರಕೂಟ ರಾಜಧಾನಿಯಲ್ಲಿ ನಿರುತ್ಸಾಹದ ವಾತಾವರಣ. ಗಬ್ಬೀಂದ್ರರ ಪಿತೂರಿಗಳ ಸೋಲು. ಖೊಟ್ಟಿಗದೇವರ ಪಲಾಯನ, ಕರ್ಕದೇವರಿಗೆ ಸಿಂಹಾಸನವನ್ನು ನಿರಾಯಾಸವಾಗಿ ದಕ್ಕಿಸಿತು. ನಿರುತ್ಸಾಹದೊಂದಿಗೆ ಸಿಂಹಾಸನಾರೋಹಣ ಮಾಡಿದ ಕರ್ಕದೇವರ ಸಭೆ ನಡೆದಿದೆ.

– – ವಿರಾಮ – –

**ಕರ್ಕದೇವ** : ವಿಕ್ರಮಾದಿತ್ಯರೇ, ಅಮ್ಮುಗಿಯವರೇ ಮತ್ತು ನನ್ನ ಹಿರಿಯ ಕಿರಿಯ ಸ್ನೇಹಿತರೇ, ಹಿತೈಷಿಗಳೇ, ನಿಮ್ಮೆಲ್ಲರ ಸಹಕಾರ, ಸಹಯೋಗಗಳಿಂದ ಈ ದಿನ ನಾನು ಈ ಸಿಂಹಾಸನಕ್ಕೆ ಹಕ್ಕುದಾರನಾಗಿದ್ದೇನೆ. ಮೊದಲಿಗೆ ನಿಮ್ಮೆಲ್ಲರಿಗೂ ನನ್ನ ಕೃತಜ್ಞತೆಗಳು. ನಮ್ಮ ರಾಜ್ಯಭಾರದಲ್ಲಿ ನೀವೆಲ್ಲರೂ ಹೆಗಲು ಕೊಟ್ಟು ಸಹಕರಿಸಬೇಕು.

**ವಾಡುಗಿ** : ಕರ್ಕ ಪ್ರಭುಗಳೇ ನೀವು ರಾಷ್ಟ್ರಕೂಟ ಸಿಂಹಾಸನವೇರಿರುವುದಕ್ಕೆ ನಾವು ನಿಮ್ಮನ್ನು ಅಭಿನಂದಿಸುತ್ತೇವೆ.

**ವಿಕ್ರಮಾದಿತ್ಯ** : ಅಭಿನಂದಿಸುತ್ತೇವೆ. ಆನಂದಿಸುತ್ತೇವೆ, ನಿಜ. ಆದರೆ.................

**ಕರ್ಕದೇವ** : ಆದರೆ ಎಂದೇಕೆ ನಿಲ್ಲಿಸದಿರಿ ಸಾಮಂತರೆ?

**ವಿಕ್ರಮಾದಿತ್ಯ** : ನೀವು ಕುಳಿತಿರುವ ಸಿಂಹಾಸನ ನೀವಂದುಕೊಂಡಷ್ಟು ಸುಭದ್ರವಲ್ಲ; ಸುರಕ್ಷಿತವಲ್ಲ.

**ಕರ್ಕದೇವ** : ಹೀಗೇಕೆ ಹೇಳುತ್ತಿರುವಿರಿ? ನಿಮ್ಮಂಥವರೆಲ್ಲ ನಮ್ಮ ನೆರವಾಗಿ, ಮಾರ್ಗದರ್ಶಕರಾಗಿ ಇರುವಾಗ ಅಭದ್ರತೆಯ ಭೀತಿಯಾದರೂ ನಮಗೇಕೆ?

**ವಾಡುಗಿ** : ನಿಮ್ಮವರಿಂದ ಮತ್ತು ಪರಮಾರರಿಂದ ಎಂದಿಗೂ ತೊಂದರೆ ತಪ್ಪಿದ್ದಲ್ಲ. ಹೆಡೆ ಮೆಟ್ಟಿಸಿಕೊಂಡ ಹಾವುಗಳಂತೆ ಬುಸುಗುಟ್ಟುತ್ತಲೇ ಹಗೆ ಸಾಧಿಸಿಕೊಳ್ಳುವುದಕ್ಕಾಗಿ ಹೊಂಚಿ ಕಾಯುತ್ತಾರೆ.

ವಿಕ್ರಮಾದಿತ್ಯ : ಅವರಷ್ಟೇ ಅಲ್ಲ. ನಿಮ್ಮ ದೊಡ್ಡಪ್ಪ ಖೊಟ್ಟಿಗರು ತಮ್ಮ ಮಗ ಕೃಷ್ಣನೊಡನೆ ಹೇಳದೆ ಕೇಳದೆ ಪರಾರಿಯಾಗಿದ್ದಾರೆ. ಒಂದಲ್ಲ ಒಂದು ದಿನ ಅವರು ಗಜ್ಜೇಂದ್ರ ನನ್ನಿಯರಸರ ನೆರವು ಪಡೆದು ಮತ್ತೆ ಆಕ್ರಮಣ ನಡೆಸಿ ಪದಚ್ಯುತರನ್ನಾಗಿ ಮಾಡಬಹುದು. ಅದರೊಟ್ಟಿಗೆ ಗಂಗರ ನೆರವಿನಿಂದ ಕನ್ನರ ಕೃಷ್ಣನ ಮೊಮ್ಮಗ ಇಂದ್ರನೂ ಸಿಂಹಾಸನಕ್ಕಾಗಿ ದಾಳಿ ಮಾಡಬಹುದು.

ವಾಡುಗಿ : ಗಂಗರು ಪ್ರಬಲರು. ಮೊದಲಿನಿಂದಲೂ ರಾಷ್ಟ್ರಕೂಟ ಸಿಂಹಾಸನದ ಮೇಲೆ ಅವರ ಕಣ್ಣು ಇದ್ದೇ ಇದೆ. ಹಾಗಾಗಿ ಇಂದ್ರನಿಗೆ ಸಹಾಯ ಮಾಡುತ್ತಲೇ ರಾಷ್ಟ್ರಕೂಟ ಸಾಮ್ರಾಜ್ಯವನ್ನು ಗಂಗ ಸಾಮ್ರಾಜ್ಯವಾಗಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ವಾಸ್ತವವಾಗಿ ಇಂದ್ರನ ಕೈಗೆ ರಾಜ್ಯ ಎಂಬುದರ ಅರ್ಥ ಗಂಗರ ಕೈಗೆ ರಾಜ್ಯವನ್ನು ಒಪ್ಪಿಸಿದ್ದೇವೆ ಎಂದೇ!.

ಕರ್ಕದೇವ : ಅಂದರೆ ನಮಗೆ ಇಮ್ಮುಖ ದಾಳಿಯನ್ನು ಎದುರಿಸಬೇಕಾಗಿದೆ ಎಂದಾಯಿತು. ಈ ದಾಳಿಯನ್ನು ಎದರಿಸಲು ಮೊದಲಿಗೆ ಸೈನ್ಯಬಲವನ್ನು ವೃದ್ಧಿಪಡಿಸಿಕೊಳ್ಳಬೇಕು. ಬಂಧುಗಳೇ ಇಂತಹ ಸಂದಿಗ್ಧಗಳಲ್ಲಿ ನಿಮ್ಮೆಲ್ಲರ ಸಹಕಾರ ನನಗೆ ಅತಿಮುಖ್ಯವಾಗಿದೆ.

ವಾಡುಗಿ : ನಿಮಗೆ ಪರಿಸ್ಥಿತಿ ಹೀಗಿರುವಾಗ ಆತಂಕ ಸಹಜವೇ. ಆದರೂ ಯಾವ ಪರಿಸ್ಥಿತಿಯಲ್ಲಿ ಏನಾಗುತ್ತದೆಂಯೋ ಹೇಳಲು ಆಗುವುದಿಲ್ಲ. ಒಂದೊಂದು ಹೆಜ್ಜೆ ಇಡುವಾಗಲೂ ಎಚ್ಚರಿಕೆಯಿಂದ ಇರುವುದು ಉತ್ತಮ.

ಕರ್ಕದೇವರು : ನಿಮ್ಮಂಥ ಹಿರಿಯರ ಜೊತೆಗೆ ಕುಮಾರರು ಛಿಲ್ಲಮರಂತಹ ಉತ್ಸಾಹಿ ತರುಕ್ಷಣರಿದ್ದಾರೆ. ಅವರೆದೆಯಲ್ಲಿ ರಾಜಭಕ್ತಿ, ನಿಷ್ಠೆಗಳನ್ನು ಪೋಷಿಸಬೇಕು. ಮುಂದಿನ ರಾಷ್ಟ್ರಕೂಟ ಅಭಿವೃದ್ಧಿಗೆ ಅವರದೇ ಹೆಚ್ಚಿನ ಜವಾಬ್ದಾರಿ.

ವಾಡುಗಿ : ನೀವು ನಿಮ್ಮ ಅಳಿಯಂದಿರನ್ನು ಕಂಡು ಮಾತಾಡಿದಿರಾ?

ಕರ್ಕದೇವ : ಇಲ್ಲ. ನಮಗೆ ನಮ್ಮ ಅಳಿಯಂದಿರನ್ನು ಮಗಳನ್ನು ಕಂಡು ಮಾತನಾಡಲು ಆಗಲೇ ಇಲ್ಲ. ಈ ಸಂಜೆಗೇ ನಮ್ಮಲ್ಲಿಗೆ ಕರೆಸಿಕೊಂಡು ಮಾತನಾಡುತ್ತೇವೆ. ವಿಕ್ರಮಾದಿತ್ಯರೇ ತಾವು ರಾಜಧಾನಿಯನ್ನು ಬಿಡಬೇಕೆಂದು ಯೋಚಿಸುತ್ತಿದ್ದೀರಂತೆ.

ವಿಕ್ರಮಾದಿತ್ಯ : ಹೌದು, ಬಂದು ಬಹಳ ದಿನಗಳಾದವು. ನಮ್ಮರಸಿಯರೂ ಬೀಗರ ಮನೆಯಲ್ಲಿ ಎಷ್ಟು ದಿವಸ ಇರುವುದೆಂದು ಯೋಚಿಸುತ್ತಿದ್ದಾರೆ.

ಕರ್ಕದೇವ : ಸಂಕೋಚವೇಕೆ ವಿಕ್ರಮಾದಿತ್ಯರೇ? ಮಗಳಾದರೂ ಮಗನಾದರೂ ನಮಗೆ ಜಯಲಕ್ಷ್ಮಿ ಒಬ್ಬಳೇ. ನಮ್ಮದೆಲ್ಲವೂ ಅವಳದೇ. ಅವಳದಾದ ಮೇಲೆ ಅದೆಲ್ಲ ತಮ್ಮದಲ್ಲವೇ?...........ನಾನು ಹೇಳುವುದು ಸರಿಯಲ್ಲವೇ ವಾಡುಗಿಯವರೇ?

ವಾಡುಗಿ : ಒಂದು ರೀತಿಯಲ್ಲಿ ನೀವು ಹೇಳಿವುದು ಸರಿಯಾದರೂ ಸ್ವಂತ ಮನೆಯ ವ್ಯವಹಾರಗಳಿಂದ ದೂರವಿರುವುದು ಅಷ್ಟು ಸರಿಯಲ್ಲ.

ಕರ್ಕದೇವ : ಯೋಚಿಸಿ ನೋಡಿ ವಿಕ್ರಮಾದಿತ್ಯರೇ.ನೀವುಗಳು ನನ್ನನ್ನು ಸುತ್ತುವರೆದಿರುವ ಅಪಾಯಗಳಿಂದ ಎಚ್ಚರಿಸಿದ್ದೀರಿ? ಅದಕ್ಕೆ ನನ್ನ ಧನ್ಯವಾದಗಳು ಮತ್ತೆ ನಾಳೆ ನಾವೆಲ್ಲರೂ ಸೇರಿ ಮುಂಬರಲಿರುವ ಅಪಾಯಗಳನ್ನು ತಡೆಗಟ್ಟಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಆಲೋಚಿಸೋಣ.

– – ವಿರಾಮ – –

ಕರ್ಕದೇವ : ಬನ್ನಿ ಅಳಿಯಂದಿರೇ. ನೀವು ಬರುತ್ತೀರೋ ಇಲ್ಲವೋ ಎಂಬ ಆತಂಕದಲ್ಲಿದ್ದ.

ತೈಲಪ : ಮಾವಂದಿರು ಕ್ಷಮಿಸಬೇಕು. ನಿನ್ನೆ ನೀವು ಹೇಳಿ ಕಳಿಸಿದ್ದಿರಂತೆ. ಆದರೆ ಇದ್ದಕ್ಕಿದ್ದಂತೆ ಅವರ ಆರೋಗ್ಯ ಹದಗೆಟ್ಟಿತು. ಅದಕ್ಕೇ ಬರಲಾಗಲಿಲ್ಲ............ ಏನಾದರೂ ತುರ್ತಿನ ಕೆಲಸವಿತ್ತೇ?

ಕರ್ಕದೇವ : ಆಂ.................. (ಏನಿಲ್ಲವೆಂಬಂತೆ) ಅಂತಹ ತುರ್ತಿನ ಕೆಲಸವೇನೂ ಇರಲಿಲ್ಲ. ಸುಮ್ಮನೆ ಹೀಗೆ ಲೋಕಾಭಿರಾಮವಾಗಿ ಮಾತನಾಡಲು ಮನಸ್ಸಾಯಿತು. ನಮ್ಮ ಜಯಲಕ್ಷ್ಮಿಯನ್ನೂ ಮಾತಾಡಿಸಿರಲಿಲ್ಲ. ಅದಕ್ಕೇ ಹೇಳೀ ಕಳಿಸಿದ್ದೆ. ನಿಮ್ಮ ತಂದೆಯವರ ಅನಾರೋಗ್ಯದ ವಿಚಾರ ಕೇಳಿ ನಮಗೆ ಗಾಭರಿಯಾಯಿತು. ಸಂಕೋಚಪಡದೆ ನಮ್ಮ ರಾಜವೈದ್ಯರಿಂದ ಚಿಕಿತ್ಸೆ ಮಾಡಿಸಿ.

ತೈಲಪ : ನಮ್ಮ ತಂದೆಯವರ ವಿಚಾರವಾಗಿ ನೀವು ತೋರಿಸುತ್ತಿರುವ ಆಸಕ್ತಿಗಾಗಿ ನನ್ನ ಕೃತಜ್ಞತೆಗಳು.

ಕರ್ಕದೇವ : ಛೆ! ಛೆ! ನೀವು ಹಾಗೆಲ್ಲ. ಕೃತಜ್ಞತೆಗಳನ್ನು ಹೇಳಬಾರದು. ಈಗ ನಮ್ಮವರಾಗಿ, ನಮಗಾಗಿ, ನಮ್ಮ ಶ್ರೇಯಸ್ಸನ್ನು ಕೋರುವವರಾಗಿ ಉಳಿದಿರುವವರೆಂದರೆ ನಿಮ್ಮ ತಂದೆಯವರು ಮತ್ತು ನೀವು. ರಾಷ್ಟ್ರಕೂಟ ಸಿಂಹಾಸನದ ರಕ್ಷಣೆಯು ನಿಮ್ಮ ಕೈಯಲ್ಲಿದೆ.

ತೈಲಪ : ಈಗ ಸುರಕ್ಷಿತವಾಗಿ ನಿಮ್ಮ ಕೈ ಸೇರಿದೆಯಲ್ಲ! ಇನ್ನೇಕೆ ಆತಂಕ?

ಕರ್ಕದೇವರು : ಇಲ್ಲ ಅಳಿಯಂದಿರೇ ಪರಮಾರರಿಂದ, ನನ್ನ ದೊಡ್ಡಪ್ಪನಿಂದ ಇಂದ್ರನಿಂದ ಈ ಸಿಂಹಾಸನಕ್ಕೆ ಬೆದರಿಕೆ ಇದ್ದೇ ಇದೆ. ನಿಮ್ಮ ತಂದೆಯವರೇ ಈ ವಿಚಾರವಾಗಿ ಎಚ್ಚರಿಸಿದ್ದಾರೆ. ನೀವೂ ನಿಮ್ಮ ತಂದೆಯವರೊಂದಿಗೆ ಪರಾಮರ್ಶಿಸಿ ತಿಳಿದುಕೊಳ್ಳಿ.

ತೈಲಪ : ಎದ್ದು ಕಾಣುವ ಈ ಶತ್ರುಗಳಿಗಿಂತ ಕಾಣದೆ ನಮ್ಮ ನಮ್ಮವರಲ್ಲಿ ಅಡಗಿರುವ ಶತ್ರುಗಳನ್ನು ಗುರುತಿಸಿಕೊಳ್ಳಬೇಕಾಗಿದೆ.

ಕರ್ಕದೇವ : ಇಂತಹ ಮುಂದಾಲೋಚನೆ ರಾಜಕೀಯದಲ್ಲಿ ಒಳ್ಳೆಯದೆ! ಆದರೆ ನೀವು ಹೀಗೆ ಮಾತನಾಡಲು ಕಾರಣ?

ತೈಲಪ : ಪಂಡಿಗರು ಜಕ್ಕಿ ಸುಂದರಿ, ಗಬ್ಬೀಂದ್ರ, ನನ್ನಿಯರಸ ಇಂತಹವರ ವಿಚಾರದಲ್ಲಿ ಜಾಗರೂಕತೆಯಿಂದ ಇರಬೇಕು.

ಕರ್ಕದೇವರು : ಪಂಡಿಗರು ನಮ್ಮ ಕಡೆಗಿದ್ದವರೇ ಅಲ್ಲವೇ?

ತೈಲಪ : ನಿಜ. ನಿಮ್ಮ ದೊಡ್ಡಪ್ಪನವರೊಂದಿಗೆ ಅವರಿಗಿದ್ದ ಪೂರ್ವ ಸಂಬಂಧಗಳ ಗುರಿ ಏನೆಂಬುದು ಇನ್ನೂ ಸ್ಪಷ್ಟವಿಲ್ಲ. ಆದರೂ ನಾನು ನನ್ನ ತಂದೆಯವರು ಇರುವವರೆಗೂ ನೀವು ಚಿಂತಿಸಬೇಕಿಲ್ಲ.

ಕರ್ಕದೇವ : ಅದೊಂದೇ ನನಗೆ ಸಮಾಧಾನ............ ಮುಂದಿನ ಕ್ರಮಗಳ ಬಗ್ಗೆ ನಿಮ್ಮ ತಂದೆಯವರ ನಿರ್ಧಾರಗಳು ಏನೆಂಬುದನ್ನು ತಿಳಿದುಕೊಳ್ಳಿ.

ತೈಲಪ : ಅವರ ಮನಸ್ಸಿನಲ್ಲಿ ಈ ವಿಷಯದಲ್ಲಿ ಈಗಾಗಲೇ ಏನೋ ನಿರ್ಧಾರವಾದಂತಿದೆ.

ಕರ್ಕದೇವ : ಆಂ! ನಿರ್ಧಾರವೇ? (ಆಶ್ಚರ್ಯದಿಂದ)

ತೈಲಪ : ಹೌದು ನಿರ್ಧಾರ. ನನ್ನ ತಂದೆಯವರು ಅವರ ತಂದೆಯವರಿಗೆ ಏನನ್ನೋ ಮಾತು ಕೊಟ್ಟಿದ್ದರಂತೆ. ಅದನ್ನು ಪೂರೈಸಲೇಬೇಕೆಂದು ನಿರ್ಧರಿಸಿದ್ದಾರೆ.

ಕರ್ಕದೇವ : ಏನದು ನಿರ್ಧಾರ?

ತೈಲಪ : ಏನೆಂದು ತಿಳಿಯದು. ಕೇಳಿದರೂ ಅವರು ಹೇಳಲಿಲ್ಲ. ಪ್ರತಿಯೊಂದಕ್ಕೂ ಸಮಯವೆಂಬುದು ಒಂದಿದೆ. ಯುಕ್ತ ಸಮಯದಲ್ಲಿ ತನಗೆ ತಾನೇ ತಿಳಿಯುತ್ತದೆ, ಎಂದರು.

ಜಕ್ಕಲೆ : ಅಪ್ಪಾಜಿ. ಇವರೂ ಇವರ ತಂದೆಗೆ ವಚನವಿತ್ತಿದ್ದಾರೆ.

ಕರ್ಕದೇವ : ಏನೆಂದು ಮಗಳೆ?

ಜಕ್ಕಲೆ : ತಂದೆಯ ಮಾತನ್ನು ಪ್ರತಿ ಆಡದೆ ನಡೆಸಿಕೊಡುತ್ತೇನೆಂದು. ನನ್ನನ್ನು ಮದುವೆಯಾದದ್ದು ಅವರ ಮಾತನ್ನು ನಡೆಸಿ ಕೊಡಲು?

..........................ಮೌನ..........................

ಜಕ್ಕಲೆ : ಯಾಕಪ್ಪಾ ಸುಮ್ಮನಾದಿರಿ?

ಕರ್ಕದೇವ : ಯೋಚಿಸುತ್ತಿದ್ದೇನೆ ಮಗಳೆ. ನಿಮ್ಮ ಮಾವನವರು ನನಗೆ ಈ ಸಿಂಹಾಸನ ಕೊಡಿಸಲು ಕಂಕಣ ಬದ್ಧರಾಗಿದ್ದೇವೆಂದು ಹೇಳಿದ್ದರು. ಅದರಂತೆ ಪರಮಾರರಿಂದ ನಮ್ಮನ್ನು ನಮ್ಮ ಸಿಂಹಾಸನವನ್ನು ರಕ್ಷಿಸಿಕೊಟ್ಟಿದ್ದಾರೆ. ಮುಂದೆಯೂ ರಕ್ಷಣೆಯ ಭಾರ ಅವರದೇ ಆಗುವುದು ಒಳಿತು.

ತೈಲಪ : ನಿಮಗೆ ಅನುಮಾನ ಬೇಡ. ರಕ್ಷಣೆಯ ಭಾರವನ್ನು ನಾವೇ ವಹಿಸಿಕೊಳ್ಳುತ್ತೇವೆ!............ (ಜಕ್ಕಲೆಯ ಕಡೆಗೆ ನೋಡಿ) ಜಕ್ಕಲೆ............ ಹುಂ............... ಹೇಳಿ........... ಇದೇ ಸರಿಯಾದ ಸಮಯ.

ಜಕ್ಕಲೆ : (ಏಕಾಂತದಲ್ಲಿ) ಉಹಂ! ನೀವೇ ಹೇಳಿ.

ತೈಲಪ : ನಾನೇಕೆ ಹೇಳಲಿ. ನಿಮ್ಮ ತಂದೆಯವರಿಗೆ ನಿನ್ನ ಬಾಯಿಂದಲೇ ಸಂತಸದ ಸುದ್ದಿ ತಿಳಿಯಲಿ.

ಕರ್ಕದೇವ : (ನಗುತ್ತ) ಇದೇನು. ಪರಸ್ಪರರು ನೀವೇನು ಮಾಡುತ್ತಿದ್ದೀರಿ? ಏನನ್ನೋ ಗುಟ್ಟಿನ ವಿಷಯದ ಬಗ್ಗೆ ನಿಮ್ಮಲ್ಲೇ ಚರ್ಚೆ ನಡೆಯುತ್ತಿದೆ......... ಜಕ್ಕಲೆ...........ಮಗಳೆ. ನೀನಾದರೂ ಏನೆಂದು ಹೇಳಬಾರದೆ?

ಜಕ್ಕಲೆ : (ತಡವರಿಸುತ್ತ) ಅದು............ ಅದು............ ಅದು ಅಪ್ಪಾಜಿ.................

ಕರ್ಕದೇವ : ಅದು........ಅದು ಅದೂಂತ ತೊದಲಿದರೆ ನಮಗೆ ಹೇಗೆ ತಿಳಿಯುತ್ತದೆ?

ತೈಲಪ : ಮಾವಂದಿರೇ. 'ಮೊಮ್ಮಗನನ್ನು ಪಡೆ' ಎಂದು ತಾವು ಆಶೀರ್ವದಿಸಬೇಕೆಂದು ಕೇಳುತ್ತಿದ್ದಾಳೆ.

ಕರ್ಕದೇವ : (ಸಂಭ್ರಮದಿಂದ) ಹೌದೆ ಮಗಳೆ! ಈ ಸಂತಸದ ಸುದ್ದಿ ತಿಳಿಸಲು ಎಷ್ಟು ಕಾಯಿಸಿ ಬಿಟ್ಟರಿ?........ ಹೋಗಲಿ ಇನ್ನು ನಾವೆಷ್ಟು ದಿನ ನಮ್ಮ ಮೊಮ್ಮಕ್ಕಳನ್ನು ನೋಡಲು ಕಾಯಬೇಕು?

ತೈಲಪ : ಇನ್ನೂ ಒಂದಾರು ತಿಂಗಳು

ಕರ್ಕದೇವ : ಅಬ್ಬ ಇನ್ನೂ ಅಷ್ಟು ದಿವಸ ಕಾಯಬೇಕೇ?............ಹೋಗಲಿ ಬಿಡಿ ಕಾಯುತ್ತೇವೆ. ಚಾಲುಕ್ಯ ವಂಶಕ್ಕೆ ಉತ್ತರಾಧಿಕಾರಿಯನ್ನು ಕೊಡುವಲ್ಲಿ ನಮ್ಮ ರಾಷ್ಟ್ರಕೂಟ ಹೆಣ್ಣಿನಿಂದ ತಡವಾಯಿತೇಕೆ? ಎಂದುಕೊಂಡಿದ್ದೆವು.

ಸದ್ಯ ಸುದ್ದಿಯು ಸಭೆಯನ್ನು ಅನುಭವಿಸುವಂತೆ ಮಾಡಿರಿ. (ಕಂಚಾಳ ಗಂಟೆಯನ್ನು ಬಾರಿಸಿ, ಯಾರಲ್ಲಿ! ಎನ್ನುವನು)

ಅಂಕಕಾರ : ಸನ್ನಿಧಾನ ಅಪ್ಪಣೆ ಕೊಡಿಸಬೇಕು

ಕರ್ಕದೇವ : ಹೋಗು..............ಈ ಕೂಡಲೆ ಹೋಗಿ ಪುರೋಹಿತರನ್ನು ಬರಹೇಳು.

ಅಂಕಕಾರ : ಅಪ್ಪಣೆ.

– – ವಿರಾಮ – –

ಕರ್ಕದೇವ : ಬನ್ನಿ ಪುರೋಹಿತರೇ. ನಮಗೊಂದು ಸಿಹಿ ಸುದ್ದಿ ಬಂದಿದೆ. ಅದನ್ನು ನಿಮ್ಮೊಡನೆ ಹಂಚಿಕೊಳ್ಳೋಣವೆಂದು ಹೇಳಿ ಕಳುಹಿಸಿದೆ.

ಪುರೋಹಿತ : (ವಿನಯದಿಂದ) ಸನ್ನಿಧಾನ ಅಪ್ಪಣೆ ಕೊಡಿಸಬೇಕು. ರಾಜವಂಶದ ಸಿಹಿ ಸುದ್ದಿಗಳು ಪ್ರಜೆಗಳಾದ ನಮ್ಮೆಲ್ಲರಿಗೂ ಸಂತಸ ತರುವಂತಹವೇ?

ಕರ್ಕದೇವ : ನಾವೀಗ ತಾತನವರಾಗಲಿದ್ದೇವೆ. ನಮ್ಮ ಮಗಳಿಗೆ ಸೀಮಂತ ಮಾಡಲು ದಿನ ಮುಹೂರ್ತ ನಿಶ್ಚಯಿಸಿ ಹೇಳಿ.

ಪುರೋಹಿತ : ಇದು ಪ್ರಥಮ ಗರ್ಭವಾದುದರಿಂದ ೭ ನೇ ಅಥವಾ ೮ ನೇ ತಿಂಗಳಲ್ಲಿ ಸೀಮಂತ ಮಾಡಬಹುದು. ನೀವು ಅಪ್ಪಣೆ ಕೊಡಿಸಿದರೆ ದಿನ ನಿಶ್ಚಯಿಸಿ ತಿಳಿಸುತ್ತೇನೆ.

ಕರ್ಕದೇವ : ಹಾಗಿದ್ದ ಪಕ್ಷದಲ್ಲಿ ತಡವೇಕೆ ಪುರೋಹಿತರೇ? ಒಳ್ಳೆಯ ದಿನ ನೋಡಿ ಮುಹೂರ್ತ ನಿಶ್ಚಯಿಸಿ.

ಪುರೋಹಿತ : (ಒಂದೆರಡು ನಿಮಿಷ ಸುಮ್ಮನಿದ್ದು ಗುಣಗುಣಿಸಿ) ಪ್ರಜೋತ್ಪತ್ತಿ ಸಂವತ್ಸರದ ಮಾರ್ಗಶಿರ ಬಹುಳ ಸಪ್ತಮಿಯಂದು ಶಾರದಾ ಜಯಂತಿ ಇದೆ. ಅಂದು ಪ್ರಶಸ್ತವಾಗಿದೆ.

ಕರ್ಕದೇವ : ಹಾಗಾದರೆ ಅದೇ ಮುಹೂರ್ತವಿರಲಿ. ಪುರೋಹಿತರೇ ಇದಕ್ಕೆ ಬೇಕಾದ ಎಲ್ಲ ಸರಂಜಾಮುಗಳನ್ನು ನೀವು ನಮ್ಮ ಮಂತ್ರಿಗಳಲ್ಲಿ ನಿವೇದಿಸಿ. ಅವರೆಲ್ಲದರ ವ್ಯವಸ್ಥೆ ಮಾಡುತ್ತಾರೆ.

ಪುರೋಹಿತರು : ಈಗ ಎಷ್ಟನೇ ತಿಂಗಳು ನಡೆಯುತ್ತಿದೆ. ಸನ್ನಿಧಾನ ಅಪ್ಪಣೆ ಕೊಡಿಸಬೇಕು.

ಕರ್ಕದೇವ : ಕುಮಾರರೇ ತಾವೇ ತಿಳಿಸಿ.

ತೈಲಪ : ಮೂರು ತುಂಬಿ ನಾಲ್ಕನೇ ತಿಂಗಳು ನಡೆಯುತ್ತಿದೆ.

ಪುರೋಹಿತರು : ಹಾಗಾದರೆ ಇನ್ನೂ ಸಮಯವಿದೆ.

**ಕರ್ಕದೇವರು** : ಸಮಯವಿದ್ದರೇನು ಪುರೋಹಿತರೇ, ಏರ್ಪಾಡುಗಳು ಈಗಿಂದಲೇ ನಡೆಯಲಿ. ಯಾವುದಕ್ಕೂ ಕಡಿಮೆ ಇಲ್ಲದಂತೆ ಅದ್ದೂರಿಯಿಂದ ಸೀಮಂತ ನಡೆಯಬೇಕು. ಬರುವ ವ್ಯಕ್ತಿ ಸಾಮಾನ್ಯನಲ್ಲ. ಚಾಲುಕ್ಯ ವಂಶಕ್ಕೆ ರಾಷ್ಟ್ರಕೂಟರ ಕೊಡುಗೆಯಾಗಿ ಅವತರಿಸಲಿರುವ ವಂಶ ಭಾಸ್ಕರ.

**ಪುರೋಹಿತ** : ಒಪ್ಪಿಕೊಂಡೆ. ಸನ್ನಿಧಾನ ಅಪ್ಪಣೆ ಕೊಡಿಸಿದಂತೆಯೇ ವೈಭವದಿಂದ ನಡೆಯುವುದಕ್ಕೆ ನಾವೆಲ್ಲ ಸಹಕರಿಸುತ್ತೇವೆ. ಅಪ್ಪಣೆಯೇ ಪ್ರಭು? (ನಿರ್ಗಮನ)

**ಕರ್ಕದೇವ** : ಅಳಿಯಂದಿರೇ ಈ ಸಂದರ್ಭದಲ್ಲಿ ನಿಮ್ಮ ಮನೋವಾಂಛೆಗಳು ಏನಿದ್ದರೂ ಕೇಳಿ. ನಾವು ಕೂಡಲೇ ನಡೆಸಿಕೊಡುತ್ತೇವೆ. ನಮ್ಮ ಮನಸ್ಸಿನ ಸಂಭ್ರಮಗಳನ್ನು ಯಾರೊಂದಿಗೆ ಹಂಚಿಕೊಳ್ಳಲಿ? ನೀವೇ ನನಗೆ ಮಗಂದಿರು.

**ತೈಲಪ** : ನಾವೂ ಅದೇ ಭಾವನೆಯಿಂದ ಇದ್ದೇವೆ. ನಮಗೆ ನೀವು ಮಾವಂದಿರಾದರೂ ನಮ್ಮ ಅಪ್ಪಾಜಿಯವರಂತೆಯೇ! ನಿಮ್ಮ ಕ್ಷೇಮ, ನಿಮ್ಮ ರಾಜ್ಯದ ಯೋಗ ಕ್ಷೇಮಗಳ ಜವಾಬ್ದಾರಿಯೆಲ್ಲವನ್ನೂ ಹೊತ್ತು ನಿರ್ವಹಿಸಬೇಕೆಂಬುದೇ ನಮ್ಮ ಆಸೆ.

**ಕರ್ಕದೇವ** : ಅಳಿಯಂದಿರೇ ನಿಮ್ಮ ಮಾತುಗಳನ್ನು ಕೇಳುತ್ತಿದ್ದರೆ ನಮಗೆ ಹೃದಯ ತುಂಬಿ ಬರುತ್ತಿದೆ. ಸಾಮಂತರೇ ಆದರೂ ನಿಮ್ಮ ವಂಶದ ಕೀರ್ತಿ, ಪ್ರತಿಷ್ಠೆಗಳ ಪರಂಪರೆಯ ಅರಿವಿದ್ದೇ ನಾವು ಸಂಬಂಧ ಬೆಳೆಸಲು ಮುಂದಾದಿವಿ.

**ತೈಲಪ** : ಅದರಿಂದ ಈಗ ನಿಮಗೆ ಪಶ್ಚಾತ್ತಾಪವೇನೂ ಎನಿಸುತ್ತಿಲ್ಲ ತಾನೇ?

**ಕರ್ಕದೇವ** : ಪಶ್ಚಾತ್ತಾಪವೇ? ಛೆ!ಛೆ! ಖಂಡಿತ ಇಲ್ಲ. ನಾವು ನಿಜವಾಗಿಯೂ ಅದೃಷ್ಟವಂತರೆನಿಸಿದೆ. ನಮ್ಮ ಬೀಗರೂ ನಿಮ್ಮ ತಂದೆಯವರೂ ಆದ ವಿಕ್ರಮಾದಿತ್ಯರ ಬೆಂಬಲ ಪ್ರೋತ್ಸಾಹಗಳು ದೊರೆಯದಿದ್ದ ಪಕ್ಷದಲ್ಲಿ ನಾವೆಲ್ಲ ರಾಷ್ಟ್ರಕೂಟ ಸಿಂಹಾಸನವನ್ನು ಏರಲು ಸಾಧ್ಯವಾಗುತಿತ್ತೆ? ನಿಮ್ಮ ತಂದೆಯವರ ಅನುಗ್ರಹವೇ ಇದು. ಇನ್ನು ನಮಗೆ ಯಾವ ಭೀತಿಯೂ ಇಲ್ಲ.

**ತೈಲಪ** : ಹಾಗೆಂದು ಮೈಮರೆಯುವುದು ಆಗಬಾರದು. ಏಕೆಂದರೆ ರಾಜವಂಶೀಯರಿಗೆ ರಾಜ್ಯದಾಹ ರಕ್ತಗುಣದ ಭಾಗವಾಗಿರುತ್ತದೆ. ಅವರ ಅಧಿಕಾರ ಅವಧಿಗಳು ಅನಿಶ್ಚಿತ.

ಕರ್ಕದೇವ : ನೀವು ಹೇಳುತ್ತಿರುವ ಮಾತುಗಳು ಅನುಭವ ಜನ್ಯ ಸತ್ಯ ಸಂಗತಿಗಳೆಂದು ಒಪ್ಪಿಕೊಳ್ಳುತ್ತೇನೆ. ಆದರೆ ಅವೇ ಮಾತುಗಳು ನನಗೇಕೋ ಭಯ, ಆತಂಕ, ಅನುಮಾನಗಳನ್ನು ಹುಟ್ಟಿಸುತ್ತಿವೆ.

ಜಕ್ಕಲೆ : ಮಾವ ಅಳಿಯಂದಿರು ಹೀಗೆಯೇ ಮಾತನಾಡುತ್ತಾ ಮಗಳ ಉಪಸ್ಥಿತಿಯನ್ನೇ ಮರೆತು ಬಿಟ್ಟಂತಿದೆ.

ಕರ್ಕದೇವ : ಮಗಳೆ ಒಂದು ಕಡೆ ಸಂಭ್ರಮ ಮತ್ತೊಂದು ಕಡೆ ವಿಷಾದ. ಇವೆರಡರ ನಡುವೆ ಸಿಲುಕಿದ ನನ್ನ ಮನಸ್ಸು ಗತಕಾಲದ ಕಡೆಗೆ ಸರಿಯುತ್ತಿದೆ. ನಿನ್ನ ತಾಯಿಯ ನೆನಪು ಅತಿಯಾಗಿ ಕಾಡತೊಡಗಿದೆ. ಮಗಳು ತಾಯ್ತನದ ಪಟ್ಟಕ್ಕೇರುತ್ತಿರುವ ಸುದ್ದಿಯನ್ನು ಕೇಳಿ ಹೇಗೆ ಸಂತೋಷದಿಂದ ಅರಳುತ್ತಿದ್ದಳೋ ಎಂದು ಯೋಚಿಸುವಂತಾಗಿದೆ.

ಜಕ್ಕಲೆ : ಅಪ್ಪಾಜಿ ನನಗೂ ಅಮ್ಮನ ನೆನಪು ಕಾಡುವುದಾದರೂ ನಿಮ್ಮ ಪ್ರೀತಿಯ ಆರೈಕೆ ಅದೆಲ್ಲವನ್ನೂ ಮರೆಸಿದೆ. ತಾಯಿಯಿಲ್ಲದ ಕೊರತೆಯು ನನ್ನ ಅನುಭವಕ್ಕೆ ಬಾರದ ರೀತಿಯಲ್ಲಿ ನನ್ನನ್ನು ಬೆಳೆಸಿದ್ದೀರಿ.

ಕರ್ಕದೇವ : ಅದು ನನ್ನ ಕರ್ತವ್ಯ ಮಗಳೆ. ನಿನ್ನ ಸಂತೋಷ, ನಿನ್ನ ಅಭಿವೃದ್ಧಿಯಲ್ಲಿ ನಾನು ನನ್ನ ಬದುಕಿನ ಸಾರ್ಥಕತೆಯನ್ನು ಕಂಡುಕೊಳ್ಳುವಂತಾಗಿದೆ. ಇಲ್ಲಿಯವರೆಗೂ ಹೇಗೋ ನಡೆಯಿತು. ಇನ್ನು ಮುಂದೆ ರಾಜಕಾರ್ಯ, ಪ್ರಜಾಚಿಂತನೆಗಳಲ್ಲಿ ನಾವೆಲ್ಲಿ ನಮ್ಮ ಮಗಳಿಗೆ ಅನ್ಯಾಯವೆಸಗುತ್ತೇವೆಯೋ ಎನಿಸಿದೆ.

ಜಕ್ಕಲೆ : ನಾವು ಅಲ್ಲಿಯವರೆಗೆ ಬಿಡುವುದೇ ಇಲ್ಲ ಅಪ್ಪಾಜಿ. ನಿಮ್ಮನ್ನು ಕಾಡಿಸಿ ಪೀಡಿಸಿಯಾದರೂ ನಮ್ಮ ನೆನಪು ಬರುವಂತೆ ಮಾಡುತ್ತೇವೆ.

ಕರ್ಕದೇವ : ಮಗಳೆ, ನನಗೆ ಅಳಿಯನೇ ಪ್ರಸ್ತುತ ಮಗನೆಂದು ಎನಿಸಿದರೂ ಒಮ್ಮೊಮ್ಮೆ ನನಗೆ ಗಂಡು ಸಂತಾನವಿಲ್ಲದ್ದು ಕಾಡುತ್ತದೆ.

ತೈಲಪ : ಹಾಗಾದರೆ ಪುನರ್ವಿವಾಹವನ್ನು ಮಾವಂದಿರು ಮಾಡಿಕೊಳ್ಳಬಹುದಿತ್ತಲ್ಲ?

ಕರ್ಕದೇವ : ಪುನರ್ವಿವಾಹದ ಯೋಚನೆ ಎಂದೋ ಒಮ್ಮೆ ಬಂದಿತ್ತು. ನಮ್ಮ ಮಗಳ ಕ್ಷೇಮದ ದೃಷ್ಟಿಯಿಂದ ಅದನ್ನು ಕೈ ಬಿಟ್ಟೆವು. ಸಿಂಹಾಸನಾರೋಹಣಕ್ಕೆ ಮೊದಲು ನಮಗೆ ಗಂಡು ಸಂತಾನದ ಅಗತ್ಯತೆ ಬೇಕೆನಿಸಿರಲಿಲ್ಲ.

ತೈಲಪ : ಆಗಬೇಕೆನಿಸರಲಿಲ್ಲ ನಿಜ. ಈಗ ತಮಗೇನೆನಿಸುತ್ತದೆ?

ಕರ್ಕದೇವ : ಅಳಿಯಂದಿರೇ, ನಾವು ನಾಚಿಕೆ ಬಿಟ್ಟು ಮಾತನಾಡುತ್ತಿದ್ದೇವೆಂದು ನಿಮಗೆ ಅನಿಸಬಹುದು. ಆದರೆ ನನಗೆ ಈಗೀಗ ಮರುಮದುವೆಯ ಕಡೆಗೆ ಒಮ್ಮೊಮ್ಮೆ ಮನಸ್ಸು ಹೊರಳುತ್ತದೆ.

ಜಕ್ಕಲೆ : ಅಪ್ಪಾಜಿ ನಿಮಗೆ ಅನಿಸುವುದು ಸಹಜವೇ. ಆದರೆ ಈ ವಯಸ್ಸಿನಲ್ಲಿ ಮದುವೆಯ ಯೋಚನೆ ಸರಿ ಎನಿಸದು. ನಿಮಗೆ, ಹುಟ್ಟುವ ಮೊಮ್ಮಗನನ್ನೇ ಮಗನೆಂದು ಭಾವಿಸಬಾರದೇಕೆ?

ಕರ್ಕದೇವ : ಅದೂ ಸರಿಯೇ! ನಮ್ಮ ನಂತರ ನಮ್ಮ ರಾಜ್ಯವನ್ನು ನಮ್ಮ ಮೊಮ್ಮಗನಿಗೇ ಧಾರೆಯೆರೆಯುತ್ತೇವೆ. ಆಯಿತೇ ಮಗಳೆ? ಆ ವಿಚಾರವಾಗಿ ನಿನಗೆ ಅನುಮಾನ ಬೇಡ.

ತೈಲಪ : ಅಲ್ಲಿಯವರೆಗೂ ಈ ರಾಷ್ಟ್ರವನ್ನು, ಈ ಸಿಂಹಾಸನವನ್ನು ತಾವು ಸುಭದ್ರವಾಗಿ ಕಾಪಾಡಿಕೊಂಡು ಬರಬೇಕು.

ಕರ್ಕದೇವ : ನೀವು ನಿಮ್ಮ ಬೆಂಬಲಗಳೇ ನಮಗೆ ಭದ್ರ ಕವಚವಾಗಬೇಕು.

ತೈಲಪ : ಅದಕ್ಕಾಗಿ ನಾವು ಸದಾ ಸಿದ್ಧರಿದ್ದೇವೆ. ನಮ್ಮ ತಂದೆಯವರ ಆದೇಶಗಳನ್ನು ಚಾಚೂ ತಪ್ಪದೇ ನಡೆಸಿಕೊಟ್ಟು ಚಾಲುಕ್ಯ ವಂಶದ ಘನತೆ. ಗೌರವ ಧ್ವಜಗಳನ್ನು ಮುಗಿಲೆತ್ತರಕ್ಕೆ ಹಾರಿಸುತ್ತೇನೆ. ಇದು ಖಂಡಿತ.

ಅಂಕಕಾರ : ಸನ್ನಿಧಾನಂಗಳು ಕ್ಷಮಿಸಬೇಕು. ಸಾಮಂತ ವಿಕ್ರಮಾದಿತ್ಯರು ಮತ್ತು ಪತ್ನಿಯವರು ತೈಲಪಕುಮಾರರನ್ನು ಈಗಿಂದೀಗಲೇ ಕರೆತರಬೇಕೆಂದು ಅಪ್ಪಣೆ ಕೊಡಿಸಿದ್ದಾರೆ.

ತೈಲಪ : ಏನಾದರೂ ಕಾರಣವನ್ನು ಹೇಳಿದರೆ?

ಅಂಕಕಾರ : ಇಲ್ಲ.

ತೈಲಪ : ಈಗಲೇ ಬರುತ್ತೇವೆಂದು ಹೋಗಿ ತಿಳಿಸು.

ಅಂಕಕಾರ : ಅಪ್ಪಣೆ (ಹೋಗುವನು).

ಕರ್ಕದೇವ : ಬನ್ನಿ ಕುಮಾರರೇ. ನಿಮ್ಮ ತಂದೆಯವರನ್ನು ಹೇಗೂ ಕಾಣಬೇಕೆಂದಿದ್ದೆ. ನಿಮ್ಮೊಟ್ಟಿಗೇ ಬರುತ್ತೇನೆ. ಅವರ ಆರೋಗ್ಯ ವಿಚಾರಿಸಿದಂತೆಯೂ ಆದೀತು. ಸೀಮಂತದ ಬಗ್ಗೆ ಮಾತುಕತೆ ಆಡಿದಂತೆಯೂ ಆಯಿತು.

– – ವಿರಾಮ – –

ಕರ್ಕದೇವ : ಹೇಗಿದ್ದೀರಿ ಸಾಮಂತ ವಿಕ್ರಮಾದಿತ್ಯರೇ? ನಮ್ಮ ರಾಜವೈದ್ಯರು ತಮ್ಮನ್ನು ಕಾಣಲು ಆದೇಶಿಸಿದ್ದೆ. ಬಂದಿದ್ದರೇನು?

ವಿಕ್ರಮಾದಿತ್ಯ : ಬಂದಿದ್ದರು. ತಾವು ನಮ್ಮ ಆರೋಗ್ಯದ ಬಗ್ಗೆ ವಹಿಸುತ್ತಿರುವ ಮುತುವರ್ಜಿಯಿಂದ ನಾವು ಕೃತಜ್ಞತಾಭಾವದಿಂದ ತುಂಬಿ

ಹೋಗಿದ್ದೇವೆ. ಬಂದು ನಮ್ಮನ್ನು ಪರೀಕ್ಷಿಸಿ ಔಷಧೋಪಚಾರದ ಬಗ್ಗೆ ತಿಳಿಸಿದ್ದಾರೆ

ಕರ್ಕದೇವ : ಖಂಡಿತ ನೀವು ಬೇಗನೆ ಗುಣಮುಖರಾಗುತ್ತೀರಿ.

ವಿಕ್ರಮಾದಿತ್ಯ : ತಮ್ಮ ಹಾರೈಕೆಗೆ ನನ್ನ ಧನ್ಯವಾದಗಳು. ಹೇಗೆ ನಡೆಯುತ್ತಿದೆ ತಮ್ಮ ರಾಜ್ಯಭಾರ?

ಕರ್ಕದೇವ : ಇನ್ನೂ ಈಗಲೇ ಏನನ್ನು ಹೇಳಲಿ? ತಮ್ಮ ಸಲಹೆ ಸಹಕಾರಗಳ ಮೇಲೇ ನನ್ನ ರಾಜ್ಯಭಾರ................ವಿಕ್ರಮಾದಿತ್ಯರೇ ನನಗೆ ನನ್ನ ದೊಡ್ಡಪ್ಪನ ಚಿಂತೆಯೇ ಅತಿಯಾಗಿ ಕಾಡುತ್ತಿದೆ. ಬನವಾಸಿಯತ್ತ ಸೈನ್ಯದೊಂದಿಗೆ ಪಲಾಯನ ಮಾಡಿದವರು ಎಲ್ಲಿ ಹೋದರೆಂದೇ ತಿಳಿಯದಾಗಿದೆ. ಈ ಗಜ್ಜೇಂದ್ರ, ಜಕ್ಕಿ ಸುಂದರಿ, ಪಂಡಿಗರ ಸಂಬಂಧಗಳೇ ಅರ್ಥವಾಗುತ್ತಿಲ್ಲ. ಅರಮನೆಯಲ್ಲಿ ಏನೋ ಒಂದು ಬಗೆಯ ಗುಮಾನಿಯ ವಾತಾವರಣವಿದ್ದಂತಿದೆ.

ವಿಕ್ರಮಾದಿತ್ಯ : ನೀವು ಬಹಳ ಎಚ್ಚರಿಕೆಯಿಂದ ಇರಬೇಕು. ಜಕ್ಕಿ ಸುಂದರಿ, ಪಂಡಿಗರ ವಿಚಾರವಾಗಿ ನಿಮಗೆ ಕಳವಳ ಬೇಡ. ಆದರೂ ಅವರೆಲ್ಲರೊಂದಿಗೆ ಎಚ್ಚರಿಕೆಯಿಂದ ವ್ಯವಹರಿಸಿ. ಯಾರು ಏನೆಂದು ಸ್ಪಷ್ಟವಾಗುವವರೆಗೆ ನಾವು ಜಾಗರೂಕರಾಗಿರಬೇಕು.

ಕರ್ಕದೇವ : ನಿಮಗೇನಾದರೂ ನಮ್ಮ ದೊಡ್ಡಪ್ಪನ ವಿಚಾರವಾಗಿ ಇಂದ್ರನ ವಿಚಾರವಾಗಿ ಬೇಹು ಬಂದಿದೆಯೇ?

ವಿಕ್ರಮಾದಿತ್ಯ : ಸಾಧಾರಣ ವಿಷಯಗಳು ಬಿಟ್ಟರೆ, ಗಾಭರಿಯಾಗಬೇಕಾದ ಯಾವ ಸುದ್ದಿಗಳೂ ಇಲ್ಲ (ತೈಲಪನಿಗೆ) ತೈಲ. ಜಕ್ಕಿ ಸುಂದರಿಯವರು ನಿನ್ನ ಮತ್ತು ನಿನ್ನ ತಾಯಿಯ ಜೊತೆಗೆ ಏನನ್ನೋ ಮಾತಾಡಬೇಕೆಂದು ಬಯಸುತ್ತಿದ್ದಾರೆ ಎಂದು ಕರೆ ಕಳಿಸಿದ್ದಾರೆ. ನೀನೂ ನಿನ್ನ ತಾಯಿ ಹೋಗಿ ವಿಷಯವೇನೆಂದು ತಿಳಿದು ಬನ್ನಿ. ನಾಳೆ ನೀನು ನಿನ್ನ ಮಾವನ ಜೊತೆಗೆ ಹೋಗಬೇಕಿದೆ.

ತೈಲಪ : ಏಕೆ ಅಪ್ಪಾಜಿ? ಏನಾದರೂ ರಾಜಕಾರ್ಯವೇ?

ವಿಕ್ರಮಾದಿತ್ಯ : ನಿನ್ನ ಮಾವನೇ ಎಲ್ಲವನ್ನೂ ವಿವರಿಸಿ ಹೇಳುತ್ತಾರೆ. ನಿನ್ನ ಕ್ಷೇಮದ ದೃಷ್ಟಿಯಿಂದಲೇ ಕರೆದೊಯ್ಯುತ್ತೇನೆ ಎಂದರು. ನಾನು ಮತ್ತೆ ಅವರನ್ನು ಕೆದಕಿ ಕೇಳಲಿಲ್ಲ.

ತೈಲಪ : ಆಯಿತು ಅಪ್ಪಾಜಿ. ಜಕ್ಕಿ ಸುಂದರಿಯವರನ್ನು ಕಂಡು ಮಾತನಾಡುತ್ತೇನೆ........ ಅದರೆ ನಿಮ್ಮ ಆರೋಗ್ಯದ ಚಿಂತೆಯಾಗಿದೆ.

ಇಂತಹ ಸ್ಥಿತಿಯಲ್ಲಿ ನಿಮ್ಮನ್ನು ಬಿಟ್ಟು ನಾನು ಹೇಗೆ ಮಾವನ ಜೊತೆಗೆ ಹೋಗಲಿ?

**ವಿಕ್ರಮಾದಿತ್ಯ** : ಮಗು ತಂದೆಯ ಬಗ್ಗೆ ನಿನಗೆ ಇರುವ ಭಕ್ತಿ ಮೆಚ್ಚಬೇಕಾದ್ದೇ. ಆದರೆ ಈಗಿನ ಈ ರಾಜಕೀಯ ಪರಿಸ್ಥಿತಿಗಳಲ್ಲಿ ಒಬ್ಬರಿಗಾಗಿ ಒಬ್ಬರು ಕಾಯುತ್ತ ಕಾಲಹರಣಕ್ಕೆ ಅವಕಾಶವಿಲ್ಲ.

**ತೈಲಪ** : ನಿಜ. ಆದರೂ ಹೆತ್ತ ತಂದೆ ತಾಯಿಗಳ ಮುಂದೆ ಮತ್ತೆಲ್ಲವೂ ಕ್ಷುಲ್ಲಕ. ಏನೊಂದೂ ಮಹತ್ವದ್ದೆನಿಸುವುದಿಲ್ಲ.

**ವಿಕ್ರಮಾದಿತ್ಯ** : ಅದು ಬೇರೆ ಸಮಯದಲ್ಲಿ. ಆದರೆ ಈಗಿನ ಪರಿಸ್ಥಿತಿ ಬೇರೆ. ಅಪಾಯದ ಮೋಡಗಳು ಸುಳಿದಾಡುತ್ತಿವೆ. ಅವು ಈ ಮಾನ್ಯಖೇಟವನ್ನು ಕವಿದು ಆಕ್ರಮಿಸದಂತೆ ನೋಡಿಕೊಳ್ಳಬೇಕಾದ್ದು ಮೊದಲ ಕರ್ತವ್ಯ.

**ತೈಲಪ** : ಆದರೂ ಅಪ್ಪಾಜಿ ನನ್ನ ಮನಸ್ಸೇಕೋ ತಳಮಳಿಸುತ್ತಿದೆ.

**ಕರ್ಕದೇವ** : ಅಳಿಯಂದಿರೇ ನಿಮ್ಮಂತಹ ಶೂರರು ಧೈರ್ಯವಂತ ಯುವಕರು ಈ ಸಣ್ಣಪುಟ್ಟದ್ದಕ್ಕೆ ಅಧೀರರಾಗಬಾರದು. ಅಲ್ಲದೆ ನಿಮ್ಮ ತಂದೆಯವರು ನಮ್ಮ ರಕ್ಷಣೆಯಲ್ಲಿ ತಾನೇ ಇರುವುದು?

**ವಿಕ್ರಮಾದಿತ್ಯ** : ಹೋಗಿ ಬಾ ಮಗು ನಿನಗೆ ಒಳ್ಳೆಯದಾಗಲಿ. ನೀನು ನನಗೆ ಕೊಟ್ಟ ವಚನ ಪೂರೈಸುವವರೆಗೂ ನಾನು ಸಾಯುವುದಿಲ್ಲ. ಆದ್ದರಿಂದ ನಿನಗೆ ಯಾವ ಭೀತಿಯೂ ಬೇಡ.

**ಕರ್ಕದೇವ** : ವಿಕ್ರಮಾದಿತ್ಯರೇ ನಿಮ್ಮ ಬಾಯಿಂದ ಸಾವಿನ ಮಾತು ಬರಬಾರದು. ನಿಮ್ಮ ವಂಶದ ವಾರಸುದಾರನ ನಿರೀಕ್ಷೆಯ ಸಂತಸದ ಕ್ಷಣಗಳಿವು. ನೆಮ್ಮದಿಯಾಗಿ ವಿಶ್ರಾಂತಿ ತೆಗೆದುಕೊಳ್ಳಿ. ಮತ್ತೆ ಕಾಣುತ್ತೇನೆ.

೦೦

## ದೃಶ್ಯ - ೫

ಜಕ್ಕಿಸುಂದರಿ : ನಮ್ಮ ಜಕ್ಕಲೆ ತುಂಬ ಅದೃಷ್ಟವಂತೆ. ಎಷ್ಟು ಸಂಭ್ರಮದಿಂದ ಸೀಮಂತ ನಡೆಯಿತು. ಇದರ ವೈಭವ. ಬಂದವರ ಮುಖಗಳಲ್ಲಿನ ಉತ್ಸಾಹ ಅರಮನೆಯ ಸಿಂಗಾರಗಳು, ಔತಣಗಳು...... ಓಹ್ ಎಷ್ಟು ಚೆನ್ನಾಗಿತ್ತು. ಮಾನ್ಯಖೇಟದ ಅರಮನೆಯೇ ಆದರೂ ಚಾಲುಕ್ಯರರಮನೆಯಲ್ಲಿ ನಡೆದಂತೆಯೇ ನನಗೆ ಭಾಸವಾಗುತ್ತಿತ್ತು.

ಬೊಂತಾದೇವಿ : ಜಕ್ಕಿಯವರೇ ದಯಮಾಡಿ.........

ಜಕ್ಕಿಸುಂದರಿ : ಯಾಕೆ? ಮಾತಾಡಿದರೆ ಆಗುವ ನಷ್ಟವೇನು?

ಬೊಂತಾದೇವಿ : ನಷ್ಟವೇನೆಂಬುದು ಈಗ ಗೊತ್ತಾಗುವುದಿಲ್ಲ. ಈಗಾಗಲೇ ಏನೇನೋ ಹುಚ್ಚು ವದಂತಿಗಳು ಸುಳಿದಾಡುತ್ತಿವೆ. ಸುದ್ದಿ ಸಣ್ಣದಾದರೂ ರೆಕ್ಕೆ ಪುಕ್ಕಗಳನ್ನು ಹಚ್ಚಿಕೊಂಡು ನಮ್ಮ ಪಾಲಿಗೆ ಸಿಡಿಲ ಹಕ್ಕಿಯಾಗಿ ಎರಗಿದರೂ ಆಶ್ಚರ್ಯ ಪಡಬೇಕಾದ್ದಿಲ್ಲ.

ಜಕ್ಕಿಸುಂದರಿ : ಲೋಕಾಭಿರಾಮವಾಗಿ ಹೇಳಿದೆನೇ ಹೊರತಾಗಿ ಅದಕ್ಕೆ ಯಾವ ವಿಶೇಷ ಅರ್ಥಗಳೂ ಇರಲಿಲ್ಲ.

ಬೊಂತಾದೇವಿ : ನಿಮ್ಮ ಮಾತುಗಳಲ್ಲಿನ ಅರ್ಥಗಳನ್ನು ನಾನು ಸರಿಯಾಗಿ ಗ್ರಹಿಸಬಲ್ಲೆ. ಆದರೆ ಈ ಅರಮನೆಗಳಲ್ಲಿ ಗೋಡೆ, ಗವಾಕ್ಷಗಳಿಗೂ ಕೇಳಿಸಿಕೊಳ್ಳುವ ಅಭ್ಯಾಸವಿರುತ್ತದೆ.

ಜಕ್ಕಿಸುಂದರಿ : ನೀವು ಇಷ್ಟೇಕೆ ಹೆದರುತ್ತೀರಿ. ಹೆದರಬೇಕಾದ ಕಾಲ ಒಂದಿತ್ತು. ಈಗ ಹೆದರುವ ಅಗತ್ಯವಿರಲಾರದು.

ಬೊಂತಾದೇವಿ : ನೀವು ಹೀಗೇಕೆ ಮಾತನಾಡುತ್ತೀರಿ. ನಮ್ಮ ಅಂತಸ್ತು, ಪದವಿ ನಿಮಗೆ ಗೊತ್ತೇ ಇದೆಯಲ್ಲ.

ಜಕ್ಕಿಸುಂದರಿ : ಈಗ ಕಾಲ ಬದಲಾಗಿದೆ ಬೊಂತಾದೇವಿಯವರೇ.

**ಚೊಂತಾದೇವಿ** : ಕಾಲ ಬದಲಾದ ಮಾತ್ರಕ್ಕೆ ಬಂದ ಭಾಗ್ಯವೇನು? ನಾವಿನ್ನೂ ಸಾಮಂತರೇ ತಾನೇ!

**ಜಕ್ಕಿಸುಂದರಿ** : ಇಂದು ಸಾಮಂತರಿರಬಹುದು. ನಾಳೆ ಯಾರು ಏನು ಆಗುತ್ತಾರೆ ಎನ್ನುವುದನ್ನು ಯಾರು ಹೇಳಬಲ್ಲರು?

**ಚೊಂತಾ** : ನೀವು ಏನೇನೋ ಮಾತನಾಡುತ್ತಿದ್ದೀರಿ. ನನಗೇಕೋ ಭಯವಾಗುತ್ತಿದೆ. ನಿಮ್ಮ ನಮ್ಮ ಮಾತುಗಳು ಅಕಸ್ಮಾತ್ತಾಗಿ ಯಾರ ಕಿವಿಗಾದರೂ ಬಿದ್ದರೆ, ಇಲ್ಲದ್ದನ್ನೂ ಕಲ್ಪಿಸಿ ನಮ್ಮ ಪ್ರಾಣಕ್ಕೇ ಬಂದೀತು. ನನ್ನ ಯಜಮಾನರಿಗೆ ಬೇರೆ ಆರೋಗ್ಯ ಸರಿಯಿಲ್ಲ. ಯಾರನ್ನೂ ನಾವು ಎದುರು ಹಾಕಿಕೊಳ್ಳುವ ಪರಿಸ್ಥಿತಿಯಲ್ಲಿಲ್ಲ.

**ಜಕ್ಕಿ** : ಹೊಸ ಬೇಹಿನ ಸುದ್ದಿಗಳೇನಾದರೂ......

**ಚೊಂತಾ** : ಸುದ್ದಿಗಳು ನಮಗಿಂತ ಬೇಗ ನಿಮ್ಮನ್ನೇ ತಲುಪುತ್ತವೆ. ಏನಾದರೂ ಹೇಳುವುದಿದ್ದರೆ ನೀವೇ ಹೇಳಬೇಕು.

**ಜಕ್ಕಿ** : ನಿಮಗೆ ನಾನು ಏನನ್ನೂ ಈಗ ಹೇಳುವುದಿಲ್ಲ. ಪರಿಸ್ಥಿತಿಗಳೇ ನನ್ನೊಳಗನ್ನು ಬಿಡಿಸಿ ತೋರಿಸುತ್ತದೆ. ಸದ್ಯಕ್ಕಂತೂ ನಾನು ಹೀಗೆಯೇ ನಡೆದುಕೊಳ್ಳಬೇಕು.

**ಚೊಂತಾ** : ಹೋಗಲಿ ಬಿಡಿ..... ನಿಮಗೇನೋ ಹೇಳಲು ಸುದ್ದಿಯೊಂದಿದೆ ಎಂದು ಹೇಳಿದಿರಿ.

**ಜಕ್ಕಿ** : ಹೂಂ!...... ಅದು ಬಹಳ ಗುಟ್ಟಿನ ವಿಷಯ. (ಗುಟ್ಟಿನ ದನಿಯಲ್ಲಿ) ನಿಮಗೆ ಗೊತ್ತೇ?..... ಖೊಟ್ಟಿಗರು ನಿಧನರಾದರಂತೆ!

**ಚೊಂತಾ** : (ಬೆಚ್ಚಿ) ಹಾಂ! ಏನಂದಿರಿ? ಖೊಟ್ಟಿಗರು ನಿಧನರಾದರೆ?

**ಜಕ್ಕಿಸುಂದರಿ** : ಸ್ವಲ್ಪ ಮೆಲ್ಲಗೆ ಮಾತನಾಡಿ..... ಖೊಟ್ಟಿಗರ ಸಾವಿಗೂ ಕರ್ಕರ ಸಿಂಹಾಸನಾರೋಹಣಕ್ಕೂ ಸಂಬಂಧ ಏರ್ಪಡಿಸಿ ಕತೆಗಳನ್ನು ಕಟ್ಟಿ ಹರಿಯಬಿಟ್ಟಾರು!

**ಚೊಂತಾ** : ನಾವು ಹೇಳದಿದ್ದರೂ ಇಂದಲ್ಲ ನಾಳೆ ಜನತೆಗೆ ಇದು ತಿಳಿದೇ ತಿಳಿಯುತ್ತದೆ. ಕರ್ಕರ ಮೇಲೆ ದಂಗೆ ಎದ್ದರೂ ಆಶ್ಚರ್ಯವಿಲ್ಲ.

**ಜಕ್ಕಿಸುಂದರಿ** : ಖೊಟ್ಟಿಗರ ಆಡಳಿತದಿಂದ ಜನ ಬೇಸತ್ತಿದ್ದರು. ಕರ್ಕರನ್ನು ದೂರಬಹುದೇ ಹೊರತು ಖೊಟ್ಟಿಗರ ಸಾವಿಗೆ ದುಃಖಪಡುವರೆಂಬುದು ಸುಳ್ಳು.

**ಚೊಂತಾ** : ಜನರ ಮನಸ್ಸು ಹೇಗೆ ಎಂದು ಹೇಳಲಿಲ್ಲಾಗುವುದಿಲ್ಲ. ದಂಗೆ ಏಳುವುದಕ್ಕೆ ಸಣ್ಣ ನೆಪ ಸಿಕ್ಕಿದರೂ ಸಾಕು.

ಜಕ್ಕಿ : ಇದ್ಯಾವುದೂ ಆಗದಂತಹ ಪ್ರಸಂಗ ಒಂದು ಬಂದೇ ಬರುತ್ತದೆ. ಬೆಟ್ಟದಂತೆ ಬೀಳುವ ಅಪಾಯಗಳು ಬೆಣ್ಣೆಯಂತೆ ಕರಗಿ ಹೋಗುತ್ತವೆ.

ಬೊಂತಾ : ನಿಮ್ಮ ವಿಶ್ವಾಸ. ದೂರಾಲೋಚನೆಗಳು ಮೆಚ್ಚಿಕೊಳ್ಳಬೇಕಾದ್ದೇ!

ಜಕ್ಕಿ : ಮೆಚ್ಚಿಕೊಳ್ಳುವುದಕ್ಕೆ ಇನ್ನೂ ಬೇಕಾದಷ್ಟಿದೆ. ಮುಂದೆ ಮುಂದೆ ನಿಮಗೇ ತಿಳಿಯುತ್ತದೆ.

ಬೊಂತಾ : ಅದು ಸರಿ. ಅವರ ನಿಧನದ ವಾರ್ತೆ ನಿಮಗೆ ತಲುಪಿದ್ದಾದರೂ ಹೇಗೆ?

ಜಕ್ಕಿಸುಂದರಿ : ನನ್ನ ಯಜಮಾನರಿಗೆ ಒಂದು ವಾರದ ಹಿಂದಷ್ಟೇ ಗುಟ್ಟಿನ ಲೇಖ ಬಂದಿತ್ತು.

ಬೊಂತಾ : ನಿಧನಕ್ಕೆ ಕಾರಣವೇನೆಂದು ತಿಳಿದಿದೆಯೇ?

ಜಕ್ಕಿ : ನನಗೆ ವಿವರಗಳು ಸರಿಯಾಗಿ ತಿಳಿದಿಲ್ಲ. ನಿಧನರಾದ ವಿಷಯವನ್ನಷ್ಟೇ ಅವರು ನನಗೆ ಹೇಳಿದರು. ಅಲ್ಲದೆ ಈ ಮಾತನ್ನು ನಿಮ್ಮವರೆಗೆ ತಲುಪಿಸಲು ಹೇಳಿದರು.

ಬೊಂತಾದೇವಿ : ಕರ್ಕದೇವರಿಗೆ ಈ ಸುದ್ದಿ ತಲುಪಿದೆಯೇ?

ಜಕ್ಕಿಸುಂದರಿ : ಅದು ನನಗೆ ಗೊತ್ತಿಲ್ಲ. ಗಜ್ಜೇಂದ್ರರಿಂದ ನಮಗೆ ಸುದ್ದಿ ಬಂತು. ನಮ್ಮಿಂದ ಈಗ ನಿಮಗೆ ತಿಳಿದಿದೆ ಅಷ್ಟೆ!

ಬೊಂತಾ : ಜಕ್ಕಿ ಸುಂದರಿಯವರೇ ನಾನೊಂದು ಮಾತು ಕೇಳಲೇ?

ಜಕ್ಕಿಸುಂದರಿ : ಕೇಳಿ..... ನಿಸ್ಸಂಕೋಚವಾಗಿ ಕೇಳಿ. ಆಗಮಾತ್ರವೇ ನಮ್ಮ ಸ್ನೇಹಕ್ಕೆ ಮುಖವಾಡಗಳು ಇರುವುದಿಲ್ಲ.

ಬೊಂತಾದೇವಿ : ಗಜ್ಜೇಂದ್ರರಿಂದ ವಿಷಯ ನಿಮ್ಮ ಯಜಮಾನರಿಗೆ ತಿಳಿಯಿತು ಎಂದಿರಿ. ಗಜ್ಜೇಂದ್ರರು ಸನ್ನಿಧಾನಕ್ಕೆ ವಿಷಯ ತಿಳಿಸದೆ ನಿಮ್ಮ ಯಜಮಾನರಿಗೆ ತಿಳಿಸುವ ಉದ್ದೇಶ?

ಜಕ್ಕಿಸುಂದರಿ : ಉದ್ದೇಶವೇನೆಂಬುದು ನನಗೆ ತಿಳಿದಿಲ್ಲವಾದರೂ ನೀವು ಊಹಿಸುವಂತೆ ಅದರ ಹಿಂದೆ ಉದ್ದೇಶವೇನಾದರೂ ಇದ್ದೇ ಇರುವುದಂತೂ ಸತ್ಯ.

ಬೊಂತಾ : ಹಾಗಾದರೆ ಅದನ್ನು ತಿಳಿಯುವುದು ಹೇಗೆ?

ಜಕ್ಕಿ : ನನ್ನ ಯಜಮಾನರು ದೊರೆ ವಿಕ್ರಮಾದಿತ್ಯರೊಂದಿಗೆ ಈ ವಿಷಯ ಕುರಿತು ಪ್ರಸ್ತಾಪ ಮಾಡಿದಾಗ ಉದ್ದೇಶ ಸ್ಪಷ್ಟವಾದೀತು.

ಬೊಂತಾ : ಸರಿ ಹಾಗಾದರೆ ನಾನು ಬರುತ್ತೇನೆ. ಈಗಾಗಲೇ ಹೊತ್ತು ಮೀರಿತು.

**ಜಕ್ಕಿಸುಂದರಿ** : ನೋಡಿ ನೀವು ನಿಮ್ಮ ದೊರೆಗಳಿಗೆ ನಮ್ಮ ನಮ್ಮೊಳಗೆ ನಡೆದ ಮಾತುಗಳನ್ನು ತಿಳಿಸಬೇಡಿ. ಅವರಿಗೇ ಎಲ್ಲವೂ ತಿಳಿಯುತ್ತದೆ. ತಿಳಿಯಬೇಕಾದ ರೀತಿಯಲ್ಲಿ.

**ಬೊಂತಾ** : ನಿಮ್ಮ ಯಜಮಾನರು ನಮ್ಮವರನ್ನು ಭೇಟಿಯಾಗಿರುತ್ತಾರೆ ಎಂದಾಯಿತು.

**ಜಕ್ಕಿಸುಂದರಿ** : ಹಾಗೆಂದೇ ಹೇಳಿದ್ದರು. ಈಗ ನೀವು ಹೋದಾಗ ಅವರು ಬಂದಿರುವ ವಿಷಯ ತಿಳಿಯುತ್ತೆ. ಒಂದು ವೇಳೆ ಈಗ ಬಂದಿಲ್ಲವಾದರೆ ನಾಳೆ ಸೂರ್ಯೋದಯದ ಒಂದು ಪ್ರಹರದ ಮೇಲೆ ಸಂದರ್ಶನಕ್ಕೆ ಬರುತ್ತಾರೆಂದು ಹೇಳಿ. ಸಾಕು.

**ಬೊಂತಾ** : ಆ ಸಮಯದಲ್ಲಿ ನಮ್ಮ ಕುಮಾರರೂ ಜೊತೆಗೆ ಇರಬಹುದೇ? ಯಾಕೆಂದರೆ ಕರ್ಕ ಪ್ರಭುಗಳೇ ಅಳಿಯನನ್ನು ರಾಜಕೀಯ ಗಂಭೀರ ವಿಚಾರಗಳ ಚರ್ಚೆಯಲ್ಲಿ ಆಸಕ್ತಿ ವಹಿಸುವಂತೆ ಹೇಳಿದ್ದಾರೆ.

**ಜಕ್ಕಿ** : ಈ ವಿಚಾರವಾಗಿ ನಾವು ತಲೆಕೆಡಿಸಿಕೊಳ್ಳುವುದು ಬೇಡ. ಗಂಡಸರಿಗೆ ಕುಮಾರರ ಉಪಸ್ಥಿತಿ ಅಗತ್ಯವೆನಿಸಿದರೆ, ಜೊತೆಗೇ ಉಳಿಸಿಕೊಳ್ಳುತ್ತಾರೆ.

– – ವಿರಾಮ – –

**ತೈಲಪ** : ಅವ್ವೆ. ಜಕ್ಕಿಸುಂದರಿಯವರೊಡನೆ ಮಾತನಾಡುವಾಗ ಜಾಗರೂಕರಾಗಿರಬೇಕು. ನೀವಷ್ಟು ಸಮಯ ಅವರೊಂದಿಗೆ ಮಾತನಾಡಿ ತಪ್ಪು ಮಾಡಿದಿರೇನೋ ಎನಿಸುತ್ತದೆ.

**ಬೊಂತಾ** : ಇಲ್ಲ ಕುಮಾರ. ಅನಾಹುತಕ್ಕೆ ಎಡೆಯಾಗುವ ಯಾವ ಮಾತುಗಳನ್ನೂ ಆಡಲಿಲ್ಲ. ವಿಷಯಗಳನ್ನು ಅವರಿಂದ ಬರಮಾಡಿದೆನೇ ಹೊರತಾಗಿ ನಾನು ಬಿಚ್ಚಿಕೊಳ್ಳಲಿಲ್ಲ.

**ತೈಲಪ** : ಜಾಣತನದ ಮಾತುಗಳಿಂದ ಯಾರನ್ನಾದರೂ ನಂಬಿಸಿ ಮೋಡಿ ಹಾಕಬಲ್ಲರು.

**ಬೊಂತಾ** : ನೀನು ಹೇಳುವುದು ಸತ್ಯ ಕುಮಾರ. ನಾನು ಅವರೊಂದಿಗೆ ಇಷ್ಟು ಸಲುಗೆಯಿಂದ, ಹತ್ತಿರದಿಂದ ಮಾತನಾಡಿದರೂ ಅವರ ನಾಡಿಮಿಡಿತಗಳನ್ನು ಹಿಡಿಯಲಾಗಿಲ್ಲ.

**ತೈಲಪ** : ಅವರೊಂದಿಗೆ ನಡೆದ ಮಾತುಗಳಾದರೂ ಏನೆಂದು ಹೇಳಿ ಅವ್ವೆ.

**ಬೊಂತಾ** : ಹೇಳುತ್ತೇನೆ ಮಗು. ಆದರೆ ನನಗಾದ ಆಶ್ಚರ್ಯ ಏನು ಗೊತ್ತೆ?

**ತೈಲಪ** : ನನಗೆ ಹೇಗೆ ಗೊತ್ತಾಗಬೇಕು. ನೀವು ಹೇಳಿದರೆ ತಾನೇ?

ಜೊಂತಾ : ಅದೇ ಖೊಟ್ಟಿಗರ ನಿಧನದ ಸುದ್ದಿ ಗಬ್ಬೀಂದ್ರರಿಂದ ಪಂಡಿಗರಿಗೆ ತಲುಪಿದೆ. ಪಂಡಿಗರಿಗೆ ಮತ್ತು ಗಬ್ಬೀಂದ್ರರಿಗೆ ಇದ್ದ ಸ್ನೇಹ ಸಂಬಂಧ ಕಡಿದು ಹೋಗಿದೆ ಎಂದು ಭಾವಿಸಿದ್ದ ನನಗೆ ಇದನ್ನು ಕೇಳಿ ಆಶ್ಚರ್ಯವಾಗಿದೆ.

ತೈಲಪ : ನೀವು ಹೇಳುತ್ತಿರುವುದು ನಿಜವೇ ಅವ್ವ?.....ಖೊಟ್ಟಿಗರು ನಿಧನರಾದರೆ?

ಜೊಂತಾ : ಹೌದು. ಹಾಗೆಂದು ಅವರು ಹೇಳಿದರು.

ತೈಲಪ : ಗಬ್ಬೀಂದ್ರರು ಮತ್ತು ಪಂಡಿಗರು ಇಬ್ಬರೂ ಸೇರಿ ಭಾರಿ ನಾಟಕ ನಡೆಸಿದಂತಿದೆ.

ಜೊಂತಾ : ಖೊಟ್ಟಿಗರು ವಿಶ್ವಾಸ ಪಾತ್ರನಂತೆ ಇದ್ದು ಅವರನ್ನು ನಂಬಿಸಿ, ರಕ್ಷಣೆಯ ನೆವದಲ್ಲಿ ಬನವಾಸೆಗೆ ಕರೆದುಕೊಂಡು ಹೋಗಿದ್ದವನು, ಕೊನೆಗೆ ತಂತ್ರ ಬಯಲಾಗಿ ಶಿಕ್ಷೆ ಎದುರಿಸಬೇಕಾಗುತ್ತದೆಂದು ಹೆದರಿ ಪಲಾಯನ ಮಾಡಿ ಹೋದವನು ಮತ್ತೆ ಪಂಡಿಗರಲ್ಲಿಗೆ ಬಂದಿದ್ದಾನೆಂದರೆ?.....

ತೈಲಪ : ಹೊಸ ಕುಟಿಲ ನೀತಿಯೊಂದು ಮೊಟ್ಟೆಯೊಡೆಯುತ್ತಿರಬಹುದು.

ಜೊಂತಾ : ಪಂಡಿಗ ಮತ್ತು ಜಕ್ಕಿ ಸುಂದರಿಯವರೊಡನೆ ಇನ್ನೂ ಗುಪ್ತ ವ್ಯವಹಾರ ಇಟ್ಟುಕೊಂಡಿರಬೇಕೆಂಬ ಅನುಮಾನ ಬರುತ್ತದೆ.

ತೈಲಪ : ಅದಕ್ಕೆಂದೇ ಇನ್ನೂ ಅವರಲ್ಲಿ ಪೂರ್ಣವಿಶ್ವಾಸ ನಂಬಿಕೆಗಳನ್ನು ಇಡಲು ಸಾಧ್ಯವಿಲ್ಲ ಎಂದದ್ದು.

ಜೊಂತಾ : ನಿಮ್ಮ ತಂದೆಯುವರಿಗೆ ಪಂಡಿಗರ ವಿಚಾರದಲ್ಲಿ ಅಂತಹ ಅನುಮಾನಗಳಿದ್ದಂತೆ ಅನಿಸುವುದಿಲ್ಲ.

ತೈಲಪ : ತಂದೆಯವರು ನುರಿತ ರಾಜಕಾರಣಿಗಳು. ಅನುಮಾನವಿದ್ದರೂ ಅದನ್ನು ತೋರಿಸಿಕೊಳ್ಳುವುದಿಲ್ಲ. ಬದಲಾಗಿ ಅವರಲ್ಲಿ ಪೂರ್ಣವಿಶ್ವಾಸವಿಟ್ಟಂತೆ ಕಾಣಿಸಿಕೊಳ್ಳುತ್ತಾರೆ.

ಜೊಂತಾ : ನಿಜ. ವಿಶ್ವಾಸವನ್ನು ತೋರಿ ರಹಸ್ಯಗಳನ್ನು ಹೊರಡಿಸುತ್ತಾರೆ.

ತೈಲಪ : ಪಂಡಿಗರು ನಮ್ಮ ಪರವೋ ಗಬ್ಬೀಂದ್ರರ ಪರವೋ ಹೇಳುವುದಕ್ಕೇ ಆಗುವುದಿಲ್ಲ.

ಜೊಂತಾದೇವಿ : ಪಂಡಿಗರೇ ಅವರ ಪರವಾಗಿ ಅಡ್ಡದಾರಿ ಹಿಡಿಸುತ್ತಿದ್ದರೂ ಇರಬಹುದೇ? ಕಿವಿಯಿಂದ ಕೇಳಿದ್ದನ್ನೆಲ್ಲ ನಂಬುವುದೇ ಕಷ್ಟವಾಗುತ್ತಿದೆ.

ತೈಲಪ : ನಾವು ಊಹಿಸಿದ್ದಕ್ಕಿಂತ ಪರಿಸ್ಥಿತಿ ಹೆಚ್ಚು ಗೋಜಲಾಗುತ್ತಿರುವಂತೆ ಕಾಣಿಸುತ್ತಿದೆ.

**ಬೊಂತಾ** : ಖೊಟ್ಟಿಗರ ನಿಧನದ ವಾರ್ತೆ ಎಷ್ಟು ಕಾಲ ತಾನೇ ಮರೆಯಾಗಿರಲು ಸಾಧ್ಯ? ಬಾಯಿಂದ ಬಾಯಿಗೆ ಸಾಗಿ ಲೋಕಕ್ಕೆಲ್ಲ ತಿಳಿಯುತ್ತವೆ.

**ತೈಲಪ** : ಲೋಕಕ್ಕೇ ತಿಳಿದ ಮೇಲೆ ಗಂಗಮಾರಸಿಂಹನಿಗೆ ತಲುಪುವುದು ಎಷ್ಟು ಹೊತ್ತು. ಬಯಸಿದ್ದು ಕಾಲಿಗೇ ತೊಡಗಿ ಎದುರಾದಂತಾಗುವುದು.

**ಬೊಂತಾ** : ಮಗು ಅದಕ್ಕೇ ಹೇಳಿದ್ದು ಪರಿಸ್ಥಿತಿ ತೀರಾ ಗಂಭೀರವಾಗುತ್ತಿದೆ. ಪಂಡಿಗರು ನಿನ್ನ ಅಪ್ಪಾಜಿಯನ್ನು ಕಂಡು ಮಾತನಾಡಿದ ಮೇಲೆಯೇ ವಿಷಯಗಳು ವಿವರವಾಗಿ ತಿಳಿಯುತ್ತವೆ.

**ತೈಲಪ** : ಹಾಗಾದರೆ ರಾಜಕೀಯ ತುರ್ತಿನ ಮಂತ್ರಾಲೋಚನೆ ನಡೆಯಲಿದೆ, ಎಂದಾಯಿತು.

**ಬೊಂತಾ** : ಬೇಗ ನಡೆ ಮಗು ಪಂಡಿಗರು ಈಗ ಬಂದಿದ್ದರೂ ಬಂದಿರಬಹುದು. ಇಲ್ಲವಾದಲ್ಲಿ ನಾಳೆಯಂತೂ ಖಂಡಿತಾ ಬರುತ್ತಾರೆಂದು ಜಕ್ಕಿಯವರು ಹೇಳಿದರು.

**ತೈಲಪ** : ನಮಗೆ ಅವರೊಟ್ಟಿಗೆ ಇರುವ ಅವಕಾಶವನ್ನು ಕೊಡುತ್ತಾರೋ ಇಲ್ಲವೋ.

**ಬೊಂತಾ** : ನಿನಗೆ ಅಂತಹ ಅನುಮಾನ ಬೇಡ. ನಿನ್ನಪ್ಪಾಜಿ ಯವರು ಇಂತಹ ವಿಚಾರಗಳಲ್ಲಿ ಆಸಕ್ತಿ ತೋರಿಸಬೇಕೆಂದೇ ಅಪೇಕ್ಷಿಸುತ್ತಾರೆ. ಈಗ ಅಪ್ಪಾಜಿಯವರ ಸ್ಥಿತಿ ನೋಡಿದರೆ ಭಯವಾಗುತ್ತದೆ. ರಾಜನೀತಿಯ ಪಾಠಗಳಲ್ಲಿ ನೀನು ಪ್ರಬುದ್ಧನಾಗಬೇಕು.

**ತೈಲಪ** : ಅವ್ವೆ. ನಿಮ್ಮೀರ್ವರ ಆಶೀರ್ವಾದ ಬಲ ನನ್ನ ಮೇಲೆ ಇದ್ದರೆ ಸಾಕು. ನಾನೇನನ್ನೂ ಸಾಧಿಸಬಲ್ಲೆ. ಅಪ್ಪಾಜಿಯವರ ಮನದ ನೋವು ನನ್ನನ್ನು ಕ್ಷಣಕ್ಷಣಕ್ಕೂ ಹಿಂಸಿಸುತ್ತಿದೆ. ಅವರಾಸೆಯನ್ನು ಅವರ ಜೀವನ ಕಾಲದಲ್ಲೇ ನಡೆಸಿಕೊಡುವಂತಾದರೆ ಸಾಕು.

**ಬೊಂತಾ** : ಆ ದಿನಗಳು ದೂರವಿಲ್ಲ ಕುಮಾರ. ಅದಕ್ಕೆ ಬೇಕಾದ ಹದ ಈಗ ಒದಗುತ್ತಿದೆ. ನಿರಾಶೆಗೆ ಎಡೆಯೇ ಇಲ್ಲ ಮಗು.

**ತೈಲಪ** : ಜಕ್ಕಲೆಯ ಅಂತರ್ಯವನ್ನು ತಿಳಿದು ನೋಡಬೇಕಿದೆ ಅವ್ವೆ. ಅವಕಾಶಕ್ಕಾಗಿ ಕಾಯುತ್ತಿದ್ದೇನೆ. ಈಗ ಮೊದಲಿಗೆ ಅಪ್ಪಾಜಿಯವರೊಂದಿಗೆ ಮಾತನಾಡಿ ತುರ್ತಾಗಿ ನಾವು ಅನುಸರಿಸಬೇಕಾದ್ದೇನೆಂದು ನಿರ್ಧರಿಸೋಣ.

– – ವಿರಾಮ – –

ಪಂಡಿಗ : ದೊರೆಗಳಿಗೆ ಪಂಡಿಗರ ಅಭಿವಂದನೆಗಳು.

ವಿಕ್ರಮಾದಿತ್ಯ : ಓಹ್! ಬನ್ನಿ, ಬನ್ನಿ ಪಂಡಿಗರೆ. ನಿಮ್ಮದೇ ನಿರೀಕ್ಷೆಯಲ್ಲಿದ್ದೆ. ನೀವು ಬರುವ ವಿಷಯ ನಿಮ್ಮ ಶ್ರೀಮತಿಯವರು ನನ್ನವಳಿಗೆ ಹೇಳಿದರಂತೆ.

ಪಂಡಿಗ : ಹೂಂ! ನಾನೇ ತಿಳಿಸಲು ಹೇಳಿದ್ದೆ. ತಮ್ಮ ಸಮಯ ಹೇಗಿರುತ್ತೋ ಏನೋ ಎಂದು ಮೊದಲೇ ನನ್ನ ಬರವಿನ ವಿಚಾರ ನಿಮಗೆ ತಿಳಿಸುವಂತೆ ಸೂಚಿಸಿದ್ದೆ. ನಿಮ್ಮ ಆರೋಗ್ಯ ಹೇಗಿದೆ ಪ್ರಭು?

ವಿಕ್ರಮಾದಿತ್ಯ : ನಮ್ಮ ಆರೋಗ್ಯದ ವಿಚಾರ ಬಿಡಿ. ಈ ಕಡೆ ಸಾಯಲೂ ಆಗದು ಬದುಕಲೂ ಆಗದು.

ಪಂಡಿಗರು : ಛೆ! ಛೆ! ಹೀಗೆಲ್ಲ ಮಾತಾಡಿ ನಮ್ಮನ್ನು ಬಹಳ ಅಧೀರರನ್ನಾಗಿ ಮಾಡುತ್ತಿದ್ದೀರಿ. ನೀವೇ ನಮ್ಮ ಆಸೆಗಳಿಗೆ, ನಿರೀಕ್ಷೆಗಳಿಗೆ ಕರ್ಣಧಾರ. ನೀವಿಲ್ಲದೆ ನಾವೆಲ್ಲ ಮುಳುಗಿದಂತೆಯೇ!

ವಿಕ್ರಮಾದಿತ್ಯ : ನನ್ನ ಮೇಲಿನ ಪ್ರೀತಿ, ವಿಶ್ವಾಸಗಳಿಗೆ ನಾನು ಕೃತಜ್ಞನಾಗಿದ್ದೇನೆ.... ಇರಲಿ. ಹೇಳಿ. ಏನಾದರೂ ಮುಖ್ಯ ವಿಚಾರಗಳು ಇವೆಯೇನು?

ಪಂಡಿಗ : ಬರಿ ಮುಖ್ಯವಷ್ಟೇ ಅಲ್ಲ ಬಹಳ ಗಂಭೀರವೂ ದುಃಖಪೂರಿತವೂ ಆದ ಸುದ್ದಿಯೊಂದಿದೆ.

ವಿಕ್ರಮಾದಿತ್ಯ : ಹಾಗಿದ್ದಲ್ಲಿ ತಡವೇಕೆ? ಈಗ ಬರುವುದಕ್ಕಿಂತ ಮುಂಚಿತವಾಗಿಯೇ ಬರಬಹುದಿತ್ತಲ್ಲ.

ಪಂಡಿಗ : ಈಗ ಬಂದಿರುವುದೇ ನನಗೆ ಹಿಂಸೆಯಾಗಿದೆ. ಆರೋಗ್ಯ ಸರಿಯಿಲ್ಲದ ನಿಮ್ಮನ್ನು ಇಂತಹ ಸುದ್ದಿಗಳಿಂದ ಇನ್ನಷ್ಟು ಬಳಲಿಸುವುದಕ್ಕೇ ಮನಸ್ಸಾಗುತ್ತಿಲ್ಲ.

ವಿಕ್ರಮಾದಿತ್ಯ : ರಾಜಕೀಯ ಜವಾಬ್ದಾರಿಗಳ ಮುಂದೆ ವೈಯುಕ್ತಿಕ ಸುಖ, ಸಂತೋಷಗಳು ಮುಖ್ಯವಾಗಬಾರದು. ಈ ದೇಹ ವಯಸ್ಸು, ಶ್ರಮಗಳಿಂದ, ಅನಾರೋಗ್ಯದಿಂದ ಬಳಲಿದೆ ನಿಜ. ಅದಕ್ಕಾಗಿ ಅನಿವಾರ್ಯತೆಗಳನ್ನು ಮುಂದೂಡುವುದು ಸರಿಯಲ್ಲ.

ಪಂಡಿಗ : ವಿಷಯ ಕಳವಳಕಾರಿ.

ವಿಕ್ರಮಾದಿತ್ಯ : ಆದರೂ ಪರವಾಗಿಲ್ಲ. ಎಲ್ಲವನ್ನೂ ಸಹಿಸಿಕೊಳ್ಳುವ ಉಕ್ಕಿನ ಮನಸ್ಸಿದೆ ನಮಗೆ.

ಪಂಡಿಗ : ಆದರೂ ಹೇಳುವುದಕ್ಕೆ ಹಿಂಜರಿಕೆಯಾಗಿದೆ ನಮಗೆ.

ವಿಕ್ರಮಾದಿತ್ಯ : ಹಿಂಜರಿಕೆಯಿಲ್ಲದೆ ಹೇಳಿ. ನಾನು ಅದನ್ನು ಹೇಗೆ ತೆಗೆದುಕೊಳ್ಳುತ್ತೇನೆ, ನೀವೇ ನೋಡುತ್ತಿರಿ.

ಪಂಡಿಗ : ರಾಷ್ಟ್ರಕೂಟ ಚಕ್ರವರ್ತಿ ಖೊಟ್ಟಿಗರು ನಿಧನರಾಗಿ ಪಕ್ಷ ಮೀರಿದೆಯೆಂಬ ಸುದ್ದಿ ಬಂದಿದೆ.

ವಿಕ್ರಮಾದಿತ್ಯ : ಇದನ್ನು ಹೇಳಲು ಹಿಂಜರಿಕೆಯೇ?

ಪಂಡಿಗ : ಈ ಸುದ್ದಿ ತಿಳಿಸಲು ಹಿಂಜರಿಕೆಯಲ್ಲ. ಸುದ್ದಿ ಮುಟ್ಟಿಸಿದ ವ್ಯಕ್ತಿಯಾರೆಂದು ತಿಳಿಸಲು ಸಂಕೋಚ. ಅಷ್ಟೆ.!

ವಿಕ್ರಮಾದಿತ್ಯ : ಹೇಳಿ ಯಾರೇ ಆದರೂ ಪರವಾಗಿಲ್ಲ.

ಪಂಡಿಗ : ಇದನ್ನು ನನಗೆ ಮುಟ್ಟಿಸಿದವರು ಗಬ್ಬೀಂದ್ರರು.

ವಿಕ್ರಮಾದಿತ್ಯ : ಇದು ತೀರಾ ಸಹಜವೇ! ನೀವು ಗಬ್ಬೀಂದ್ರರ ಬೆಂಬಲಿಗರೆಂಬುದು ಅವರ ನಂಬಿಕೆಯಲ್ಲವೇ!

ಪಂಡಿಗ : ಗಬ್ಬೀಂದ್ರರ ನಂಬಿಕೆ, ಭಾವನೆಗಳು ಏನೇ ಇರಲಿ. ಈ ಸಂದರ್ಭದಲ್ಲಿ ನಮ್ಮ ಮುಂದಿನ ನಡೆ ಏನೆಂಬುದನ್ನು ನಾವು ಆಳವಾಗಿ ಮತ್ತು ರಹಸ್ಯವಾಗಿ ಯೋಚಿಸಬೇಕಾದ ಅಗತ್ಯವೇ ಹೆಚ್ಚಾಗಿದೆ ಎನಿಸುತ್ತದೆ.

ವಿಕ್ರಮಾದಿತ್ಯ : ಅಂದರೆ ಗಬ್ಬೀಂದ್ರರು ನಮಗಿಂತ ಬೇರೆಯಾದ ಆಲೋಚನೆಯನ್ನು ಇಟ್ಟುಕೊಂಡಿರಬಹುದೆಂಬ ಸೂಚನೆ ದೊರೆತಿದೆಯೇನು?

ಪಂಡಿಗ : ಖಚಿತವಾದ ಮಾತುಗಳಲ್ಲಿ ಏನನ್ನೂ ಹೇಳಲಿಲ್ಲ. ಆದರೆ ಖೊಟ್ಟಿಗರ ಈ ಸಾವಿನಿಂದ ರಾಷ್ಟ್ರದ ಆಡಳಿತ ವ್ಯವಸ್ಥೆ ಹೇಗೆ ಎಂಬುದು ಅವರ ಪ್ರಶ್ನೆ.

ವಿಕ್ರಮಾದಿತ್ಯ : ಸದ್ಯಕ್ಕೆ ನೀವು ಮಾಡಬೇಕಾದ ಕೆಲಸವೊಂದಿದೆ. ಇಲ್ಲಿನ ಅಧಿಕಾರಿಗಳನ್ನು ಮತ್ತು ಪ್ರಮುಖರಾದವರನ್ನು ಕಂಡು ಮಾತನಾಡಿಸಿ ನೋಡಿ. ನಮ್ಮೊಂದಿಗೆ ಪರಮಾರ ಯುದ್ಧದಲ್ಲಿ ಬೆಂಬಲಿಸಿದವರಲ್ಲಿ ಕೆಲವರು ಪ್ರಸ್ತುತ ಇಲ್ಲಿಲ್ಲ. ಅವರೆಲ್ಲರನ್ನು ಆದಷ್ಟು ಬೇಗನೆ ರಾಜಧಾನಿಗೆ ಬರಮಾಡಿಕೊಳ್ಳಬೇಕು. ಅವರೊಂದಿಗೆ ಮತ್ತೊಮ್ಮೆ ಗುಪ್ತ ಸಮಾಲೋಚನೆ ನಡೆಸಲೇ ಬೇಕೆಂಬುದು ನನ್ನ ಭಾವನೆ. ನೀವೂ ಈ ವಿಚಾರದಲ್ಲಿ ಯೋಚಿಸಿ ನೋಡಿ, ನಿಮ್ಮ ಅಭಿಪ್ರಾಯ ತಿಳಿಸಿ.

ಪಂಡಿಗ : ನೀವು ಹೇಳುತ್ತಿರುವ ಇದರ ಬಗ್ಗೆ ಆಮೇಲೆ ವಿಚಾರ ಮಾಡಬಹುದು. ಈವರೆಗೆ ನಾವು ಮಾಡಿದ್ದೆಲ್ಲವೂ ಕರ್ಕರನ್ನು ಚಕ್ರವರ್ತಿಗಳನ್ನಾಗಿ ಮಾಡುವ ಉದ್ದೇಶದಿಂದಲೇ.

ವಿಕ್ರಮಾದಿತ್ಯ : ಅದಕ್ಕೆ ನಿಮ್ಮೆಲ್ಲರ ಬೆಂಬಲವು ಇದ್ದೇ ಇತ್ತಲ್ಲ. ನಿಮ್ಮನ್ನೂ ನಮ್ಮೊಂದಿಗೇ ಆತ್ಮೀಯವಾಗಿ ಒಳಗೊಂಡಿದ್ದೆವಲ್ಲ?

ಪಂಡಿಗ : ನಿಜ ಪ್ರಭುಗಳೇ. ಆದರೆ ಇನ್ನೂ ಕೆಲವರಿಗೆ ನನ್ನ ಮೇಲೆ ಅನುಮಾನ ಇದ್ದೇ ಇದೆ.

ವಿಕ್ರಮಾದಿತ್ಯ : ಅದು ನಿಮ್ಮ ಕಲ್ಪನೆ. ಬೇರೆ ಯಾರೋ ನಿಮ್ಮ ಬಗ್ಗೆ ಅನುಮಾನ ತಳೆಯಬಹುದೇನೋ. ನನಗೆ ಮಾತ್ರ ನಿಮ್ಮ ಮೇಲೆ ಭರವಸೆ ಇದೆ; ವಿಶ್ವಾಸವಿದೆ.

ಪಂಡಿಗ : ಕೆಲವರ ವಿಚಾರದಲ್ಲಿ ನಾನಿದನ್ನು ಒಪ್ಪಲಾರೆ.

ವಿಕ್ರಮಾದಿತ್ಯ : ಪಂಡಿಗರೇ ಆಗಿನ ಪರಿಸ್ಥಿತಿ. ಆ ಪರಿಸ್ಥಿತಿಯಲ್ಲಿ ಯೋಚಿಸುವ ಬಗೆಯೇ ಬೇರೆಯಾಗಿತ್ತು. ನಮಗೆ ಆ ಸಂದರ್ಭದಲ್ಲಿ ಪರಮಾರರನ್ನು ಸೋಲಿಸಬೇಕೆಂಬುದಷ್ಟೆ ಯೋಚನೆಯಾಗಿತ್ತು.

ಪಂಡಿಗ : ಅದಕ್ಕಾಗಿ ನನ್ನನ್ನು ಅನುಮಾನಿಸುವುದೇ?

ವಿಕ್ರಮಾದಿತ್ಯ : ನೀವು ಗಬ್ಬೀಂದ್ರರ ಆಪ್ತರೆಂದ ಮೇಲೆ ನಿಮ್ಮ ಬಗ್ಗೆ ಅದಕ್ಕಿಂತ ಬೇರೆಯಾಗಿ ಯೋಚಿಸಲು ಸಾಧ್ಯವಿಲ್ಲ. ನಿಮ್ಮಿಬ್ಬರ ನಡೆ-ನುಡಿಗಳು ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ಬಗೆಯ ಭಾವನೆಯನ್ನು ಹುಟ್ಟು ಹಾಕಿದರೆ ಆಶ್ಚರ್ಯ ಪಡಬೇಕಾದ್ದಿಲ್ಲ.

ಪಂಡಿಗ : ಅಂತಹ ಅಸಂಬದ್ಧ ಭಾವನೆಗಳಿಗೆ ಅವಕಾಶ ಕೊಡಬಾರದೆಂದೇ ಅಲ್ಲವೆ ಕರ್ಕರನ್ನು ಸಿಂಹಾಸನದ ಮೇಲೆ ಕೂಡಿಸಿದ್ದು.

ವಿಕ್ರಮಾದಿತ್ಯ : ಕೂಡಿಸಿದ ಮಾತ್ರಕ್ಕೆ ಅವರನ್ನೇ ಮುಂದುವರೆಸಬೇಕೆಂಬ ನಿಯಮವೇನೂ ಇರಲಾರದು. ಗಬ್ಬೀಂದ್ರರಿಗೆ ಈಗ ಒಳ್ಳೆ ಅವಕಾಶ ಸಿಕ್ಕಿದೆ.

ಪಂಡಿಗ : ಅದೇ ಈಗ ನನ್ನ ಚಿಂತೆ.

ವಿಕ್ರಮಾದಿತ್ಯ : ಚಿಂತೆ ಏನು ಬಂತು? ಖೊಟ್ಟಿಗರ ಮಗ ಕೃಷ್ಣನನ್ನು ತನ್ನ ಆಟದ ಗೊಂಬೆಯಾಗಿ ಮಾಡಿಕೊಂಡು ಅವನನ್ನು ಮುಂದೊಡ್ಡಿ ತಾನೇ ಸಿಂಹಾಸನದ ಸರ್ವಾಧಿಕಾರವನ್ನು ವಹಿಸಿಕೊಳ್ಳಬೇಕೆಂಬ ದುರಾಲೋಚನೆ ಬಂದಿರಬಹುದು.

ಪಂಡಿಗ : ಅದಕ್ಕೆ ನಮ್ಮೆಲ್ಲರ ಬೆಂಬಲಕ್ಕೆ ಗಬ್ಬೀಂದ್ರರು ಒತ್ತಾಯಿಸಬಹುದು.

ವಿಕ್ರಮಾದಿತ್ಯ : ನೀವು ಅವರ ಕಡೆಯವರೆಂದ ಮೇಲೆ ನಿಮ್ಮಿಂದ ಸಹಾಯ, ಸಹಕಾರ ಯಾಚಿಸುವುದರಲ್ಲಿ ತಪ್ಪೇನು?

ಪಂಡಿಗ : ಈ ರೀತಿ ಪ್ರಶ್ನಿಸುವುದರ ಹಿನ್ನೆಲೆಯ ಭಾವ ನನಗೆ ಅರ್ಥವಾಗುತ್ತಿಲ್ಲ ಪ್ರಭುಗಳೇ.

ವಿಕ್ರಮಾದಿತ್ಯ : ಲೋಕಾರೂಢಿಯ ದಾಟಿಯಲ್ಲಿ ಮಾತನಾಡಿದೆನೇ ಹೊರತಾಗಿ ಮಾತಿನ ಹಿನ್ನೆಲೆಯಲ್ಲಿ ಯಾವ ಭಾವವೂ ಇಲ್ಲ.

**ಪಂಡಿಗ** : ನಿಮ್ಮ ಊಹೆ, ತರ್ಕಗಳನ್ನು ಮೆಚ್ಚುತ್ತೇನೆ. ಆದರೆ ನನ್ನ ಸ್ವಂತ ನಿಲುವೇನೆಂಬುದನ್ನು ಯಾರಿಗೂ ಅರ್ಥಮಾಡಿಕೊಳ್ಳಬೇಕೆಂಬ ಮನಸ್ಸಿದ್ದಂತೆ ಇಲ್ಲ.

**ವಿಕ್ರಮಾದಿತ್ಯ** : ನಿಮ್ಮ ಆರೋಪ ಸರಿಯಲ್ಲ. ನಿಮ್ಮ ನಿಲುವು ನಿಮ್ಮ ಅಂತರಂಗಗಳನ್ನು ತಿಳಿದುಕೊಳ್ಳುವುದಕ್ಕೆ ಎಲ್ಲರಿಗೂ ಕುತೂಹಲ ಇದ್ದೇ ಇರುವುದಾದರೂ ಅನುಕೂಲ ಅವಕಾಶ ಒದಗಬೇಕಲ್ಲ!

**ಪಂಡಿಗ** : ನಮ್ಮ ನಡವಳಿಕೆ ಬಗ್ಗೆ ಜನ ಏನೆಲ್ಲ ಮಾತಾಡಿಕೊಳ್ಳುತ್ತಿದ್ದಾರೆ ಎಂಬುದು ನನಗೆ ಗೊತ್ತು. ಆದರೆ ಅವರ್‍ಯಾರಿಗೂ ನಾವೇನೆಂದು, ನಮ್ಮ ಮನಸ್ಸಿನಲ್ಲಿ ಏನಿದೆಯೆಂದು ಗೊತ್ತೇ ಇಲ್ಲ.

**ವಿಕ್ರಮಾದಿತ್ಯ** : ನಿಮ್ಮ ಆಪ್ತರೆನಿಸಿಕೊಂಡಿರುವ ಗಬ್ಬೀಂದ್ರರಿಗೂ?

**ಪಂಡಿಗ** : ಹೌದು ಗಬ್ಬೀಂದ್ರರಿಗೂ ನನ್ನ ನಿಜವಾದ ಒಲವು ಯಾರ ಕಡೆಗೆಂದು ತಿಳಿದೇ ಇಲ್ಲ.

**ವಿಕ್ರಮಾದಿತ್ಯ** : ಈಗ ನಿಮ್ಮನ್ನು ಸ್ಪಷ್ಟಗೊಳಿಸಿಕೊಳ್ಳಲು ಸಮಯ ಒದಗಿರಬೇಕಲ್ಲ?

**ಪಂಡಿಗ** : ಗಬ್ಬೀಂದ್ರರ ಕಾರ್ಯಾಚರಣೆಯ ಎಲ್ಲ ವಿವರಗಳು ನನಗೆ ತಿಳಿಯುವವರೆಗೆ ನಾನೇನನ್ನೂ ಜಾರಿಸುವುದಿಲ್ಲ. ಅದಕ್ಕೆಂದೇ ನಾನು ಅವರೊಂದಿಗೆ ಎಲ್ಲರೂ ಭಾವಿಸುವುದಕ್ಕಿಂತಲೂ ಹೆಚ್ಚು ಆತ್ಮೀಯನಾಗಿ ವರ್ತಿಸಬೇಕಾಗಿದೆ.

**ವಿಕ್ರಮಾದಿತ್ಯ** : ಗಬ್ಬೀಂದ್ರರನ್ನು ಹಾಗಾದರೆ ಇನ್ನಷ್ಟು ನಂಬಿಸುತ್ತಲೇ ಇರುತ್ತೀರಿ ಎಂದಾಯಿತು.

**ಪಂಡಿಗ** : ಬೇರೆ ದಾರಿ ಇಲ್ಲವಲ್ಲ...... ಪ್ರಭುಗಳು ಒಂದು ವಿಷಯದಲ್ಲಿ ಮಾತ್ರ ನನಗೆ ಮಾತುಕೊಡಬೇಕು.

**ವಿಕ್ರಮಾದಿತ್ಯ** : ಏನದು?

**ಪಂಡಿಗ** : ನಾನು ನಿಮ್ಮ ಪರವೆಂಬುದು ದೇವರಾಣೆಗೂ ಸತ್ಯ. ಈ ಮಾತನ್ನು ಸಂಪೂರ್ಣವಾಗಿ ನೀವು ನಂಬಬೇಕು. ನನ್ನನ್ನೆಂದಿಗೂ ಶಂಕಿಸುವುದಿಲ್ಲವೆಂದು ಮಾತು ಕೊಡಿ ಪ್ರಭು.

**ವಿಕ್ರಮಾದಿತ್ಯ** : ಪಂಡಿಗರೇ ನೀವೂ ನಾನು ಹೇಳುವುದರಲ್ಲಿ ನಂಬಿಕೆ ಇಡಿ. ಜನ ನಿಮ್ಮ ಬಗ್ಗೆ ಏನೇ ಹೇಳಲಿ. ನೀವು ನಮ್ಮ ಚಾಲುಕ್ಯ ವಂಶದವರೇ ಎಂಬುದು ನಿಮ್ಮ ಶ್ರೀಮತಿಯವರಿಂದ ತಿಳಿದ ಮೇಲೆ ನೀವೂ ನಮ್ಮವರೇ ಎಂಬ ಭಾವನೆ ನಮ್ಮದಾಗಿದೆ.

ಪಂಡಿಗ : ನಿಮ್ಮ ಈ ಭಾವನೆಯ ಸುಳುಹೂ ನಮಗೆ ದೊರೆಯಲಿಲ್ಲವಲ್ಲ.

ವಿಕ್ರಮಾದಿತ್ಯ : ನಿಜ. ನಾವು ಬೇಕೆಂದೇ ನಿಮ್ಮನ್ನು ಈ ಅರಿವಿನಿಂದ ವಂಚಿಸಿದ್ದೆವು. ಇದಕ್ಕೂ ನಮ್ಮ ಮೂಲ ಗುರಿ ಸಾಧನೆಗೂ ಸಂಬಂಧವಿದೆ. ನಮ್ಮ ಮೂಲ ಆಶಯ ಪ್ರಕಟವಾಗುವವರೆಗೆ ಮತ್ತೆಲ್ಲವನ್ನೂ ಮರೆಮಾಚುವುದೇ ಕ್ಷೇಮ.

ಪಂಡಿಗ : ಪ್ರಭುಗಳಿಗೆ ನಮ್ಮ ಮೇಲೆ ಪೂರ್ಣ ಭರವಸೆ ಇದೆ ಎಂದಾದರೆ ನಿಮ್ಮ ಆಂತರ್ಯವನ್ನು ನನ್ನೊಂದಿಗೆ ಹಂಚಿಕೊಳ್ಳುವುದಕ್ಕೆ ಅಭ್ಯಂತರವಿಲ್ಲವೆಂದು ಭಾವಿಸುತ್ತೇನೆ.

ವಿಕ್ರಮಾದಿತ್ಯ : ನಾನು ನಿಮಗೆ ತಿಳಿಸಿಲ್ಲವೆಂದರೆ, ಅದರ ಅರ್ಥ ನಿಮ್ಮ ಮೇಲೆ ನಂಬಿಕೆ ಇಲ್ಲವೆಂದಲ್ಲ. ನಾನು ಯಾವುದನ್ನೂ ಗಟ್ಟಿಗೊಳ್ಳುವವರೆಗೆ ಹೊರಗೆ ಹರಿಯ ಬಿಡುವುದಿಲ್ಲ. ನನ್ನ ಮಗನಿಗೂ ನನ್ನ ಮುಂದಿನ ಹೆಜ್ಜೆಗಳು ತಿಳಿಯುವುದಿಲ್ಲ. ನಾನು ಈ ರೀತಿ ನಡೆದುಕೊಳ್ಳುತ್ತಿರುವುದು ರಾಜಕೀಯ ಸಮಯಾ ಸಮಯ ಪ್ರಜ್ಞೆಯಿಂದಾಗಿ ಮಾತ್ರ.

ಪಂಡಿಗ : ತಮ್ಮ ಚಿತ್ತ. ಗಬ್ಬೀಂದ್ರರು ಚಕ್ರವರ್ತಿಗಳ ನಿಧನದ ವಾರ್ತೆಯನ್ನು ತಲುಪಿಸಿ. ಮುಂದಿನ ನಡೆ ಸೂಚಿಸಿ ನಮ್ಮ ಸಂಪೂರ್ಣ ಬೆಂಬಲವನ್ನು ಯಾಚಿಸಿದ್ದಾರೆ.

ವಿಕ್ರಮಾದಿತ್ಯ : ಇದಕ್ಕೆ ನೀವೇನೆಂದು ಉತ್ತರಿಸುತ್ತೀರಿ?

ಪಂಡಿಗ : ಯಾವುದನ್ನೂ ನಾನು ನಿರ್ಧರಿಸಿಲ್ಲ. ಅವರ ಆಲೋಚನೆಗಳ ಹಿಂದೆ ಸ್ವಾರ್ಥವಿದೆ. ನಾನು ಅವರಿಗೆ ಬೆಂಬಲ ನೀಡಿದರೆ ಈ ಸಿಂಹಾಸನಕ್ಕೇ ಸಂಚಕಾರ ಬರುತ್ತದೆ.

ವಿಕ್ರಮಾದಿತ್ಯ : ಹಾಗಾದರೆ ಈ ಪರಿಸ್ಥಿತಿಯನ್ನು ಪಲ್ಲಟಿಸುವುದು ಹೇಗೆ? ನೀವೇನು ಆಲೋಚಿಸುತ್ತಿದ್ದೀರಿ?

ಪಂಡಿಗ : ಈ ನಿಟ್ಟಿನಲ್ಲಿ ಗಬ್ಬೀಂದ್ರರು ಕಾರ್ಯಗತರಾಗದಂತೆ ಮೊದಲಿಗೆ ಏನಾದರೂ ಮಾಡಿ ತಡೆ ಹಾಕಬೇಕು. ಬನವಾಸಿಯ ಗಡಿ ದಾಟಿ ಬರದಂತೆ ಅವರನ್ನು ತಡೆಯಬೇಕು.

ವಿಕ್ರಮಾದಿತ್ಯ : ಅಂದರೆ ನಾವೇ ಧಾಳಿ ಮಾಡಬೇಕೆಂಬುದು ನಿಮ್ಮ ಅಭಿಪ್ರಾಯ?

ಪಂಡಿಗ : ಹೌದು.

ವಿಕ್ರಮಾದಿತ್ಯ : ಕರ್ಕದೇವರು ನಮ್ಮ ಕುಮಾರರೊಂದಿಗೆ ಮುಂದಿನ ಕಾರ್ಯಗಳ ಬಗ್ಗೆ ಚರ್ಚಿಸಿದರಂತೆ. ಬಹುಶಃ ನಿಮ್ಮೊಂದಿಗೂ ಮಾತನಾಡಬಹುದು.

ಅದೇ ಸಂದರ್ಭದಲ್ಲಿ ನಮ್ಮ ಕುಮಾರರೂ ಅಲ್ಲಿರುವುದು ಒಳ್ಳೆಯದೆನಿಸುತ್ತದೆ.

**ಪಂಡಿಗ** : ಹೌದು ಪ್ರಭು. ನಿಮ್ಮ ಕುಮಾರರ ರಾಜಕೀಯ ಪ್ರಜ್ಞೆ ಪ್ರಬುದ್ಧವಾದುದು. ಅಲ್ಲದೆ ಕರ್ಕ ಪ್ರಭುಗಳ ಅಳಿಯರಾಗಿ ರಾಜಕೀಯ ವಿಚಾರ ವಿನಿಮಯಗಳಲ್ಲೆಲ್ಲಾ ಇರುವುದು ಒಳ್ಳೆಯದು.

**ವಿಕ್ರಮಾದಿತ್ಯ** : ಹಾಗಾದರೆ ಈ ಕೂಡಲೇ ಕುಮಾರರನ್ನು ಕರೆಸುತ್ತೇನೆ. ಯಾರಲ್ಲಿ?....... (ಕೂಗುವನು)

**ಸೇವಕ** : ಪ್ರಭು ಅಪ್ಪಣೆ ಕೊಡಿಸಿ.

**ವಿಕ್ರಮಾದಿತ್ಯ** : ನಮ್ಮ ಕುಮಾರರನ್ನು ನಾವು ಬರಹೇಳಿದೆವೆಂದು ತಿಳಿಸಿ. ತಡಮಾಡದೆ ಈಗಲೇ ಬರಹೇಳಿ.

**ಸೇವಕ** : ಅಪ್ಪಣೆ

**ತೈಲಪ** : ಅಪ್ಪಾಜಿ. ತುರ್ತಾಗಿ ಬರಹೇಳಿದರಂತೆ?...... ಓ ಪಂಡಿಗ ಪೂಜ್ಯರೂ ಇಲ್ಲೇ ಇದ್ದಾರೆ.

**ಪಂಡಿಗ** : ಹೌದು ಕುಮಾರರೇ. ನಾನು ಬಂದು ಆಗಲೇ ಸುಮಾರು ವೇಳೆಯಾಯಿತು. ನಿಮ್ಮೊಂದಿಗೆ ಕೆಲವು ವಿಚಾರಗಳನ್ನು ಹಂಚಿಕೊಳ್ಳಬೇಕೆನಿಸಿ ಹೇಳಿ ಕಳುಹಿದೆವು.

**ತೈಲಪ** : ಹೇಳಿ ಅಪ್ಪಾಜಿ.

**ವಿಕ್ರಮಾದಿತ್ಯ** : ಏನಿಲ್ಲ ಮಗು. ನೀನು ಒಂದೆರಡು ದಿವಸಗಳ ಹಿಂದೆ ನಿಮ್ಮ ಮಾವನವರು ರಾಷ್ಟ್ರ ಭವಿಷ್ಯ ಕುರಿತು ಮಾತನಾಡಿದರೆಂದು ಹೇಳಿದ್ದೆ.

**ತೈಲಪ** : ಹೌದು.

**ವಿಕ್ರಮಾದಿತ್ಯ** : ಅದರ ಸಂಬಂಧವಾಗಿ ಪಂಡಿಗರು ನಿನ್ನ ಜೊತೆ ಮಾತನಾಡಬೇಕೆಂದಿದ್ದಾರೆ.

**ತೈಲಪ** : ನನ್ನ ಜೊತೆ ಮಾತನಾಡಿದರೆ ಪ್ರಯೋಜನವೇನಿದೆ ಅಪ್ಪಾಜಿ. ನಾನೇನೂ ನಿರ್ಣಯಗಳನ್ನು ತೆಗೆದುಕೊಳ್ಳಲಾರೆ. ಚಕ್ರವರ್ತಿಗಳ ಜೊತೆಗೇ ಮಾತನಾಡಿದರೆ ಒಳಿತಲ್ಲವೇ?

**ವಿಕ್ರಮಾದಿತ್ಯ** : ನೀನು ಹೇಳುತ್ತಿರುವುದು ನೂರಕ್ಕೆ ನೂರು ಸತ್ಯ. ಆದರೆ ಪಂಡಿಗರು ಈಗ ತಂದಿರುವ ಸುದ್ದಿ ಕೇಳಿದರೆ ನಾನು ಸೂಚಿಸುತ್ತಿರುವುದೇ ಸರಿಯೇನೋ ಎನಿಸಿದೆ.

ತೈಲಪ : ಆಯಿತು ಅಪ್ಪಾಜಿ. ನೀವು ಹಿರಿಯರು, ಜ್ಞಾನಿಗಳು ಏನನ್ನು ಆದೇಶಿಸಿದರೆ ಅದರಂತೆ ನಡೆದುಕೊಳ್ಳುತ್ತೇನೆ.

ಪಂಡಿಗ : ಕುಮಾರರೇ ಖೊಟ್ಟಿಗ ಪ್ರಭುಗಳು ನಿಧನರಾದ ಸುದ್ದಿ ನಿಮಗೆ ತಿಳಿದಿರಲಾರದು. ಅವರ ಸಾವಿನ ದುರ್ಲಾಭ ಪಡೆಯುವ ಹಂಚಿಕೆಯಲ್ಲಿ ಗಬ್ಬೀಂದ್ರರು ತೊಡಗಿದ್ದಾರೆ.

ತೈಲಪ : ಅದಕ್ಕೆ ನಾವೇನು ಮಾಡಬೇಕು?

ಪಂಡಿಗ : ಪರಮಾರರಿಗೆ ಪಾಠ ಕಲಿಸಿದಂತೆ ಗಬ್ಬೀಂದ್ರರಿಗೂ ಪಾಠ ಕಲಿಸಿ ಜೀವಮಾನದಲ್ಲಿ ಇನ್ನೆಂದೂ ತಲೆ ಎತ್ತದಂತೆ ಮಾಡಿ ಮೂಲೆಗೊತ್ತಬೇಕು.

ತೈಲಪ : ಹಾಗೇ ಆಗಲಿ.

ಪಂಡಿಗ : ಆದರೆ ಮಾಡಬೇಕಾದ ಆ ಕೆಲಸ ಅಷ್ಟು ಸರಳವಲ್ಲ.

ತೈಲಪ : ಏಕೆ? ಗಂಗ ಮಾರಸಿಂಹರ ಬಗ್ಗೆ ಯೋಚಿಸುತ್ತಿರುವಿರೇನು?

ಪಂಡಿಗ : ಗಬ್ಬೀಂದ್ರ, ಮಾರಸಿಂಹರು ಕೃಷ್ಣ, ಇಂದ್ರರ ಪರವಾಗಿ ಇರುವವರಾದರೂ ನಿಜವಾದ ಹೋರಾಟ ತಮ್ಮ ತಮ್ಮ ಸ್ವಂತಕ್ಕೆಂಬುದು ಶತಸ್ಸಿದ್ಧ. ಇಬ್ಬರನ್ನೂ ಮೂಲೆಗೊತ್ತಿ ತಾವು ಮೆರೆಯಬೇಕೆಂಬುದೇ ಅವರ ಉದ್ದೇಶ.

ತೈಲಪ : ಅದು ಹಾಗಾಗಬಾರದೆಂದೇ ಅಲ್ಲವೆ ಕರ್ಕದೇವರನ್ನು ಸಿಂಹಾಸನದ ಮೇಲೆ ಕೂರಿಸಿರುವುದು.

ಪಂಡಿಗ : ಈಗ ಅವರಿಬ್ಬರೂ ಕರ್ಕದೇವರನ್ನು ಒಂದಿಷ್ಟೂ ಸುಳುವು ಕೊಡದೆ ಮುಗಿಸಬೇಕೆಂಬ ಸಂಚಿನಲ್ಲಿದ್ದಾರೆ.

ವಿಕ್ರಮಾದಿತ್ಯ : ಆ ಸಂಚನ್ನು ಮುರಿಯುವುದು ಹೇಗೆ?

ಪಂಡಿಗ : ಪರಿಸ್ಥಿತಿ ಈಗಿರುವಂತೆ ಮುಂದುವರೆದರೆ ಕೆಲಸ ಕೆಡುತ್ತದೆ. ಅಲ್ಲದೆ ನಾವೆಲ್ಲರೂ ದೊಡ್ಡ ಅಪಾಯದೊಳಗೆ ಬೀಳುತ್ತೇವೆ.

ವಿಕ್ರಮಾದಿತ್ಯ : ನಿಮ್ಮ ಸಲಹೆಯೇನು ಹಾಗಾದರೆ?

ಪಂಡಿಗ : ಅದಕ್ಕೆಲ್ಲ ಒಂದೇ ದಾರಿ. ನಾವು ಅಂದರೆ ನಮ್ಮದೆಂಬುದನ್ನು ಕಳೆದುಕೊಂಡ ಚಾಲುಕ್ಯರು ಈ ಅವಕಾಶವನ್ನು ಉಪಯೋಗಿಸಿಕೊಳ್ಳುವ ಗಟ್ಟಿ ಮನಸ್ಸು ಮಾಡಬೇಕು.

ವಿಕ್ರಮಾದಿತ್ಯ : ನೀವು ಹೇಳುವುದು ನಮಗೆ ಸರಿಯಾಗಿ ಅರ್ಥವಾಗಲಿಲ್ಲ.

ಪಂಡಿಗ : ಪ್ರಭುಗಳಿಗೆ ಅರ್ಥವಾಗದ್ದು ಇವರಲ್ಲಿ ಏನೂ ಇಲ್ಲ. ನಮ್ಮ ತೈಲಪಕುಮಾರರನ್ನು ಭಾವಿ ಚಕ್ರವರ್ತಿಗಳನ್ನಾಗಿ ಕಾಣಬೇಕೆಂಬುದೇ ನಮ್ಮ ಆಸೆ.

ವಿಕ್ರಮಾದಿತ್ಯ : ಅದು ಹೇಗೆ ಸಾಧ್ಯ. ಈ ವರೆಗೆ ನಾವು ಪರಮಾರರನ್ನು ಹಿಂದಕ್ಕಟ್ಟಲು ಕರ್ಕದೇವರನ್ನು ಮುಂದಿಟ್ಟುಕೊಂಡು ಸಾಗಿದ್ದೇವೆ. ಜೊತೆಗೆ ಅವರು ನಮ್ಮ ಬೀಗರು ಬೇರೆ. ಹಾಗಿರುವಾಗ ಅವರ ಕೈ ಬಿಡುವುದು ಎಷ್ಟರ ಮಟ್ಟಿಗೆ ಸಮರ್ಥನೀಯ?

ಪಂಡಿಗ : ಸಂಬಂಧಗಳು ಬೇರೆ ರಾಷ್ಟ್ರದ ಸುರಕ್ಷತೆ ಬೇರೆ.

ವಿಕ್ರಮಾದಿತ್ಯ : ನಮ್ಮ ಸೊಸೆ ಜಕ್ಕಲೆ ಏನೆಂದು ಕೊಂಡಾಳು?

ಪಂಡಿಗ : ಕರ್ಕದೇವರೇ ಚಕ್ರವರ್ತಿಗಳಾಗಿ ಮುಂದುವರೆಯ ಬೇಕೆಂಬುದೇ ನಿಮ್ಮ ಆಶಯವೇನು?

ವಿಕ್ರಮಾದಿತ್ಯ : ನಮ್ಮದಿರಲಿ. ನಿಮಗೆ ಅವರು ಮುಂದುವರೆಯುವುದು ಸಮ್ಮತವಿಲ್ಲವೇ?

ಪಂಡಿಗ : ಸಮ್ಮತದ ಪ್ರಶ್ನೆಯಲ್ಲ. ನಾನು ಚಾಲುಕ್ಯರಕ್ತ ಹೊತ್ತವನು. ನನ್ನ ತಂದೆ ಕಂಬಳಿಗೆಯ ರಾಜಕನ್ಯೆ ಜಾಕಬ್ಬೆಯನ್ನು ಮದುವೆಯಾದದ್ದು ಏಕೆಂದು ತಿಳಿದಿರಿ?

ವಿಕ್ರಮಾದಿತ್ಯ : ಜಾಕಬ್ಬೆ ನಿಮ್ಮ ತಾಯಿಯಲ್ಲವೇ?

ಪಂಡಿಗ : ಹೌದು. ಅವರಿಗೆ ಅಣ್ಣತಮ್ಮಂದಿರಿಲ್ಲ. ಅದರಿಂದ ನಾನು ಕಂಬಳಿಗೆಯ ರಾಜ, ನನ್ನ ತಾತನಿಗೆ ದೌಹಿತ್ರ. ಆಸ್ತಿಗೆ ಹಕ್ಕುದಾರ.

ವಿಕ್ರಮಾದಿತ್ಯ : ದೌಹಿತ್ರದ ಹಕ್ಕು ನ್ಯಾಯಬದ್ಧವೇ.

ಪಂಡಿಗ : ಅದನ್ನೇ ನಾನು ಕರ್ಕರ ವಿಚಾರದಲ್ಲಿ ಯೋಚಿಸಿದ್ದು. ಅವರ ಮಗಳ ಮಗ ಕರ್ಕರಿಗೆ ದೌಹಿತ್ರನೇ ಅಲ್ಲವೇ?

ವಿಕ್ರಮಾದಿತ್ಯ : ನಿಮ್ಮ ತರ್ಕ. ಮುಂದಾಲೋಚನೆಗಳು ಸಾಧುವಾದುವೇ..... ಆದರೂ ತುಂಬಾ ಗಂಭೀರವಾಗಿ ಆಲೋಚಿಸಬೇಕಾಗಿದೆ..... ಪಂಡಿಗರೇ ನಾಳೆ ಮತ್ತೊಮ್ಮೆ ಸಭೆ ಸೇರಿ ಮುಂದೆ ಮಾಡಬೇಕಾದ್ದನ್ನು ನಿರ್ಧರಿಸೋಣ.

೦೦

# ದೃಶ್ಯ – ೬

ನಿರೂಪಕ (ಇತಿಹಾಸಕಾರ)

: ಪ್ರತಿಯೊಬ್ಬರ ಕಣ್ಣು, ಮನಸುಗಳು ರಾಷ್ಟ್ರಕೂಟ ಸಿಂಹಾಸನದ ಮೇಲೇ ಇದೆ. ಆದರೆ ಯಾರೊಬ್ಬರೂ ನೇರವಾಗಿ ಮುಖಾಮುಖಿಯಾಗಿ ಒಳಗಿನ ಆಸೆಗಳನ್ನು ಪ್ರಕಟ ಪಡಿಸುತ್ತಿಲ್ಲ. ಒಂದಂತೂ ನಿಜ. ರಾಜಕೀಯ ಚದುರಂಗದಾಟ ಸಾಕಷ್ಟು ಚುರುಕಾಗಿಯೇ ಸಾಗಿದೆ. ನೋಡಬೇಕು. ಯಾರ ಕಾಯಿಗಳು ಹಣ್ಣಾಗುತ್ತವೆಯೋ! ಏನೋ ಆಗಲೇ ಕರ್ಕದೇವರ ಮಂಥಣ ಸಾಲೆಯಲ್ಲಿ ಪಂಡಿಗರು ಕರ್ಕರ ಜೊತೆ ಗಂಭೀರ ವಿಚಾರ ನಡೆಸಿದ್ದಾರೆ. ವಿಚಾರದ ಪರಿಣಾಮ ಏನಾಗುವುದೋ!

– – ವಿರಾಮ – –

**ಕರ್ಕದೇವ** : ಬನ್ನಿ, ಬನ್ನಿ ಪಂಡಿಗರೇ. ನಿಮಗಾಗಿಯೇ ಎದುರು ನೋಡುತ್ತಿದ್ದೆ ಬನ್ನಿ. ಕುಳಿತುಕೊಳ್ಳಿ.

**ಪಂಡಿಗ** : ಮೌನ.

**ಕರ್ಕದೇವ** : ಇದೇಕೆ ಪಂಡಿಗರೇ ತಾವು ನಿಂತೇ ಇದ್ದೀರೇಕೆ?

**ಪಂಡಿಗ** : ನಾನು............ನಾನು............ನಿಮಗೆ ಹೇಳುವ ಗುಪ್ತ ಸುದ್ದಿಯ ಬಗ್ಗೆ ಚಿಂತಿತನಾಗಿದ್ದೇನೆ ಪ್ರಭು.

**ಕರ್ಕದೇವ** : ನಿಮ್ಮ ಮುಖಚರ್ಯೆ ನೋಡಿದಾಗಲೇ ವಿಷಯ ಗಂಭೀರವೆನಿಸಿತ್ತು. ಹೇಳಿ ವಿಷಯ ಏನೆಂದು?

**ಪಂಡಿಗ** : ಚಕ್ರವರ್ತಿಗಳೇ, ನಿಮಗೆ ಮೊದಲು ಮುಟ್ಟಬೇಕಿದ್ದ ಬೇಹು ನಮಗೆ ಮುಟ್ಟಿದೆ.

**ಕರ್ಕದೇವ** : ಅಂದರೆ?

ಪಂಡಿಗ : ಒಂದು ಸುದ್ದಿ ದುಃಖದ ಸುದ್ದಿ. ಮತ್ತೊಂದು ನಿಮಗೆ ತಲುಪಿಸಬೇಕಾದ್ದನ್ನು ನನಗೇಕೆ ತಲುಪಿಸಿದರು. ಎಂಬ ಆತಂಕ.

ಕರ್ಕದೇವ : ಅರಮನೆಗೆ ಜೇಹು ಮುಟ್ಟಿಲ್ಲವೆಂಬುದೇ ನಿಮ್ಮ ಭಾವನೆಯೇನು?

ಪಂಡಿಗ : ನಿಮ್ಮ ದೊಡ್ಡಪ್ಪನವರು, ದೈವಾಧೀನರಾದರಂತೆ.

ಕರ್ಕದೇವ : ಹೌದೇ?........ಯಾವಾಗ?

ಪಂಡಿಗ : ಆಗಲೇ ಒಂದು ಪಕ್ಷವಾಗಿದೆಯಂತೆ.

ಕರ್ಕದೇವ : ನಿಮಗೆ ಸುದ್ದಿ ಮುಟ್ಟಿಸಿದವರು ಯಾರು?

ಪಂಡಿಗ : ಬನವಾಸಿ ಆಡಳಿತಾಧಿಕಾರಿ ಗಜ್ಜೇಂದ್ರರು.

ಕರ್ಕದೇವ : ಓಹೋ ನಿಮ್ಮ ಶ್ರೀಮತಿಯವರ ಪರಮಾಪ್ತರು.

ಪಂಡಿಗ : ಯಾರಿಗೆ ಯಾರು ಆಪ್ತರು ಎಂಬುದಲ್ಲಿ ಮುಖ್ಯ. ಈ ಸುದ್ದಿ ಮೊದಲು ನಿಮಗೆ ತಲುಪಿದ್ದರೆ ಅದು ಕೌಟುಂಬಿಕ ಅಥವಾ ಸಾಂಸಾರಿಕ ಅರ್ಥವನ್ನು ನೀಡಬಹುದಾಗಿತ್ತು.

ಕರ್ಕದೇವ : ಈಗೇನರ್ಥ ಬರುತ್ತದೆ?

ಪಂಡಿಗ : ಈಗ ಅದಕ್ಕೆ ಸಾವಿನ ಸುದ್ದಿಯನ್ನು ತಿಳಿಸುವುದು ಧರ್ಮ ಎಂಬ ಅರ್ಥಕ್ಕೆ ಬದಲಾಗಿ ಪತ್ತಾರು ಅರ್ಥಗಳು ಅಂಟಿಕೊಳ್ಳುತ್ತಿವೆ.

ಕರ್ಕದೇವ : ಅವುಗಳಲ್ಲಿ ಕೆಲವನ್ನು ನೀವು ತಿಳಿಸಬಹುದಲ್ಲ

ಪಂಡಿಗ : ಈ ಸುದ್ದಿಯ ಹಿಂದೆ ರಾಜಕೀಯ ಪಿತೂರಿಯೊಂದು ಇದೆ ಎಂಬುದೇ ನನ್ನ ಮತ್ತು ನನ್ನ ಹೆಂಡತಿಯ ಭಾವನೆಯಾಗಿದೆ.

ಕರ್ಕದೇವ : ರಾಜಕೀಯ ಪಿತೂರಿ? ಅಂದರೆ?

ಪಂಡಿಗ : ಅದೇ ಸಿಂಹಾಸನವನ್ನು ಸನ್ನಿಧಾನದಿಂದ ಕಸಿದುಕೊಂಡು,.............

ಕರ್ಕದೇವ : ತಾನೇ ರಾಷ್ಟ್ರಕೂಟ ಚಕ್ರವರ್ತಿಯಾಗುವ ಆಸೆ ಹೊಂದಿರುವರೇನು?

ಪಂಡಿಗ : ಚಕ್ರವರ್ತಿ ಎಂಬ ಹೆಸರಿನ ಮೋಜಿಗೆ ಬೀಳದಿದ್ದರೂ ಚಕ್ರವರ್ತಿಯ ಸರ್ವಶಕ್ತಿಗಳನ್ನೂ ತನ್ನದಾಗಿಸಿಕೊಳ್ಳಬೇಕೆಂಬ ಆಕಾಂಕ್ಷೆಯು ಬೆನ್ನೇರುವುದಂತೂ ಸ್ಪಷ್ಟವಾಗಿದೆ.

ಕರ್ಕದೇವ : ಅಂದರೆ ನಮ್ಮ ಮೇಲೆ ಅಧಿಕಾರ ನಡೆಸುವ ಉದ್ದೇಶವೇನು?

ಪಂಡಿಗ : ಖೊಟ್ಟಿಗ ಪ್ರಭುಗಳ ಮಕ್ಕಳಾದ ಕೃಷ್ಣರನ್ನು ಸಿಂಹಾಸನದ ಮೇಲೆ ಕೂರಿಸಿ ಅಧಿಕಾರವನ್ನು ತಮ್ಮ ಕೈವಶವಾಗಿಸಿಕೊಳ್ಳುವ ಸಂಚಿನಲ್ಲಿದ್ದಾರೆ.

ಕರ್ಕದೇವ : ಅದಕ್ಕೆ ನಿಮ್ಮ ನೆರವನ್ನು ಕೋರಿರಬೇಕಲ್ಲವೆ?

ಪಂಡಿಗ : ನೆರವನ್ನು ನೇರವಾಗಿ ಕೇಳಿಲ್ಲ. ಆದರೆ ಅವರನ್ನು ಕೇಳಿದರೆ ನಮ್ಮ ನೆರವು ಸಿಗುವುದೆಂಬ ಭರವಸೆ ತಳೆದಂತಿದ್ದಾರೆ.

ಕರ್ಕದೇವ : ಹಾಗೆನಿಸಿದಾಗ ನೀವೇಕೆ ನಮಗೆ ಸೂಚನೆ ನೀಡಲಿಲ್ಲ.

ಪಂಡಿಗ : ಪರಮಾರರ ವಿರುದ್ಧ ಯುದ್ಧ ನಡೆದಾಗಲೇ ನಮಗೆ ಅವರ ಆಲೋಚನೆಗಳ ಸುಳುಹು ಹತ್ತಿತು. ಆದರೆ ಅದೆಲ್ಲವನ್ನೂ ತಲೆಗೆ ಹಚ್ಚಿಕೊಳ್ಳುವ ಸಮಯ ಅದಾಗಿರಲಿಲ್ಲ.

ಕರ್ಕದೇವ : ಗಬ್ಬೀಂದ್ರರ ಮುಂದಿನ ಯೋಜನೆ ಏನೆಂದು ತಿಳಿಯಿತೇ?

ಪಂಡಿಗ : ಅದೇ. ತಾನು ಸೈನ್ಯ ಸಮೇತ ಬಂದು ಸೇರುತ್ತಾರಂತೆ. ನಾನೂ ಸೈನ್ಯದೊಂದಿಗೆ ಸಿದ್ಧವಾಗಿರಬೇಕೆಂದು ಸೂಚಿಸಿದ್ದಾರೆ.

ಕರ್ಕದೇವ : ಹಾಗಾದರೆ ಗಬ್ಬಿಂದ್ರರು ನಿಮ್ಮನ್ನು ಪೂರ್ತಿಯಾಗಿ ನಂಬಿದ್ದಾರೆ?

ಪಂಡಿಗ : ಹೂಂ! ಅದರಿಂದ ನಮಗೇ ಒಳಿತಾಗುತ್ತದೆ ಎಂಬುದು ನನ್ನ ಭಾವನೆ.

ಕರ್ಕದೇವ : ಯಾವಾಗ ನಮ್ಮ ಮೇಲೇರಿ ಬರುತ್ತಾರೆಯೆಂಬುದನ್ನು ತಿಳಿಸಿದ್ದಾರೇನು?

ಪಂಡಿಗ : ಇಲ್ಲ. ಅದಕ್ಕೆ ಮರು ಬೇಹು ಬರಬೇಕಿದೆ. ಸ್ವಲ್ಪ ಸಮಯ ಬೇಕಾಗುತ್ತದೆ.

ಕರ್ಕದೇವ : ಹಾಗಿದ್ದ ಮೇಲೆ ನಾವುಗಳು ಮುಂದೆ ಹೇಗೆ ಮಾಡಬೆಕು. ಏನು ಮಾಡಬೇಕು ಎಂಬುದರ ಬಗ್ಗೆ ಒಂದು ಸಭೆ ಮಾಡುವುದು ಒಳ್ಳೆಯದಲ್ಲವೇ?

ಪಂಡಿಗ : ಅಂತೆಯೇ ಆಗಲಿ.

ಕರ್ಕ : ವಿಕ್ರಮಾದಿತ್ಯರನ್ನು ಕಂಡು ವಿಚಾರ ಮಾಡಿ ಯಾರು ಯಾರನ್ನು ಈ ಸಭೆಗೆ ಆಹ್ವಾನಿಸಬೇಕೆಂಬುದನ್ನು ತೀರ್ಮಾನ ಮಾಡಿ. ಮುಂದಿನ ವ್ಯವಸ್ಥೆಯನ್ನು ನೀವೇ ನೋಡಿಕೊಳ್ಳಿ.

ಪಂಡಿಗ : ನಾನಿನ್ನು ಹೊರಡುತ್ತೇನೆ........... ಸನ್ನಿಧಾನದ ವಿಶ್ರಾಂತಿಗೆ ತೊಂದರೆಯಾಯಿತೇನೋ!

ಕರ್ಕದೇವ : ವಿಶ್ರಾಂತಿಗಿದು ಸಮಯವೇ ಅಲ್ಲ ಪಂಡಿಗರೇ..........ಹೋಗಿ ಬನ್ನಿ.

(ಸ್ವಗತ) ಒಳ್ಳೆಯು ಸಂಕಟಕ್ಕಿಟ್ಟುಕೊಂಡಿದೆ. ಪರಿಸ್ಥಿತಿಗಳು ತಲೆ ಕೆಳಗಾಗುತ್ತಿವೆ. ಒಂದು ಕಡೆ ಕೃಷ್ಣ, ಮತ್ತೊಂದು ಕಡೆ ಇಂದ್ರ! ಈ ಪೀಕಲಾಟದಲ್ಲಿ ನನ್ನ ಸಿಂಹಾಸನದ ಪಾಡೇನು? ಪರಮಾರರನ್ನು ಎದುರಿಸಿದ ನನ್ನ ಆಪ್ತಮಂದಿ ಇವರೆಲ್ಲರ ಕನಸುಗಳನ್ನು ಮುರಿಯಬಲ್ಲ ಸಶಕ್ತರೇ....... ಆದರೆ.........ಆದರೆ.........ನಾನು ಕುಳಿತ ಈ ಸಿಂಹಾಸನಕ್ಕೆ ವಾರಸುದಾರನೆಲ್ಲಿ................. ವಾರಸುದಾರನೆಲ್ಲಿ.....................

ಚಟ್ಟಯ್ಯ : ವಿಷಯ ಅಂಥಾದ್ದೇನೂ ಇಲ್ಲ. ಆದರೆ ತರತರದ ವದಂತಿಗಳು ಕೇಳಿ ಬರುತ್ತಿವೆ. ಅವು ಎಷ್ಟು ಸತ್ಯವೋ ತಿಳಿದಿಲ್ಲ.

ಕರ್ಕದೇವ : ಎಂತಹ ವದಂತಿ?

ಚಟ್ಟಯ್ಯ : ಅದೇ ನಮ್ಮ ಹಿಂದಿನ ಸನ್ನಿಧಾನದ ವಿಚಾರವಾಗಿ.

ಕರ್ಕದೇವ : ನೀವು ಕೇಳಿರಬಹುದಾದ ವದಂತಿ ನಮ್ಮ ದೊಡ್ಡಪ್ಪನವರ ನಿಧನ ವಿಚಾರ ತಾನೇ?

ಚಟ್ಟಯ್ಯ : ಹಾಂ! ಹೆಚ್ಚು ಕಡಿಮೆ ಅದೇ!

ಕರ್ಕದೇವ : ಪಸಾಯಿತರಾದ ನಿಮ್ಮಲ್ಲಿ ಮುಚ್ಚುಮರೆಯೇನು? ನೀವು ಕೇಳಿದ ಸುದ್ದಿ ನಿಜವಾದದ್ದೇ. ಹಿರಿಯರ ನಿಧನದ ವಾರ್ತೆಯಿಂದ ಅಧೀರರಾಗಿದ್ದೇವೆ.

ಚಟ್ಟಯ್ಯ : ಹಿರಿಯರನ್ನು ಅಗಲಿದ ದುಃಖ ಸಹಜವೇ...... ಆದರೆ....... ಆದರೆ..... (ಪಿಸುದನಿಯಲ್ಲಿ) ಈ ಸನ್ನಿಧಾನಕ್ಕೆ ನಿರಾತಂಕವೆನಿಸಿರಬೇಕಲ್ಲವೇ?......... ಹೋಗಲಿ ಬಿಡಿ. ಈ ಸಿಂಹಾಸನ ನಿಮಗೆ ಇನ್ನು ಗಟ್ಟಿಯಾಯಿತೆಂದೇ ತಿಳಿಯಿರಿ.

ಕರ್ಕದೇವ : ಗಟ್ಟಿಯಾಗುವುದೆಲ್ಲಿ ಬಂತು ಚಟ್ಟಯ್ಯನವರೇ. ಬನವಾಸಿಯ ಆಡಳಿತಾಧಿಕಾರಿ ನಮ್ಮ ಸೋದರ ಸಂಬಂಧಿ ಕೃಷ್ಣನನ್ನು ಮುಂದೆ ಮಾಡಿಕೊಂಡು ಸಿಂಹಾಸನಕ್ಕೆ ಸ್ಪರ್ಧಿಸಿದ್ದಾನೆ.

ಚಟ್ಟಯ್ಯ : ಅದಕ್ಕೆ ಸನ್ನಿಧಾನವೇಕೆ ಹೆದರಬೇಕು? ಆಡಳಿತಾಧಿಕಾರಿಯಾದರೂ ಅರಮನೆಯ ಸೇವಕನೇ. ಅವನನ್ನು ಆಸ್ಥಾನದಿಂದ ಉಚ್ಚಾಟನೆ ಮಾಡಿದರಾಯಿತು.

ಕರ್ಕದೇವ : ಉಚ್ಚಾಟನೆಯನ್ನೇನೋ ಕ್ಷಣ ಮಾತ್ರದಲ್ಲಿ ಮಾಡಬಹುದು. ಆದರೆ ಆ ಸ್ಥಾನ ತುಂಬಲು ಸಮರ್ಥನೂ, ಅರ್ಹನೂ, ನಂಬಿಕಸ್ಥನೂ ಆದ ವ್ಯಕ್ತಿ ದೊರೆಯಬೇಕಲ್ಲ.

ಚಟ್ಟಯ್ಯ : ಸನ್ನಿಧಾನದ ಮನಸ್ಸಿಗೆ ಬಂದರೆ ನಮ್ಮನ್ನು ಆ ಸ್ಥಾನಕ್ಕೆ ಪರೀಕ್ಷಿಸಬಹುದು.

ಕರ್ಕದೇವ : ನಿಮ್ಮ ಅರ್ಹತೆ ಸಾಮರ್ಥ್ಯಗಳ ಬಗ್ಗೆ ನಮಗೆ ಅನುಮಾನವಿಲ್ಲವಾದರೂ ನಾವೊಬ್ಬರೇ ನಿರ್ಧಾರವನ್ನು ತೆಗೆದುಕೊಳ್ಳುವುದು ಸಮಂಜಸವಲ್ಲ.

ಚಟ್ಟಯ್ಯ : ಸನ್ನಿಧಾನಕ್ಕೆ ಆ ಅಧಿಕಾರವಿಲ್ಲವೇ?

ಕರ್ಕದೇವ : ಅಧಿಕಾರ ಇಲ್ಲವೆಂದಲ್ಲ. ನಾಲ್ಕು ಮಂದಿ ಪ್ರಮುಖರ ಸಭೆಯಲ್ಲಿ ತೀರ್ಮಾನವಾದರೆ ಒಳಿತಲ್ಲವೇ?

ಚಟ್ಟಯ್ಯ : ಸನ್ನಿಧಾನದ ಆಜ್ಞಾಧಾರಕ ನಾನು. ನೀವೆಂದಂತೆಯೇ ಆಗಲಿ.......ಆದರೆ ಇವೆಲ್ಲಕ್ಕೂ ಮೊದಲು ತಾವು ತಮ್ಮ ವಿಚಾರವಾಗಿ ಆಲೋಚಿಸಬೇಕು.

ಕರ್ಕ : ಏಕೆ?

ಚಟ್ಟಯ್ಯ : (ಮೌನ)

ಕರ್ಕದೇವ : ಚಟ್ಟಯ್ಯನವರೆ, ಸಿಂಹಾಸನದ ಭವಿಷ್ಯದ ಬಗ್ಗೆ ನಾವು ಯೋಚಿಸಿಲ್ಲವೆಂಬುದು ತಪ್ಪು. ಹಲವು ಬಾರಿ ಯೋಚಿಸಿದ್ದೇವೆ. ಆದರೆ ಅದನ್ನು ಹೊರಗೆ ಹೇಳಿಕೊಳ್ಳುವುದಕ್ಕೆ ನಮ್ಮಿಂದ ಸಾಧ್ಯವಾಗಿಲ್ಲ. ಅದಕ್ಕೇ ಸುಮ್ಮನಿದ್ದೇವೆ.

ಚಟ್ಟಯ್ಯ : ನಿಮ್ಮ ಶ್ರೇಯೋಭಿಲಾಷಿಯಾದ ನನಗೆ ಕಾಳಜಿ ಇರುವುದು ಇರಬೇಕಾದ್ದು ಸಹಜ ತಾನೇ?

ಕರ್ಕದೇವ : ಸರಿ. ಆ ವಿಷಯವೆಲ್ಲ ಈಗ ಬೇಡ. ಸ್ವಲ್ಪ ಸಮಯ ಕೊಡಿ.

ಚಟ್ಟಯ್ಯ : ಅಪ್ಪಣೆ.

– – ಗಬ್ಬೀಂದ್ರರ ಪ್ರವೇಶ – –

ಗಬ್ಬೀಂದ್ರ : ಕಂಬಳಿಗೆಯ ಸಾಮಂತ ಪಂಡಿಗರು ಕ್ಷಮಿಸಬೇಕು. ತಮ್ಮ ವಿಶ್ರಾಂತಿಗೆ ಭಂಗ ತರುತ್ತಿರುವುದಕ್ಕೆ ಕ್ಷಮಿಸಬೇಕು. ಇಲ್ಲಿನ ವ್ಯವಸ್ಥೆಗಳೂ ಸರಿಯಾಗಿವೆಯೇ? ತಮಗೆ ಏನಾದರೂ ತೊಂದರೆಯಾಯಿತೇ ಎಂದು ವಿಚಾರಿಸಲು ಬಂದೆ.

ಪಂಡಿಗ : ಬರಬೇಕು. ಬರಬೇಕು. ಗಬ್ಬೀಂದ್ರರಂತಹ ಸಮರ್ಥ ಆಡಳಿತಾಧಿಕಾರಿಗಳು ಇರುವಾಗ ವ್ಯವಸ್ಥೆಗೆ, ಏರ್ಪಾಡುಗಳಿಗೆ ಕೊರತೆ ಇರುವ ಸಾಧ್ಯತೆಯೇ ಇಲ್ಲ.

ಗಬ್ಬೀಂದ್ರ : ಏನೋ ತಾವು ದೊಡ್ಡವರು. ಆದರೂ ಸಣ್ಣವರಾದ ನಾವು ಕಳುಹಿಸಿದ ಬೇಹಿಗೆ ಇಷ್ಟೊಂದು ಮನ್ನಣೆ ಕೊಟ್ಟು ಸೈನ್ಯದೊಂದಿಗೆ ಬಂದಿರಲ್ಲ. ಅದೇ ನಮ್ಮ ಪುಣ್ಯ.

ಪಂಡಿಗ : ನಮ್ಮ ಮೇಲೆ ಇರಿಸಿಕೊಂಡಿರುವ ಭರವಸೆಗಾಗಿ ನಾವು ಕೃತಜ್ಞರಾಗಿದ್ದೇವೆ. ಹೇಳಿ ಈಗ ನಿಮ್ಮ ವಿಚಾರಗಳು ಯಾವ ದಿಕ್ಕಿನಲ್ಲಿವೆ?

ಗಬ್ಬೀಂದ್ರ : ಸಾಮಂತರೇ ನೀವು ನಾವು ಒಂದಾದ ಮೇಲೆ ನಮ್ಮ ನಡುವೆ ವಿಚಾರ ವಿನಿಮಯ ಆಗಬೇಕಾದ್ದು ಸಹಜ, ಸ್ವಾಭಾವಿಕ.

ಪಂಡಿಗ : ಈ ಪೀಠಿಕೆಗಳಿಂದ ಕಾಲಹರಣ ಬೇಡ. ನೇರವಾಗಿ ವಿಷಯಕ್ಕೆ ಬನ್ನಿ.

ಗಬ್ಬೀಂದ್ರ : ನೋಡಿ ಸಾಮಂತರೇ. ರಾಷ್ಟ್ರಕೂಟ ಸಿಂಹಾಸನದ ಅಧಿಕಾರ ಯಾರಿಗೆ ಬರಬೇಕೆಂಬುದು ನಮ್ಮ ಮೊದಲ ಪ್ರಶ್ನೆ.

ಪಂಡಿಗ : ಆ ಪ್ರಶ್ನೆಗೆ ಉತ್ತರವನ್ನೂ ನೀವೇ ಹೇಳಿದರೆ ಒಳಿತು ಎಂದು ಭಾವಿಸುವೆ.

ಗಬ್ಬೀಂದ್ರ : ನ್ಯಾಯಯುತವಾಗಿ ಸಿಂಹಾಸನ ದೈವಾಧೀನರಾದ ಖೊಟ್ಟಿಗ ಚಕ್ರವರ್ತಿಗಳ ಮಕ್ಕಳಿಗೇ ಲಭಿಸಬೇಕೆಂಬುದು ನನ್ನ ಅಭಿಪ್ರಾಯ ಮತ್ತು ಆಕಾಂಕ್ಷೆ . ಇದು ನಿಮಗೂ ತಿಳಿದಿದೆ. ಅಲ್ಲದೆ ನಿಮ್ಮ ಮತ್ತು ನಿಮ್ಮ ಪತ್ನಿಯವರ ಅಪೇಕ್ಷೆಯೂ ಇದೇ ಎಂಬುದು ನನ್ನ ನಂಬಿಕೆ.

ಪಂಡಿಗ : ನಿಮ್ಮ ನಂಬಿಕೆ ನಿಜವೆಂದು ಹೇಗೆ ಭಾವಿಸುತ್ತೀರಿ?

ಗಬ್ಬೀಂದ್ರ : ನನ್ನ ನಂಬಿಕೆ ನಿಜವಲ್ಲದಿದ್ದಲ್ಲಿ ನಾನು ಕಳುಹಿಸಿದ ಬೇಹಿಗೆ ಮನ್ನಣೆಕೊಟ್ಟು ಸೈನ್ಯ ಸಮೇತವಾಗಿ ಇಲ್ಲಿಗೇಕೆ ಬರುತ್ತಿದ್ದಿರಿ? ನೀವು ಬಂದಿರುವುದೇ ನನ್ನ ನಂಬಿಕೆಗೆ ಸಾಕ್ಷಿಯಲ್ಲವೇ?

ಪಂಡಿಗ : ಅದು ಸರಿ. ಈಗ ನಿಮ್ಮ ಮೊದಲ ಹೆಜ್ಜೆ ಏನು?

ಗಬ್ಬೀಂದ್ರ : ರಾಜಕುಮಾರ ಕೃಷ್ಣರನ್ನು ಸಿಂಹಾಸನದ ಮೇಲೆ ಕೂರಿಸಬೇಕು. ಆದಷ್ಟೂ ಘರ್ಷಣೆಯಿಲ್ಲದೆ ಸುಸೂತ್ರವಾಗಿ ಕೆಲಸ ನಡೆಯುವಂತೆ ಮಾಡಬೇಕು.

ಪಂಡಿಗ : ಹೌದೌದು. ಘರ್ಷಣೆ ಇಲ್ಲದೆ ಕೆಲಸ ಸಾಧಿತವಾಗುವುದು ರಾಷ್ಟ್ರದ ದೃಷ್ಟಿಯಿಂದ ಒಳ್ಳೆಯದೇ ಅನ್ನಿ.

ಗಬ್ಬೀಂದ್ರ : ಘರ್ಷಣೆ ಇಲ್ಲದೆ ಕಾರ್ಯ ನಡೆಸಬೇಕಾದ ವಿಧಾನ ಯಾವುದೆಂದು ತಾವು ಅಪ್ಪಣೆ ಕೊಡಿಸಬೇಕು.

ಪಂಡಿಗ : ಇಷ್ಟೆಲ್ಲ ರಾಜನೀತಿ ನೈಪುಣ್ಯವನ್ನು ಗಳಿಸಿರುವ ನಿಮಗೇ ಇದೆಲ್ಲ ಚೆನ್ನಾಗಿ ತಿಳಿದಿರಬೇಕಲ್ಲ!

ಗಬ್ಬೀಂದ್ರ : ನಡೆದದ್ದು ನಡೆಯುವುದು ನ್ಯಾಯಸಮ್ಮತ-ವಾಗಿರಬೇಕಲ್ಲವೇ? ನಿಜವಾಗಿಯೂ ಸಿಂಹಾಸನ ನ್ಯಾಯಬದ್ಧ ಉತ್ತರಾಧಿಕಾರಿಗೇ ಸಲ್ಲಬೇಕಲ್ಲವೇ?

ಪಂಡಿಗ : ನಾನು ನಿಮಗೆ ಮೊದಲೇ ಹೇಳಿದೆ. ರಾಜಕೀಯ ಚದುರಂಗದಾಟದಲ್ಲಿ ನ್ಯಾಯಯುತ ವ್ಯಕ್ತಿ ಇಂತಹವರೇ ಎಂದು ತೀರ್ಮಾನಿಸುವುದಾದರೂ ಹೇಗೆ, ಅದು ಬಲು ಕಷ್ಟದ ಕೆಲಸವೆಂಬುದು ನಿಮಗೇ ಗೊತ್ತು.

ಗಬ್ಬೀಂದ್ರ : ಖೊಟ್ಟಿಗ ಚಕ್ರವರ್ತಿಗಳ ಸಿಂಹಾಸನ ಅವರ ಮಕ್ಕಳಿಗೆ ಸಲ್ಲುವುದೇ ನ್ಯಾಯವಲ್ಲವೇ?

ಪಂಡಿಗ : ನಿಮ್ಮ ತರ್ಕ ಸರಿ. ಖೊಟ್ಟಿಗರ ಸಿಂಹಾಸನ ಅವರ ಮಕ್ಕಳಿಗೆ ಅಂದರೆ ಕೃಷ್ಣರಿಗೆ ಸಲ್ಲುವುದು ನ್ಯಾಯವೇ? ಆದರೆ ಖೊಟ್ಟಿಗರು ಸಿಂಹಾಸನವೇರಿದ್ದು ನ್ಯಾಯ ಸಮ್ಮತವಾಗಿರಬೇಕಲ್ಲ?

ಗಜ್ಜೇಂದ್ರ : ಅದೇಕೆ ಹೀಗೆ ಕೇಳುತ್ತೀರಿ? ಅವರು ನ್ಯಾಯ ಸಮ್ಮತವಾಗಿಯೇ ಸಿಂಹಾಸನವೇರಿದ್ದು.

ಪಂಡಿಗ : ಕನ್ನರದೇವ ಕೃಷ್ಣರ ಮಕ್ಕಳಲ್ಲಿ ಎಲ್ಲರಿಗಿಂತ ಹಿರಿಯರಾದವರು ಗೋವಿಂದರು. ತಂದೆಯು ಬದುಕಿದ್ದಾಗಲೇ ಈ ಮಕ್ಕಳು ತೀರಿಕೊಂಡದ್ದು ವಾಸ್ತವ ದುರಂತ. ಆದರೆ ಸಿಂಹಾಸನ ನ್ಯಾಯಬದ್ಧವಾಗಿ ಯಾರಿಗೆ ಹೋಗಬೇಕು?

ಗಜ್ಜೇಂದ್ರ : ಅವರ ಮಕ್ಕಳಿಗೇ!

ಪಂಡಿಗ : ಸರಿಯಾಗಿ ಗ್ರಹಿಸಿದಿರಿ. ಆದರೆ ಆದದ್ದು ಏನು?

ಗಜ್ಜೇಂದ್ರ : ನನಗೆ ಅಷ್ಟಾಗಿ ವಿವರಗಳು ಗೊತ್ತಿಲ್ಲ. ದಯಮಾಡಿ ನನಗೆ ತಿಳಿಸಿ. ಏನಾಯಿತು ಎಂದು.

ಪಂಡಿಗ : ಗೋವಿಂದರ ಮಗ ಇಂದ್ರ ತಾಯಿಯ ಜೊತೆ ಅಜ್ಜನ ಮನೆಗೆ ಹೋದ. ಇಂದ್ರನ ತಾಯಿ ಸೋದರ ಗಂಗ ಮಾರಸಿಂಹನ ನೆರವನ್ನು ಕೋರಿದಳು...............ಯಾಕೆಂಬುದು ಗೊತ್ತೇ?

ಗಜ್ಜೇಂದ್ರ : ಸೇರಿದ ಮನೆಯಲ್ಲಿ ದಾಯಾದಿ ಕಲಹ ಪ್ರಾರಂಭವಾದರೆ ಹೆಣ್ಣು ಸಹಾಯ. ಸಹಕಾರ ಯಾಚಿಸಿ ತವರಿಗೆ ತಾನೇ ಹೋಗಬೇಕು? ಅವರು ಮಾಡಿದ್ದು ಲೋಕ ಸಹಜವಾದ್ದೆ!

ಪಂಡಿಗ : ಆಕೆ ಅಲ್ಲಿಗೆ ಹೋಗುವುದರ ಅರ್ಥ ರಾಷ್ಟ್ರಕೂಟ ಸಾಮ್ರಾಜ್ಯವನ್ನು ಗಂಗ ಸಾಮ್ರಾಜ್ಯದೊಂದಿಗೆ ವಿಲೀನ ಮಾಡಬೇಕು ಎಂಬುದಷ್ಟೇ ಅಲ್ಲವೇ?

ಪಂಡಿಗ : ಅದು ಕೇವಲ ಊಹೆ ಮಾತ್ರ.........ನೋಡಿ ಗಜ್ಜೇಂದ್ರರೆ. ನಾನು ಚಾಲುಕ್ಯ ವಂಶದವನು. ನನಗೆ ಕದಂಬಳಿಗೆ ಬಂದುದು ಹೇಗೆಂದು ಬಲ್ಲಿರಾ? ಯೋಚಿಸಿ. ನನ್ನ ತಾಯಿಯಿಂದ ನಿನಗೆ ಈ ಕದಂಬಳಿಗೆ ಬಂತು. [illegible] ತಾಯಿ ಕದಂಬಳಿಗೆಯ ರಾಜಕುಮಾರಿ. ಆಕೆಗೆ ಸೋದರ[illegible]. ನಾನು ನನ್ನ ತಾಯಿಯ ತಂದೆಗೆ ದೌಹಿತ್ರ, ಆದ್ದರಿಂದ ಕದಂಬಳಿಗೆ ನನ್ನ ತಾಯಿಯಿಂದಾಗಿ ನನಗೆ ದಕ್ಕಿದ್ದು ನ್ಯಾಯಸಮ್ಮತ.

ಗಜ್ಜೇಂದ್ರ : ಇವನ್ನು ವಿವರಿಸುತ್ತಿರುವುದು ನೀವು ಕರ್ಕ ದೇವರನ್ನು ದೃಷ್ಟಿಯಲ್ಲಿಟ್ಟುಕೊಂಡು ಅಲ್ಲವೇ?

ಪಂಡಿಗ : ಅನುಮಾನ ಸಂದೇಹಗಳಿಗೆ ಆಸ್ಪದವಿಲ್ಲದಂತೆ ನೀವು ಊಹಿಸಿದ್ದು ಸತ್ಯಸ್ಯ ಸತ್ಯ.

ಗಬ್ಬೀಂದ್ರ : ಕರ್ಕದೇವರಿಗೆ ಗಂಡು ಸಂತಾನವಿಲ್ಲದ ಕಾರಣ ಅವರ ಮಗಳ ಮಗನಿಗೆ ಸಿಂಹಾಸನದ ಹಕ್ಕು ಬರುತ್ತದೆ ಎಂಬುದು ನಿಮ್ಮ ಯೋಚನೆಯೇನು?

ಪಂಡಿಗ : ನಾನು ಆ ದೃಷ್ಟಿಯಿಂದ ಹೇಳುತ್ತಿಲ್ಲ. ನೀವು ನ್ಯಾಯಸಮ್ಮತ ಹಕ್ಕು, ಅಧಿಕಾರ ಎಂದೆಲ್ಲ ಹೇಳುತ್ತಿದ್ದಿರಲ್ಲ. ಅದಕ್ಕೆ ಹೇಳಿದೆ, ಅಷ್ಟೆ.

ಗಬ್ಬೀಂದ್ರ : ಬೇರೆ ಹಕ್ಕುದಾರರಿರುವಾಗ ಆ ದೂರದ ಯೋಚನೆಯನ್ನು ನಾವೇಕೆ ಮಾಡಬೇಕು?

ಪಂಡಿಗ : ದೂರ ಹತ್ತಿರ ಎಂಬುದಲ್ಲ ಮುಖ್ಯ. ಕರ್ಕದೇವರು ಇನ್ನೂ ಬದುಕಿರುವಾಗ ನಾವೇಕೆ ತಲೆ ಕೆಡಿಸಿಕೊಳ್ಳಬೇಕು.

ಗಬ್ಬೀಂದ್ರ : ಅದನ್ನೇ ನಾವು ಗಂಭೀರವಾಗಿ ಆಲೋಚಿಸಬೇಕಾಗಿದೆ. ಈ ಸಂದರ್ಭದಲ್ಲಿ ಉಚ್ಚಾಟನೆಯೊಂದೇ ನಮಗೆ ಕಾಣಿಸುತ್ತಿರುವ ದಾರಿ.

ಪಂಡಿಗ : ಅಂದರೆ ಕರ್ಕದೇವರನ್ನು.................?

ಗಬ್ಬೀಂದ್ರ : ನಮಗೆ ಖೊಟ್ಟಿಗರ ಮಕ್ಕಳಾದ ಕೃಷ್ಣರಿಗೆ ಸಿಂಹಾಸನವನ್ನು ಕೊಡಿಸಿ ಕೊಡುವುದು ಮುಖ್ಯ. ಅದು ಹೇಗಾದರೂ ಸಾಧ್ಯವಾಗಲೇಬೇಕು.

ಪಂಡಿಗ : ನ್ಯಾಯಸಮ್ಮತದ ಬಗ್ಗೆ ನಾವು ಮಾತಾಡುತ್ತಲೇ ಇಂದ್ರನನ್ನು ಮರೆಯುವುದು ಸರಿ ಎನಿಸುತ್ತದೆಯಾ?

ಗಬ್ಬೀಂದ್ರ : ನಾವು ಆ ಇಂದ್ರನ ಬಗ್ಗೆ ಯೋಚಿಸುವುದು ಬೇಡ. ಇಂದ್ರನನ್ನು ನಾವು ಗಣನೆಗೆ ತೆಗೆದುಕೊಳ್ಳುವುದೆಂದರೆ ಗಂಗರಿಗೆ ಕರೆದು ಸಿಂಹಾಸನವನ್ನು, ರಾಜ್ಯವನ್ನು ನಾವಾಗಿಯೇ ಅವರ ಮಡಿಲಿಗೆ ಹಾಕಿದಂತೆ!

ಪಂಡಿಗ : ನಿಮ್ಮ ಯೋಚನೆಗೆ ತರ್ಕದ ಸೆಲೆಗಟ್ಟಿದೆ. ಆದರೆ ನೀವು ಅಂದುಕೊಂಡಂತೆ ಕೃಷ್ಣರಿಗೆ ಸಿಂಹಾಸನ ಕೊಡಿಸಬೇಕಾದರೆ ಕರ್ಕರಿಗಿಂತ ನಮ್ಮ ಬಲಾಬಲಗಳು ಹೆಚ್ಚಿನದಾಗಿರಬೇಕಲ್ಲವೇ?

ಗಬ್ಬೀಂದ್ರ : ನೀವು ನಮ್ಮ ಕಡೆ ಇದ್ದ ಮೇಲೆ ಅವರ ಬಲ ಬೆಂಬಲಗಳು ಎಷ್ಟು ತಾನೇ ಇರಬಲ್ಲವು?

ಪಂಡಿಗ : ನಿಮ್ಮ ಲೆಕ್ಕಾಚಾರ ತಪ್ಪಿದೆ ಎನಿಸುತ್ತದೆ. ಪರಮಾರರನ್ನು ಎದುರಿಸುವಾಗ ದೇವಗಿರಿಯಾದವರು, ಚಾಲುಕ್ಯ ವಿಕ್ರಮಾದಿತ್ಯರು, ಕದಂಬಳಿಗೆಯ ನಾವು, ಎಲ್ಲರೂ ಒಟ್ಟಾಗಿದ್ದೆವು.

ಗಬ್ಬೀಂದ್ರ : ಆಗಿನ ಪರಿಸ್ಥಿತಿ ಬೇರೆ. ಒಮ್ಮೆ ಒಟ್ಟಾಗಿದ್ದರೆ ಕಡೆತನಕವೂ ಹಾಗೇ ಇರಬೇಕೆಂದೇನೂ ನಿಯಮವಿಲ್ಲ.

ಪಂಡಿಗ : ನಿಯುಮವಲ್ಲ ನಿಜ. ಆದರೆ ವೈಯಕ್ತಿಕವಾದ ಕೆಲವು ತಾತ್ವಿಕ ನಂಬಿಕೆಗಳು ಇರುತ್ತವಲ್ಲ. ಯಾವ ನೆಪದೊಂದಿಗೆ ಅವರೊಂದಿಗಿನ ಒಗ್ಗಟ್ಟನ್ನು ಮುರಿದುಕೊಂಡು ನಾನು ಬರಲಿ? ಅಲ್ಲದೆ ನಾನೊಬ್ಬನು ಹೊರಗೆ ಬಂದ ಮಾತ್ರಕ್ಕೆ ಕರ್ಕರ ಬಲ ಕುಗ್ಗಿತೆಂದು ಭಾಪಿಸಬೇಕಿಲ್ಲ.

ಗಬ್ಬೀಂದ್ರ : ನೀವೊಬ್ಬರೇ ಬನ್ನಿರೆಂದು ನಾನು ಬಲವಂತಪಡಿಸುತ್ತಿಲ್ಲ. ನೀವೂ ಚಾಲುಕ್ಯವಂಶದವರೆಂದಿರಿ. ನಿಮ್ಮ ಪ್ರಭಾವದಿಂದ ವಿಕ್ರಮಾದಿತ್ಯರನ್ನೂ ಇತ್ತ ಸೆಳೆದುಕೊಳ್ಳಬಹುದಲ್ಲ.

ಪಂಡಿಗ : ಖಂಡಿತವಾಗಿ ಇದು ಸಾಧ್ಯವಾದರೆ ನಮ್ಮಾಸೆ ಫಲಿಸುವುದರಲ್ಲಿ ಸಂದೇಹವೇ ಇಲ್ಲ.

ಗಬ್ಬೀಂದ್ರ : ಅಂದ ಮೇಲೆ ಪ್ರಯತ್ನಕ್ಕೆ ಮುಂದುವರೆಯಬಹುದಲ್ಲ. ವಿಕ್ರಮಾದಿತ್ಯರನ್ನು ಒಲಿಸಿಕೊಳ್ಳುವುದು ನಿಮಗೆಷ್ಟರ ಕೆಲಸ?

ಪಂಡಿಗ : ನೀವು ಊಹಿಸಿದಷ್ಟು ಸುಲಭವಲ್ಲ. ಅವರವರ ಸ್ವಾರ್ಥ, ಲಾಭಗಳ ಕಾಳಜಿ ಇರುತ್ತದೆ. ಆಮಿಷಗಳ ಬಲೆಗೆ ಬೀಳದ ಮನುಷ್ಯ ಇಲ್ಲ. ಅದೂ ರಾಜಕೀಯದಂತಹ ವಿಷಯಗಳಲ್ಲಿ ಇವೆಲ್ಲ ಬಹಳ ಸಹಜ. ಅನಿವಾರ್ಯ.

ಪಂಡಿಗ : ಅದು ಸಾಮಾನ್ಯ ಲೋಭ. ಖಡುಕರ ವಿಚಾರವಾಗಿ ಮಾತಾಡುವಾಗ ವಿಕ್ರಮಾದಿತ್ಯರನ್ನು ಸೆಳೆದುಕೊಳ್ಳುವುದು ಬಹು ಪ್ರಯಾಸದ ಕೆಲಸ.

ಗಬ್ಬೀಂದ್ರ : ನೀವು ಪ್ರಯತ್ನಿಸಿ. ಒಂದು ವೇಳೆ ನೀವೂ ನಿಮ್ಮ ಲಾಭದ ಬಗ್ಗೆ ಯೋಚಿಸಿದರೆ ನಾನೇನೂ ಅನ್ಯಥಾ ಭಾವಿಸುವುದಿಲ್ಲ. ನಾವಿಬ್ಬರೂ ಈ ಪ್ರಯತ್ನದ ಫಲಿತದ ಲಾಭವನ್ನು ಸಮನಾಗಿ ಹಂಚಿಕೊಳ್ಳೋಣ.

ಪಂಡಿಗ : ಓ ಹಾಗಾದರೆ ನೀವು ನಿಮ್ಮ ನಿಮ್ಮ ಸ್ವಂತ ಲಾಭಕ್ಕಾಗಿ ಕೃಷ್ಣರ ಪಕ್ಷ ಹಿಡಿದಿದ್ದೀರಿ?

ಗಬ್ಬೀಂದ್ರ : ಹೌದೆಂದು ಒಪ್ಪಿಕೊಂಡರೆ ಇದನ್ನು ನನ್ನ ಸಣ್ಣತನವೆಂದು ತಿಳಿಯಬೇಕಾದ್ದಿಲ್ಲ. ಕೃಷ್ಣರ ವಿಚಾರ ಗೊತ್ತೇ ಇದೆ.

ಪಂಡಿಗ : ಏನದು?

ಗಬ್ಬೀಂದ್ರ : ರಾಜಕುಮಾರ ಕೃಷ್ಣರು ಮೊದಲಿನಿಂದಲೂ ರಾಜಕೀಯದ ಬಗ್ಗೆ ಹೆಚ್ಚಾಗಿ ತಲೆ ಕೆಡಿಸಿಕೊಂಡಿಲ್ಲ. ಅವರಾಗಿ ಮುಂದುವರೆಯುವ ಪ್ರವೃತ್ತಿ ಅವರಲ್ಲಿಲ್ಲ.

ಪಂಡಿಗ : ಬನವಾಸಿಯ ಆಡಳಿತಾಧಿಕಾರಿಯಾಗಿ ನಿಮ್ಮ ರಕ್ಷಣೆ ಮಾರ್ಗದರ್ಶನಗಳಲ್ಲಿ ಇದ್ದರೆ ಸಾಕು ಎಂದು ಹೇಳಿದರೇನು.

ಗಬ್ಬೀಂದ್ರ : ಹೌದು ಹಾಗೇ ಹೇಳಿದರು., ನಿಮಗೆ ಅದು ಹೇಗೆ ಗೊತ್ತು?

ಪಂಡಿಗ : ಹೀಗೆಯೇ. ಕೆಲವು ವಿಚಾರಗಳು ನಾವು ನಿರೀಕ್ಷಿಸದಿದ್ದರೂ ನಮ್ಮ ಕಿವಿ ಮುಟ್ಟುತ್ತವೆ. ಒಟ್ಟಾರೆ ನಿಮ್ಮ ಅಭಿಪ್ರಾಯವಾದರೂ ಏನು?

ಗಬ್ಬೀಂದ್ರ : ಅದೇ! ಆ ಇಂದ್ರನ ಕೈಗೆ ರಾಜ್ಯಕೊಟ್ಟು ಗಂಗರ ಬಾಯಿ ತುತ್ತಾಗಿಸುವುದಕ್ಕಿಂತ ರಾಜಕುಮಾರ ಕೃಷ್ಣರ ಹೆಸರಿಗೆ ಸಿಂಹಾಸನವಿದ್ದು ನಮ್ಮೆಲ್ಲರ ಕೈಯಲ್ಲಿರಲಿ ಎಂಬುದು ನನ್ನ ಆಲೋಚನೆ.

ಪಂಡಿಗ : ಹೂಂ. ನಿಮ್ಮ ಗುರಿ ಈಗ ಸ್ಪಷ್ಟವಾಯಿತು. ರಾಷ್ಟ್ರಕೂಟ ಸಿಂಹಾಸನದ ಸುಭದ್ರತೆಯನ್ನೇ ಕುರಿತು ಚಿಂತಿಸುತ್ತಿರುವಿರಿ ಎಂದಾಯಿತು.

ಗಬ್ಬೀಂದ್ರ : ಹೌದು. ಆ ಚಿಂತೆಯೇ ಮುಖ್ಯ. ನಮ್ಮ ಸ್ವಾರ್ಥವೆಂಬುದು ಆಂಶಿಕ.

ಪಂಡಿಗ : ಹಾಗಾದರೆ ನಾನು ನಿಮ್ಮ ಸೈನ್ಯದ ಚಮೂಪತಿಗಳೆಲ್ಲರೊಂದಿಗೆ ಮಾತುಕತೆ ನಡೆಸುತ್ತೇನೆ. ನಂತರ ಆಲೋಚನೆ ಮಾಡಿ ಮುಂದಿನ ಹೆಜ್ಜೆ ಹಾಕೋಣ.

ಗಬ್ಬೀಂದ್ರ : ಆಯಿತು. ಹಾಗೇ ಆಗಲಿ. ಹೇಗಿದ್ದರೂ ಇನ್ನೆರಡು ದಿನದಲ್ಲಿ ಕಾಮನ ಹುಣ್ಣಿಮೆ ಇದೆ. ಹಬ್ಬದ ಆನಂದವನ್ನು ಅನುಭವಿಸಲಿ.

ಪಂಡಿತ : ನನ್ನ ಆಲೋಚನೆಯೂ ಅದೇ. ಇಂತಹ ಪರ್ವ ಪರಿಭ್ರಮದ ದಿನಗಳಲ್ಲಿ ಅವರೆಲ್ಲರ ಮನಸ್ಸನ್ನು ಯುದ್ಧದ ಕಡೆಗೆ ಪ್ರಚೋದಿಸಿ ಅವರ ಆನಂದಕ್ಕೆ ಭಂಗ ತರುವುದು ಸಮನಲ್ಲ.

ಗಬ್ಬೀಂದ್ರ : ಮನಸ್ಸಂತೋಷದಿಂದ ಕೂಡಿದ ಅವರೂ ಯುದ್ಧವನ್ನು ಉತ್ಸಾಹದಿಂದಲೇ ಸ್ವಾಗತಿಸುತ್ತಾರೆ. ಹಾಗೆಯೇ ಸಾಮಂತಾದಿಗಳಿಗೆ ವಿಶೇಷ ವ್ಯವಸ್ಥೆಯನ್ನೂ ಮಾಡಿದ್ದೇನೆ.

ಪಂಡಿಗ : ಗಬ್ಬೀಂದ್ರರದು ಬಹಳ ದೂರದೃಷ್ಟಿ.

ಗಬ್ಬೀಂದ್ರ : ನನ್ನ ದೂರದೃಷ್ಟಿ ಇದ್ದರೇನಾದೀತು. ನೀವೆಲ್ಲ ಸಹಕರಿಸಿದರೆ ತಾನೇ?

ಪಂಡಿಗ : ನಾನು ಅದೇ ಪ್ರಯತ್ನಕ್ಕೆ ಹೊರಡುತ್ತೇನೆ. ಚಾಲುಕ್ಯ ವಿಕ್ರಮಾದಿತ್ಯರ ಬಲವನ್ನು ಗಳಿಸಿಕೊಳ್ಳಲು ತುರ್ತಾಗಿ ಹೋಗಬೇಕು.

ಗಬ್ಬೀಂದ್ರ : ಅಂದರೆ ನೀವು ಹಬ್ಬದ ಆಚರಣೆಗೆ ಉಳಿಯುವುದಿಲ್ಲವೇ?

ಪಂಡಿಗ : 'ಶುಭಸ್ಯ ಶೀಘ್ರಂ' ಎಂಬುದನ್ನು ಮರೆತಿರಾ? ಒಳ್ಳೆಯ ಕೆಲಸಗಳಿಗೆ ತಡ ಮಾಡಬಾರದು. ಅವರ ಸ್ನೇಹದ ಸಾಧ್ಯತೆಗಳನ್ನು ಮಾರುವೇಷದಲ್ಲಿ ಹೋಗಿ ತಿಳಿದು ಬರುತ್ತೇನೆ.

ಗಬ್ಬೀಂದ್ರ : ಪಂಡಿಗರೇ ಈ ಸಂದರ್ಭದಲ್ಲಿ ನನ್ನದೊಂದು ಅನುಮಾನವಿದೆ.

ಪಂಡಿಗ : ಏನದು?

ಗಬ್ಬೀಂದ್ರ : ಖೊಟ್ಟಿಗರ ಪರವಾಗಿದ್ದ ಚಟ್ಟಯ್ಯನವರನ್ನು ನಿಮ್ಮೊಂದಿಗೆ ಏಕೆ ಕರೆ ತಂದಿರಿ ಎಂಬುದು ಅರ್ಥವಾಗಿಲ್ಲ.

ಪಂಡಿಗ : ಅದೆಲ್ಲವನ್ನೂ ನಿಧಾನವಾಗಿ ತಿಳಿಸುತ್ತೇನೆ. ಅದಿರಲಿ ಈಗ ಚಟ್ಟಯ್ಯನವರು ಎಲ್ಲಿದ್ದಾರೆ?

ಗಬ್ಬೀಂದ್ರ : ಆಸಂದವಸದ ಪಕ್ಕದ ಬಿಡಾರದಲ್ಲಿದ್ದಾರೆ. ಹೇಳಿ ಕಳಿಸಬೇಕೇನು?

ಪಂಡಿಗ : ಬೇಡ ನಾನೇ ಹೋಗಿ ಮಾತನಾಡಿಸುತ್ತೇನೆ. ಅವರಿಗೆ ವಿವರಿಸಿ ತಿಳಿಸಬೇಕಾದ ಕೆಲವು ವಿಷಯಗಳಿವೆ...........ನಾನು ಹೋಗಿ ಬರುತ್ತೇನೆ. ಬರುವವರೆಗೆ ಜಾಗರೂಕತೆಯಿಂದ ಇರಿ.

ಗಬ್ಬೀಂದ್ರ : ತಾವು ಅಪ್ಪಣೆ ಕೊಡಿಸಿದಂತೆ ಎಚ್ಚರಿಕೆ ವಹಿಸುತ್ತೇನೆ. ತಾವು ತಮ್ಮ ಪ್ರಯತ್ನದಲ್ಲಿ ಜಯಶಾಲಿಯಾಗಿ ಬರಬೇಕೆಂಬುದೇ ನಮ್ಮಾಸೆ.

******

**...................ದೃಶ್ಯಾಂತರ.............ಸಂಗೀತ........................**

ಚಟ್ಟಯ್ಯ : (ಎದ್ದು) ಓ ಪಂಡಿಗರು. ಇದೇನು ಹೇಳಿ ಕಳಿಸದೆ ತಾವೇ ಬಂದು ಬಿಟ್ಟಿರಿ.

ಪಂಡಿಗ : ಹೌದು ಅನಿರೀಕ್ಷಿತವಾಗಿ ಬರಬೇಕಾದ ಸಂದರ್ಭ ಬಂತು. ಬಂದು ಬಿಟ್ಟೆ..............ನಿಮಗೊಂದು ವಿಷಯ ತಿಳಿಸಬೇಕೆಂದು ಬಂದೆ.

ಚಟ್ಟಯ್ಯ : ಹೇಳಿ ಪಂಡಿಗರೇ ವಿಷಯ ಏನೆಂದು ತಿಳಿಸಿ.

ಪಂಡಿಗ : ನೋಡಿ ಚಟ್ಟಯ್ಯನವರೇ. ನಾವು ಕೆಲ ದಿನಗಳು ಇಲ್ಲಿಂದ ಮರೆಯಾಗಿ ಉಳಿಯಬೇಕಿದೆ. ನಮ್ಮ ವಿಚಾರವಾಗಿ ಯಾರಿಗೂ ಏನೂ ತಿಳಿಯಬಾರದು.

ಚಟ್ಟಯ್ಯ : ದಿಢೀರನೆ ಈ ಬಗೆಯ ತೀರ್ಮಾನಗಳೇಕೆ?

ಪಂಡಿಗ : ಈಗ ಅದೆಲ್ಲವನ್ನು ನಾವು ಹೇಳುವ ಸ್ಥಿತಿಯಲ್ಲಿಲ್ಲ.

ಚಟ್ಟಯ್ಯ : ಸರಿ. ನಾವಿಲ್ಲಿದ್ದು ಏನು ಮಾಡಬೇಕು.

ಪಂಡಿಗ : ಚಟ್ಟಯ್ಯನವರೇ ನೀವು ಮಾಡಬೇಕಾದ್ದು ಏನೂ ಇಲ್ಲ. ನಾವು ಬರುವವರೆಗೆ ಇಲ್ಲಿ ನೀವು ನಮ್ಮ ಸೈನ್ಯಾಧಿಕಾರಿಯಾಗಿ ಮಾತ್ರ ಇರುತ್ತೀರಿ.

ಚಟ್ಟಯ್ಯ : ಅಪ್ಪಣೆ.

ಪಂಡಿಗ : ಇನ್ನೊಂದು ವಿಷಯ. ಗಬ್ಬೀಂದ್ರರು ಬಹಳ ನಿಪುಣರು. ಯಾವುದೇ ಕಾರಣಕ್ಕೂ ನೀವು ಅವರೊಡ್ಡುವ ಆಮಿಷಗಳಿಗೆ ಒಳಗಾಗಬಾರದು. ಎಚ್ಚರವಿರಲಿ. ಅವರ ಬೆಂಬಲಿಗರೆಂದೇ ನಂಬಿಸುತ್ತ ನಾವು ಕಾಲಕಳೆಯಬೇಕು. ನಂತರ ಮುಂದಿನದು.

ಚಟ್ಟಯ್ಯ : ಚಕ್ರವರ್ತಿಗಳು ನನಗೆ ಕೊಟ್ಟಿರುವ ಆದೇಶ ಪತ್ರವನ್ನು ಗಬ್ಬೀಂದ್ರರಿಗೆ ತಲುಪಿಸಬೇಕಲ್ಲವೆ?

ಪಂಡಿಗ : ಹೌದು. ಆದರೆ ನಾನು ನನ್ನ ಕೆಲಸ ಮುಗಿಸಿಕೊಂಡು ಬರುವವರೆಗೆ ಅದರ ವಿಚಾರವನ್ನು ಎತ್ತಬೇಡಿ. ಹಿಂತಿರುಗಿ ಬಂದ ಮೇಲೆ ನಾನೇ ಗಬ್ಬೀಂದ್ರರ ಕೈಗೆ ಆ ಪತ್ರವನ್ನು ನೀಡುತ್ತೇನೆ.

ಚಟ್ಟಯ್ಯ : ಆಗಬಹುದು. ನಿಮಗಾಗಿ ಕಾಯುತ್ತೇನೆ. ಆದರೆ.........ಆದರೆ..........ನನ್ನ ವಿಚಾರವಾಗಿ ಪ್ರಭುಗಳಿಗೆ.............?

ಪಂಡಿಗ : ಓಹ್! ಆಡಳಿತಾಧಿಕಾರದ ವಿಷಯ ತಾನೇ?..........................ಅದಕ್ಕೆ ಇನ್ನೂ ಬಹಳ ಸಮಯವಿದೆ.

ಚಟ್ಟಯ್ಯ : ತಪ್ಪು ತಿಳಿಯಬೇಡಿ. ನನಗೆ ಪದವಿಯ ಅತಿಯಾಸೆ ಇದೆ ಎಂದು ನೀವು ಭಾವಿಸಿರಲಿಕ್ಕೆ ಸಾಕು................ಹೀಗೆ ಸುಮ್ಮನೆ ಖುಷಾಲಿಗೆ ಹೇಳಿದೆ. ತಾವು ಬರುವವರೆಗೆ ನಾನೇನು ಮಾಡಲಿ?

ಪಂಡಿಗ : ಮಾಡುವುದೇನು. ಕಾಮನ ಹುಣ್ಣಿಮೆಯ ಸಂಭ್ರಮೋತ್ಸವಗಳು ಇವೆಯಲ್ಲ. ಅವುಗಳಲ್ಲಿ ತೊಡಗಿಸಿಕೊಂಡು ಆನಂದಪಡಿ. ಮುಂದಿನ ದಿನಗಳು ಹೇಗಿರುತ್ತವೋ ಏನೋ!

ಚಟ್ಟಯ್ಯ : ಪಂಡಿಗರ ಹೃದಯದ ಒಳಗನ್ನು ಅರಿಯುವುದು ಹಾವಿನ ಹೆಜ್ಜೆ ಜಾಡನ್ನು ಹಿಡಿಯುವುದೂ ಒಂದೇ.

ಪಂಡಿಗ : ನಿಮ್ಮಂತಹ ಪಳಗಿದ ಘಟಿಂಗರು ಇರುವಾಗ ಎಷ್ಟು ಸೂಕ್ಷ್ಮವಿದ್ದರೇನು? ನಮ್ಮ ಲೆಕ್ಕಾಚಾರಗಳನ್ನು ಬುಡ ಮೇಲಾಗಿಸಬಲ್ಲರು.

ಚಟ್ಟಯ್ಯ : ನೀವು ಯಾರ ಬಗ್ಗೆ ನಿರ್ದೇಶಿಸುತ್ತಿದ್ದೀರಿ?

ಪಂಡಿಗ : ಯಾರನ್ನೂ ನಿರ್ದೇಶಿಸುತ್ತಿಲ್ಲ. ಲೋಕದಲ್ಲಿ ನಡೆದು ಬರುತ್ತಿರುವ ರೀತಿಯನ್ನಷ್ಟೇ ಮನಸ್ಸಿನಲ್ಲಿಟ್ಟುಕೊಂಡು ಹೇಳಿದೆ.

ಚಟ್ಟಯ್ಯ : ಪಂಡಿಗರೇ ನಾನೂ ಮಕ್ಕಳೊಂದಿಗ. ಏನೋ ಖೊಟ್ಟಿಗರಲ್ಲಿ ಪಸಾಯತನಾಗಿ ಇದ್ದೆ. ಆದರೆ ಖೊಟ್ಟಿಗರು ಈಗಿಲ್ಲವಾಗಿ ಆಶ್ರಯ ತಪ್ಪಿದ್ದೇನೆ. ಕರ್ಕ ಪ್ರಭುಗಳ ಔದಾರ್ಯ ಅನುಮಾನಿಸದೆ ನನ್ನನ್ನು ಆಪ್ತವಲಯಕ್ಕೆ ಹೊಗಿಸಿಕೊಂಡರು.

ಪಂಡಿಗ : ನೋಡುವ ನಿಮ್ಮ ನಿಷ್ಠೆ ಹೇಗೆ ಕೆಲಸ ಮಾಡುತ್ತದೆ ಎಂದು.

ಚಟ್ಟಯ್ಯ : ಪಂಡಿಗರೇ ನಾನು ಜೀವಂತ ಇರುವವರೆಗೆ ಕರ್ಕರ ಸೇವೆಗೆ ಮೀಸಲಾಗಿಸಿಕೊಳ್ಳುತ್ತೇನೆ. ನೀವುಗಳೆಲ್ಲ ನಂಬಬೇಕು ಅಷ್ಟೆ!

ಪಂಡಿಗ : ನಂಬುತ್ತೇವೆ. ಖಂಡಿತ ನಂಬುತ್ತೇವೆ.

ಚಟ್ಟಯ್ಯ : ಕರ್ಕ ಪ್ರಭುಗಳಿಗೆ ಸಿಂಹಾಸನ ಖಾತ್ರಿಯಾಗಿ ಮುಂದುವರಿಯುವುದು ತಾನೇ?

ಪಂಡಿಗ : ಏಕೆ ಇಂತಹ ಪ್ರಶ್ನೆ ಕೇಳುತ್ತೀರಿ? ಕರ್ಕರಿಗೆ ಸಿಂಹಾಸನ ಕೈ ತಪ್ಪುವುದೆಂಬ ಅನುಮಾನ ಬಂದಿದೆಯೇ?

ಚಟ್ಟಯ್ಯ : ಛೆ! ಛೆ! ಅನುಮಾನವೇ?.................ಹಾಗೇನಿಲ್ಲ. ರಾಜವಂಶದ ಸೇವೆಗಾಗಿ, ರಕ್ಷಣೆಗಾಗಿ ನಾನೊಬ್ಬನೇ ಅಲ್ಲ. ನನ್ನ ಕುಟುಂಬವೂ ಬದ್ಧವಾಗಿದೆ.

ಪಂಡಿಗ : ನಿಮಗೊಬ್ಬ ಮಗಳಿರಬೇಕಲ್ಲ?

ಚಟ್ಟಯ್ಯ : ಹೌದು ಪ್ರಾಪ್ತ ವಯಸ್ಕಳಾಗಿದ್ದಾಳೆ. ಆಕೆಗೂ ವಿವಾಹವಾಗಬೇಕು.

ಪಂಡಿಗ : ಮತ್ತೆ ಆದಷ್ಟು ಬೇಗ ವಿವಾಹ ಮಾಡಿ ಬಿಡಬಹುದಲ್ಲ?

ಚಟ್ಟಯ್ಯ : ಯೋಗ್ಯ ವರನು ಸಿಗಬೇಕಲ್ಲ?...............ರಾಜವಂಶವಾದರೆ ಒಳ್ಳೆಯದೆಂದು ನಮ್ಮ ಅಭಿಪ್ರಾಯ.

ಪಂಡಿಗ : ಹುಡುಕಾಟದಲ್ಲಿದ್ದೀರಲ್ಲ?..........

ಚಟ್ಟಯ್ಯ : ಹೂಂ! ನಿಮಗೂ ಯಾರಾದರೂ ಯೋಗ್ಯನೆನಿಸಿದ್ದಲ್ಲಿ ನಮ್ಮ ಪುತ್ರಿಯ ವಿವಾಹಕ್ಕೆ ಪ್ರಯತ್ನಿಸುತ್ತೀರೆಂದು ನಂಬುತ್ತೇನೆ.

**ಪಂಡಿಗ** : ತಪ್ಪದೆ..............ದೇವರು ಒಳ್ಳೆಯದು ಮಾಡಲಿ. ನಾವು ಹೋಗಿ ಬರುತ್ತೇವೆ. ನಾವು ಹೋಗಿ ಬರುವವರೆಗೆ ಬಹಳ ಜಾಗರೂಕತೆಯಿಂದ ಇರಬೇಕು. ಯಾವುದೇ ಅಚಾತುರ್ಯಗಳು ಘಟಿಸದಂತೆ ನೋಡಿಕೊಳ್ಳಿ.

**ಚಟ್ಟಯ್ಯ** : ನೀವು ನಿಶ್ಚಿಂತೆಯಿಂದ ಇರಿ, ಪಂಡಿಗರೇ.

OO

# ದೃಶ್ಯ - ೭

ನಿರೂಪಕ [ಇತಿಹಾಸ] : (ಹಿನ್ನೆಲೆಯಲ್ಲಿ)

[ಪಂಡಿಗರು ತಮ್ಮ ಜಾಣ್ತನದಿಂದ ತಲೆತಪ್ಪಿಸಿಕೊಂಡು ಬನವಾಸೆಯಿಂದ ಮಾನ್ಯಖೇಟಕ್ಕೆ ಬಂದು ವಿಕ್ರಮಾದಿತ್ಯರನ್ನು ಭೇಟಿಯಾಗಿಯೇ ವಿಷಯವನ್ನೆಲ್ಲಾ ತಿಳಿಸಿದರು. ಗಬ್ಬೀಂದ್ರರನ್ನು ವಂಚಿಸಿ ಬಂದದ್ದು ಹೆಮ್ಮೆ ಎನಿಸಿದೆ. ವಿಕ್ರಮಾದಿತ್ಯರು ಪಂಡಿಗರ ಜೊತೆ ಸಮಾಲೋಚನೆ ನಡೆಸಿದ್ದಾರೆ.]

ವಿಕ್ರಮಾದಿತ್ಯ : ಹೂಂ! ಅಂತೂ ಗಬ್ಬೀಂದ್ರರಿಗೆ ನಿಮ್ಮ ಅಂತರ್ಯವನ್ನು ಕಾಣಿಸದೆ ನಂಬಿಸಿ ಬಿಟ್ಟಿರಿ.

ಪಂಡಿಗ : ಹೌದು ವಿಕ್ರಮಾದಿತ್ಯರೇ..... ಗಬ್ಬೀಂದ್ರರಂತೂ ತಾವೇ ಚಕ್ರವರ್ತಿಗಳಾದಂತೆ ಕನಸು ಕಟ್ಟಿಕೊಂಡಿದ್ದಾರೆ. ನಮ್ಮೆಲ್ಲರ ಬಲ ಅವರ ಕಡೆಗಿದೆ ಎಂದು ಮಂಡಿಗೆ ತಿನ್ನುತ್ತಿದ್ದಾರೆ.

ವಿಕ್ರಮಾದಿತ್ಯ : ಇನ್ನೆಷ್ಟು ಕಾಲ ಅವರನ್ನು ಆ ನಂಬಿಕೆಯಲ್ಲಿ ಇರಿಸುತ್ತೀರಿ. ನೀವು ನಿಜವಾಗಿ ಯಾರ ಪರ ಎಂಬುದು ತಿಳಿದರೆ ಆಗಬಹುದಾದ ಪರಿಣಾಮಗಳನ್ನು ಯೋಚಿಸಿದ್ದೀರಾ?

ಪಂಡಿಗ : ಅದಕ್ಕೆ ಅವಕಾಶಗಳನ್ನು ಕೊಡುವುದಿಲ್ಲ!

ವಿಕ್ರಮಾದಿತ್ಯ : ಅದು ನಿಮಗೆ ಬಿಟ್ಟದ್ದು..... ಈಗ ಮುಂದಿನ ಕೆಲಸವೇನು? ತಿಳಿಸಿ.

ಪಂಡಿಗ : ರಾಜಧಾನಿ ನಿಮ್ಮ ಕೈಯಲ್ಲಿ ಭದ್ರವಾಗಿದೆ. ಯಾದವರ, ಚೇದಿರಾಜ್ಯದ ಬಲವನ್ನೆಲ್ಲಾ ಒಟ್ಟು ಮಾಡಿ, ರಾಜಧಾನಿಯಲ್ಲಿ ಇರಿಸುವ ಕೆಲಸ ಮೊದಲು ಮಾಡೋಣ.

ವಿಕ್ರಮಾದಿತ್ಯ : ಕರ್ಕರಿಗೆ ಅನುಮಾನ ಬಂದರೆ.

ಪಂಡಿಗ : ಕರ್ಕರ ರಕ್ಷಣೆಗೆಂದೇ ಬಲ ಸಂಗ್ರಹಣೆಯಾಗಿದೆ ಎಂಬ ನಂಬಿಕೆಯನ್ನು ಮೂಡಿಸಲು ನಾನೇ ಖುದ್ದಾಗಿ ಕರ್ಕರನ್ನು ಕಾಣುತ್ತೇನೆ. ನಿಮ್ಮ ಕುಮಾರರು ಮಾತ್ರ ಈಗ ಸ್ವಲ್ಪ ಹೆಚ್ಚಿನ ಶ್ರಮ ವಹಿಸಬೇಕಾದೀತು.

ವಿಕ್ರಮಾದಿತ್ಯ : ಕೆಲಸ ಮಾಡಲು, ಹೆಚ್ಚಿನ ಶ್ರಮ ವಹಿಸಲು ನಮ್ಮ ಕುಮಾರರು ತುದಿಗಾಲ ಮೇಲೆ ನಿಂತಿದ್ದಾರೆ. ಅವನನ್ನು ನಿಮ್ಮ ಬಳಿಗೆ ಕಳಿಸುತ್ತೇನೆ. ವಿವರಿಸಿ ಹೇಳಿ.

ಪಂಡಿಗ : ಅಂತೆಯೇ ಮಾಡಿ ಈಗ ಮೊದಲು ನಾನು ಕರ್ಕರನ್ನು ಕಂಡು ಮಾತಾಡಿಸಿ ಮೊದಲಿನಂತೆಯೇ ಆತ್ಮೀಯರೆಂದು ತೋರಿಸಿಕೊಳ್ಳುತ್ತೇನೆ.

ಕರ್ಕದೇವ : ಪಂಡಿಗರು ಇದೇನು ಇದ್ದಕ್ಕಿದ್ದಂತೆ ಪ್ರತ್ಯಕ್ಷರಾದಿರಿ? ಹೋದ ಕೆಲಸ ಏನಾಯಿತು?........ನಾವು ಕೊಟ್ಟಿದ್ದ ಆದೇಶವನ್ನು ಗಬ್ಬೀಂದ್ರರಿಗೆ ತಲುಪಿಸಿದಿರೇನು?

ಪಂಡಿಗ : ಚಕ್ರವರ್ತಿಗಳು ಮನ್ನಿಸಬೇಕು. ನೀವು ಕೊಟ್ಟ ಆದೇಶವನ್ನು ಇನ್ನೂ ಗಬ್ಬೀಂದ್ರರಿಗೆ ಮುಟ್ಟಿಸಿಲ್ಲ.

ಕರ್ಕದೇವ : ಏಕೆ?

ಪಂಡಿಗ : ಅದರಿಂದ ಅನಾಹುತವಾದೀತೆಂಬ ಭೀತಿಯಿಂದ!

ಕರ್ಕದೇವ : ಭೀತಿಯೇಕೆ. ಅಧಿಕಾರದಿಂದ ಅವರನ್ನು ಕಿತ್ತೊಗೆದು ಸೆರೆಮನೆಗೆ ಹಾಕಿ ಬನ್ನಿರೆಂದಲ್ಲವೆ ನಾವು ಆದೇಶಿಸಿದ್ದು?

ಪಂಡಿಗ : ತಮ್ಮ ಆದೇಶವಿದ್ದದ್ದು ಹಾಗೆ ಎಂಬುದು ಸತ್ಯ.

ಕರ್ಕದೇವ : ಮತ್ತೇಕೆ ಉಲ್ಲಂಘಿಸಿದಿರಿ?

ಪಂಡಿಗ : ಗಬ್ಬೀಂದ್ರರನ್ನು ಒರೆದು ನೋಡಬೇಕಿತ್ತು. ನಾವೆಲ್ಲ ಅವರ ಪರವೆಂದು ನಂಬಿಕೆಯನ್ನು ಹುಟ್ಟಿಸಿ ಬಂದಿದ್ದೇವೆ. ಅಲ್ಲದೆ ಹಾಗೆ ಮಾಡಿದ್ದರೆ ಗಬ್ಬೀಂದ್ರರು ಸಂಗ್ರಹಿಸಿ ಇಟ್ಟುಕೊಂಡಿರುವ ಸಾಕಷ್ಟು ಬಲವನ್ನು ಎದುರಿಸಬೇಕಾಗಿ ಬರುತ್ತಿತ್ತು.

ಕರ್ಕದೇವ : ಗಬ್ಬೀಂದ್ರರ ಬಲವನ್ನು ಎದುರಿಸುವಷ್ಟು ಸಾಮರ್ಥ್ಯವಿರಲಿಲ್ಲವೇ?

ಪಂಡಿಗ : ಸಮುಸಮರೊಡನೆ ಸೆಣಸಾಟ ನಡೆಯುವಾಗ ಫಲಾ ಫಲಗಳು ನಿರೀಕ್ಷಿಸಿದಂತೆ ಇರುವುದಿಲ್ಲ. ಅದಕ್ಕಾಗಿಯೇ ನಾನು ಸುಮ್ಮನಿದ್ದೆ.

ಕರ್ಕ : ಈಗೇನು ಮಾಡಬೇಕೆಂದಿದ್ದೀರಿ?

ಪಂಡಿಗ : ಆಗಲಿ. ನಮಗೆ ಯೋಚನೆ ಇಲ್ಲ. ನಮ್ಮ ಸೈನ್ಯ ಬಲ ಗಟ್ಟಿಯಾಗಿದೆ. ಚೇದಿ. ಯಾದವ ಸೈನ್ಯಗಳೂ ಬಂದರೆ ಸಾಕು. ಗಜ್ಜೇಂದ್ರರಿಗೆ ಆಡಳಿತಾಧಿಕಾರಿಯ ಸ್ಥಾನವನ್ನು ತೆರವು ಮಾಡಲು ನಾನು ಇನ್ನೂ ಸೂಚಿಸಿಲ್ಲ.

ಜಕ್ಕಿ : ಚಟ್ಟಯ್ಯನವರು ಹೇಗೆ?

ಪಂಡಿಗ : ಅಪಾಯದ. ಮನುಷ್ಯನಂತೂ ಅಲ್ಲ. ಆದರೂ ಎಚ್ಚರಿಕೆಯಿಂದ ಇರಬೇಕಾದ್ದು ಮುಖ್ಯ.

ಜಕ್ಕಿ : ನೀವು ಬನವಾಸಿಗೆ ಹೋದಾಗ ಚಟ್ಟಯ್ಯನವರ ಪತ್ನಿ ಸಿಕ್ಕಿದ್ದರು. ಅವರಿಗೆ ತಮ್ಮ ಮಗಳನ್ನು ಚಕ್ರವರ್ತಿಗಳಿಗೆ ವಿವಾಹ ಮಾಡಿಸಬೇಕೆಂಬ ಆಸೆಯಿದೆ. ನೀವು ಸ್ವಲ್ಪ ಸಹಕರಿಸಬೇಕೆಂದು ಕೋರಿದರು.

ಪಂಡಿಗ : ಹುಡುಗಿ ಹೇಗಿದ್ದಾಳೆ? ಅವಳ ಮನಸ್ಸು ಏನಿದೆ ತಿಳಿದೆಯಾ?

ಜಕ್ಕಿ : ಹುಡುಗಿಯನ್ನು ನಾನು ನೋಡಿಲ್ಲ. ಆದರೆ ಚಕ್ರವರ್ತಿಯ ಕೈ ಹಿಡಿಯಲು ಯಾರು ಬೇಡವೆನ್ನುತ್ತಾರೆ.

ಪಂಡಿಗ : ಆದರೂ ತಿಳಿಯುವ ಪ್ರಯತ್ನ ಮಾಡು. ಕರ್ಣದೇವರು ಲಗ್ನವಾಗಬಾರದು. ಹೇಗಾದರೂ ಇದನ್ನು ತಪ್ಪಿಸಬೇಕು.

ಜಕ್ಕಿ : ತಪ್ಪಿಸುವುದಾದರೂ ಹೇಗೆ?

ಪಂಡಿಗ : ಅವರನ್ನು [illegible] ಸ್ವಲ್ಪ ಕಾಲ ಇಲ್ಲಿಂದ ದೂರ ಇರಿಸಬೇಕು.

ಜಕ್ಕಿ : ಹೇಗೆ ಮಾಡುತ್ತೀರಿ?

ಪಂಡಿಗ : ಹೇಗಿದ್ದರೂ ನಾನು ಮತ್ತೆ ಬನವಾಸಿಗೆ ಹೋಗಲೇಬೇಕು. ಹೋಗುವಾಗ ಕರ್ಣದೇವರನ್ನೂ ಪುಸಲಾಯಿಸಿ ಕರೆದೊಯ್ಯುತ್ತೇನೆ. ಅಷ್ಟರಲ್ಲಿ ನೀನು ಆ ಹುಡುಗಿಯ ಮನಸ್ಸನ್ನು ಪರೀಕ್ಷಿಸು.

– – ವಿರಾಮ – –

ಜಕ್ಕಲೆ : ಗಂಗರ ಜೊತೆಯ ಯುದ್ಧ ಏನಾಯಿತು?

ತೈಲಪ : ಇನ್ನೂ ಏನೂ ಆಗಿಲ್ಲವಾದರೂ ಸೋಲುವುದಂತೂ ಖಂಡಿತ.

ಜಕ್ಕಲೆ : ನಮ್ಮ ತಂದೆಯವರು ಹೇಗಿದ್ದಾರೆ?

ತೈಲಪ : ತುಂಬ ಸಂತೋಷದಿಂದ ಇದ್ದಾರೆ.

ಜಕ್ಕಲೆ : ಈಗಲೇ ಸಂತೋಷವೇ...............ವಿಜಯದ ಸುದ್ದಿ ಬಂದೇ ಇಲ್ಲ.

ತೈಲಪ : ಸಂತೋಷ ಅದಕ್ಕಾಗಿ ಅಲ್ಲ.

ಜಕ್ಕಲೆ : ಮತ್ತೇತಕ್ಕೆ?

ತೈಲಪ : ಏತಕ್ಕೆ ಎಂದು ಕೇಳುವೆಯೇನು? ಹೇಳುತ್ತೇನೆ. ಕೇಳಿ ಸಂತೋಷ ಪಡು............ಪಸಾಯಿತ ಚಟ್ಟಯ್ಯನವರ ಮಗಳನ್ನು ನಿಮ್ಮ ತಂದೆ ಮದುವೆಯಾಗುತ್ತಾರಂತೆ!

ಜಕ್ಕಲೆ : (ಹೌಹಾರಿ) ಹಾಂ!

ತೈಲಪ : ಏನಾಯಿತು? ಹಾಗೇಕೆ ಬೆಚ್ಚಿದೆ.

ಜಕ್ಕಲೆ : ಏನಿಲ್ಲ. ಆದರೆ ಅವರ ತಲೆಗೆ ಮದುವೆಯ ಆಸೆ ತುಂಬಿದವರು ಯಾರಿರಬಹುದು ಎಂದು ಯೋಚಿಸಿದೆ............ಬಹುಶಃ ಇವೆಲ್ಲವೂ ಜಕ್ಕಿ ಸುಂದರಿ, ಗಜ್ಜೇಂದ್ರರ ಚಿತಾವಣೆಯೇ ಇರಬೇಕು.

ತೈಲಪ : ತತ್‌ಕ್ಷಣಕ್ಕೆ ನಿನಗೆ ಹಾಗೆ ಅನ್ನಿಸಿದ್ದು ಸರಿಯೇ! ಆದರೆ ಇತ್ತೀಚಿನ ರಾಜಕೀಯ ಬೆಳವಣಿಗೆಯಿಂದ ಮತ್ತು ಗಜ್ಜೇಂದ್ರ ಸೆರೆಯಾಗಿರುವುದರಿಂದ, ಜಕ್ಕಿ ಸುಂದರಿ ಮತ್ತು ಪಂಡಿಗರು ನಮ್ಮ ಪಕ್ಷವೆಂಬುದು ಸಿದ್ಧವಾಗಿದೆ.

ಜಕ್ಕಲೆ : ಅಂದರೆ ಮಾರಸಿಂಹನ ಮೇಲಿನ ಗೆಲುವು ನಮ್ಮದೆಂದೇ? ಚಾಲುಕ್ಯವಂಶದ್ದೆಂದೇ?

ತೈಲಪ : ಹೌದು ಜಕ್ಕಲೆ. ನಿನ್ನ ತಂದೆಯಲ್ಲಿ ಸುಳಿದ ವಿವಾಹದ ಯೋಚನೆಯೇ ನಮ್ಮ ತಿರುವಿಗೆ ದಾರಿ ಮಾಡಿತು. ಒಳ್ಳೆ ಮುಹೂರ್ತದಲ್ಲಿ ನಾವಿಬ್ಬರೂ ಮೂರ್ಧಾಭಿಷಕ್ತರಾಗಲು ಸಿದ್ಧರಾಗಿರಬೇಕೆಂದು ಪಂಡಿಗರು ಆದೇಶ ಕಳಿಸಿದ್ದಾರೆ.

ಜಕ್ಕಲೆ : (ಅನುಮಾನದಿಂದ) ಅಂದರೆ, ನಮ್ಮ ತಂದೆಯವರನ್ನು ಸಿಂಹಾಸನದಿಂದ ವಂಚಿತಗೊಳಿಸುವ ಹುನ್ನಾರವೇನು?

ತೈಲಪ : ಹೌದು. ಹೀಗೆ ಮಾಡಬೇಕಾದ್ದು ಅನಿವಾರ್ಯ ಮತ್ತು ಒಂದು ರೀತಿಯಿಂದ ನ್ಯಾಯಸಮ್ಮತ.

ಜಕ್ಕಲೆ : ನ್ಯಾಯ ಸಮ್ಮತವೆಂದು ಸಮರ್ಥಿಸುತ್ತೀರಾ?

ತೈಲಪ : ಓಹ್! ನೀನು ಬಯಸಿದರೆ ಹೇಗೆಂದು ವಿವರಿಸುತ್ತೇನೆ.

ಜಕ್ಕಲೆ : ಹೂಂ! ಹೇಳಿ. ನೀವು ಕೇಳುವುದನ್ನು ಕೇಳಲೆಂದೇ ಇದ್ದೇನೆ.

ತೈಲಪ : ನಾವು ಸಿಂಹಾಸನಾರೋಹಣ ಮಾಡಿದ ಕ್ಷಣದಲ್ಲಿಯೇ ನಮ್ಮ ಕುಮಾರನನ್ನು ಯುವರಾಜನೆಂದು ಘೋಷಿಸುತ್ತೇವೆ. ಗಂಡು

ಪಂಡಿಗ : ಆಗಲಿ. ನಮಗೆ ಯೋಚನೆ ಇಲ್ಲ. ನಮ್ಮ ಸೈನ್ಯ ಬಲ ಗಟ್ಟಿಯಾಗಿದೆ. ಚೇದಿ, ಯಾಧವ ಸೈನ್ಯಗಳೂ ಬಂದರೆ ಸಾಕು. ಗಬ್ಬೇಂದ್ರರಿಗೆ ಆಡಳಿತಾಧಿಕಾರಿಯ ಸ್ಥಾನವನ್ನು ತೆರವು ಮಾಡಲು ನಾನು ಇನ್ನೂ ಸೂಚಿಸಿಲ್ಲ.

ಜಕ್ಕಿ : ಚಟ್ಟಯ್ಯನವರು ಹೇಗೆ?

ಪಂಡಿಗ : ಅಪಾಯದ, ಮನುಷ್ಯನಂತೂ ಅಲ್ಲ. ಆದರೂ ಎಚ್ಚರಿಕೆಯಿಂದ ಇರಬೇಕಾದ್ದು ಮುಖ್ಯ.

ಜಕ್ಕಿ : ನೀವು ಬನವಾಸಿಗೆ ಹೋದಾಗ ಚಟ್ಟಯ್ಯನವರ ಪತ್ನಿ ಸಿಕ್ಕಿದ್ದರು. ಅವರಿಗೆ ತಮ್ಮ ಮಗಳನ್ನು ಚಕ್ರವರ್ತಿಗಳಿಗೆ ವಿವಾಹ ಮಾಡಿಸಬೇಕೆಂಬ ಆಸೆಯಿದೆ. ನೀವು ಸ್ವಲ್ಪ ಸಹಕರಿಸಬೇಕೆಂದು ಕೋರಿದರು.

ಪಂಡಿಗ : ಹುಡುಗಿ ಹೇಗಿದ್ದಾಳೆ? ಅವಳ ಮನಸ್ಸು ಏನಿದೆ ತಿಳಿದೆಯಾ?

ಜಕ್ಕಿ : ಹುಡುಗಿಯನ್ನು ನಾನು ನೋಡಿಲ್ಲ. ಆದರೆ ಚಕ್ರವರ್ತಿಯ ಕೈ ಹಿಡಿಯಲು ಯಾರು ಬೇಡವೆನ್ನುತ್ತಾರೆ.

ಪಂಡಿಗ : ಆದರೂ ತಿಳಿಯುವ ಪ್ರಯತ್ನ ಮಾಡು. ಕರ್ಣದೇವರು ಲಗ್ನವಾಗಬಾರದು. ಹೇಗಾದರೂ ಇದನ್ನು ತಪ್ಪಿಸಬೇಕು.

ಜಕ್ಕಿ : ತಪ್ಪಿಸುವುದಾದರೂ ಹೇಗೆ?

ಪಂಡಿಗ : ಅವರನ್ನು ಸ್ವಲ್ಪ ಕಾಲ ಇಲ್ಲಿಂದ ದೂರ ಇರಿಸಬೇಕು.

ಜಕ್ಕಿ : ಹೇಗೆ ಮಾಡುತ್ತೀರಿ?

ಪಂಡಿಗ : ಹೇಗಿದ್ದರೂ ನಾನು ಮತ್ತೆ ಬನವಾಸಿಗೆ ಹೋಗಲೇಬೇಕು. ಹೋಗುವಾಗ ಕರ್ಣದೇವರನ್ನೂ ಪುಸಲಾಯಿಸಿ ಕರೆದೊಯ್ಯುತ್ತೇನೆ. ಅಷ್ಟರಲ್ಲಿ ನೀನು ಆ ಹುಡುಗಿಯ ಮನಸ್ಸನ್ನು ಪರೀಕ್ಷಿಸಿರು.

– – ವಿರಾಮ – –

ಜಕ್ಕಲೆ : ಗಂಗರ ಜೊತೆಯ ಯುದ್ಧ ಏನಾಯಿತು?

ತೈಲಪ : ಇನ್ನೂ ಏನೂ ಆಗಿಲ್ಲವಾದರೂ ಸೋಲುವುದಂತೂ ಖಂಡಿತ.

ಜಕ್ಕಲೆ : ನಮ್ಮ ತಂದೆಯವರು ಹೇಗಿದ್ದಾರೆ?

ತೈಲಪ : ತುಂಬ ಸಂತೋಷದಿಂದ ಇದ್ದಾರೆ.

ಜಕ್ಕಲೆ : ಈಗಲೇ ಸಂತೋಷವೇ................ವಿಜಯದ ಸುದ್ದಿ ಬಂದೇ ಇಲ್ಲ.

ತೈಲಪ : ಸಂತೋಷ ಅದಕ್ಕಾಗಿ ಅಲ್ಲ.

ಜಕ್ಕಲೆ : ಮತ್ತೇತಕ್ಕೆ?

ತೈಲಪ : ಏತಕ್ಕೆ ಎಂದು ಕೇಳುವೆಯೇನು? ಹೇಳುತ್ತೇನೆ. ಕೇಳಿ ಸಂತೋಷ ಪಡು............ಪಸಾಯಿತ ಚಟ್ಟಯ್ಯನವರ ಮಗಳನ್ನು ನಿಮ್ಮ ತಂದೆ ಮದುವೆಯಾಗುತ್ತಾರಂತೆ!

ಜಕ್ಕಲೆ : (ಹೌಹಾರಿ) ಹಾಂ!

ತೈಲಪ : ಏನಾಯಿತು? ಹಾಗೇಕೆ ಬೆಚ್ಚಿದೆ.

ಜಕ್ಕಲೆ : ಏನಿಲ್ಲ. ಆದರೆ ಅವರ ತಲೆಗೆ ಮದುವೆಯ ಆಸೆ ತುಂಬಿದವರು ಯಾರಿರಬಹುದು ಎಂದು ಯೋಚಿಸಿದೆ............ಬಹುಶಃ ಇದೆಲ್ಲವೂ ಜಕ್ಕಿ ಸುಂದರಿ, ಗಬ್ಬೀಂದ್ರರ ಚಿತಾವಣೆಯೇ ಇರಬೇಕು.

ತೈಲಪ : ತತ್‌ಕ್ಷಣಕ್ಕೆ ನಿನಗೆ ಹಾಗೆ ಅನ್ನಿಸಿದ್ದು ಸರಿಯೇ! ಆದರೆ ಇತ್ತೀಚಿನ ರಾಜಕೀಯ ಬೆಳವಣಿಗೆಯಿಂದ ಮತ್ತು ಗಬ್ಬೀಂದ್ರ ಸೆರೆಯಾಗಿರುವುದರಿಂದ, ಜಕ್ಕಿ ಸುಂದರಿ ಮತ್ತು ಪಂಡಿಗರು ನಮ್ಮ ಪಕ್ಷವೆಂಬುದು ಸಿದ್ಧವಾಗಿದೆ.

ಜಕ್ಕಲೆ : ಅಂದರೆ ವಾರಸಿಂಹನ ಮೇಲಿನ ಗೆಲುವು ನಮ್ಮದೆಂದೇ? ಚಾಲುಕ್ಯವಂಶದ್ದಂದೇ?

ತೈಲಪ : ಹೌದು ಜಕ್ಕಲೆ. ನಿನ್ನ ತಂದೆಯಲ್ಲಿ ಸುಳಿದ ವಿವಾಹದ ಯೋಚನೆಯೇ ನಮ್ಮ ತಿರುವಿಗೆ ದಾರಿ ಮಾಡಿತು. ಒಳ್ಳೆ ಮುಹೂರ್ತದಲ್ಲಿ ನಾವಿಬ್ಬರೂ ಮೂರ್ಧಾಭಿಷಕ್ತರಾಗಲು ಸಿದ್ಧರಾಗಿರಬೇಕೆಂದು ಪಂಡಿಗರು ಆದೇಶ ಕಳಿಸಿದ್ದಾರೆ.

ಜಕ್ಕಲೆ : (ಅನುಮಾನದಿಂದ) ಅಂದರೆ, ನಮ್ಮ ತಂದೆಯವರನ್ನು ಸಿಂಹಾಸನದಿಂದ ವಂಚಿತಗೊಳಿಸುವ ಹುನ್ನಾರವೇನು?

ತೈಲಪ : ಹೌದು. ಹೀಗೆ ಮಾಡಬೇಕಾದ್ದು ಅನಿವಾರ್ಯ ಮತ್ತು ಒಂದು ರೀತಿಯಿಂದ ನ್ಯಾಯಸಮ್ಮತ.

ಜಕ್ಕಲೆ : ನ್ಯಾಯ ಸಮ್ಮತವೆಂದು ಸಮರ್ಥಿಸುತ್ತೀರಾ?

ತೈಲಪ : ಓಹ್! ನೀನು ಬಯಸಿದರೆ ಹೇಗೆಂದು ವಿವರಿಸುತ್ತೇನೆ.

ಜಕ್ಕಲೆ : ಹೂಂ! ಹೇಳಿ. ನೀವು ಕೇಳುವುದನ್ನು ಕೇಳಲೆಂದೇ ಇದ್ದೇನೆ.

ತೈಲಪ : ನಾವು ಸಿಂಹಾಸನಾರೋಹಣ ಮಾಡಿದ ಕ್ಷಣದಲ್ಲಿಯೇ ನಮ್ಮ ಕುಮಾರನನ್ನು ಯುವರಾಜನೆಂದು ಘೋಷಿಸುತ್ತೇವೆ. ಗಂಡು

ಸಂತಾನವಿಲ್ಲದ ನಿನ್ನ ತಂದೆಗೆ ಅವನೇ ದೌಹಿತ್ರ ಉತ್ತರಾಧಿಕಾರಿ ಅಂದ ಮೇಲೆ ನಿಮ್ಮ ತಂದೆಯ ಸಿಂಹಾಸನಕ್ಕೆ ನ್ಯಾಯಬದ್ಧ ಹಕ್ಕುದಾರನು ಸಿಕ್ಕಂತಯೇ ಅಲ್ಲವೇ?

ಜಕ್ಕಲೆ : ಗಂಡು ಜಾಣತನದಿಂದ ಏನೇನೋ ಹೇಳಿ ನನ್ನ ಬಾಯಿ ಕಟ್ಟಿದಂತೆ ಮಾಡುತ್ತಿದ್ದೀರಿ...........ಹೇಗೋ ನಮ್ಮ ಕುಮಾರರು ಕೀರ್ತಿವಂತರಾದರೆ ಸಾಕು.

ತೈಲಪ : ನಿನಗೆ ಅನುಮಾನವೇ ಬೇಡ. ಅವನು ಯಾರು? ನಮ್ಮ ಮಗ. ಎಲ್ಲ ಕಾಲಕ್ಕೂ ಸತ್ಯಾಶ್ರಯನಾಗಿಯೇ ಉಳಿಯುತ್ತಾನೆ.

ಜಕ್ಕಲೆ : ಹಾಗಾದರೆ ನಮ್ಮ ತಂದೆಯವರ ತಲೆ ಹೊಕ್ಕಿರುವ ಮದುವೆಯ ಆಲೋಚನೆಯ ಹುಳುವನ್ನು ಹೊಸಕಿ ಎಸೆಯಬಾರದೇ?

ತೈಲಪ : ಈಗಲೇ ಅದನ್ನು ಮಾಡ ಹೊರಟರೆ, ನಮ್ಮೊಳಗಿನ ಒಗ್ಗಟ್ಟು ಛಿದ್ರ ಛಿದ್ರವಾಗಿ ಹೋಗುತ್ತದೆ.

ಜಕ್ಕಲೆ : ಹಾಗಿದ್ದರೆ ಕೇವಲ ಪರಮಾರರನ್ನು ಗೆಲ್ಲಲು ಮಾತ್ರವೇ ನೀವು ಒಗ್ಗಟ್ಟಾದುದು?

ತೈಲಪ : ಹೌದು. ಒಗ್ಗಟ್ಟನ್ನು ಸಾಧಿಸಲು ಅದು ಮೊದಲ ಹೆಜ್ಜೆ ಮಾತ್ರ. ಅದು ಆಗ ಸಾಧಿಸಲು ಆಗದಿದ್ದರೆ ನನ್ನ ತಂದೆಯವರಿಗೆ ಕೊಟ್ಟ ಮಾತನ್ನು ನಡೆಸಲು ಅವಕಾಶವೇ ಆಗುತ್ತಿರಲಿಲ್ಲ.

ಜಕ್ಕಲೆ : ಏನು ನಿಮ್ಮ ತಂದೆಗೆ ನೀವು ಮಾತು ಕೊಟ್ಟಿದ್ದಿರಾ? ಏನೆಂದು?

ತೈಲಪ : ನನ್ನ ತಂದೆ ಅವರ ತಂದೆಗೆ. ನಾನು ನನ್ನ ತಂದೆಗೆ ಮಾತು ಕೊಟ್ಟಿದ್ದೆವು.

ಜಕ್ಕಲೆ : ನಿಮ್ಮ ತಂದೆಯವರು ಕೊಟ್ಟ ಮಾತೇನು?

ತೈಲಪ : ರಾಷ್ಟ್ರಕೂಟ ರಾಜಕನ್ಯೆ ಕೃಷ್ಣನಂದನೆಯರನ್ನು ನನ್ನ ತಾತ ಅಣ್ಣಯ್ಯ ದೇವರು ಲಗ್ನವಾದುದು ಎರಡು ವಂಶಗಳ ನಡುವಿನ ವಿರಸ ಹೋಗಲಾಡಿಸಿ ಮರಳಿ ಸಿಂಹಾಸನವನ್ನು ಪಡೆಯುವುದಕ್ಕಾಗಿ.

ಜಕ್ಕಲೆ : ಪಡೆದರೇನು?

ತೈಲಪ : ಇಲ್ಲ. ಪಡೆಯಲಿಲ್ಲ. ನಿನ್ನ ತಂದೆಯ ದೊಡ್ಡಪ್ಪನವರು ಬಹಳ ಜನಾನುರಾಗಿಗಳಾಗಿದ್ದರು. ಅಂತಹವರಿಂದ ಸಿಂಹಾಸನವನ್ನು ಕಸಿದುಕೊಂಡು ಬಣಗಳನ್ನು ಸೃಷ್ಟಿಸಿ, ಕನ್ನಡಿಗರನ್ನು ಎರಡಾಗಿ ಸೀಳುವಂತೆ ಆಗುವುದೆಂದು ಭಾವಿಸಿ, ಆಸೆಯನ್ನು ಹತ್ತಿಕ್ಕಿ ಸುಮ್ಮನಾದರು. ಅವರ ಆ ಆಸೆ ಈಗ ಫಲಿಸಲಿದೆ.

ಜಕ್ಕಲೆ : ನಮ್ಮ ತಂದೆಯ ಪಾಡೇನಾಗಬೇಕು.

ತೈಲಪ : ಪರಿಸ್ಥಿತಿಯನ್ನು ಸರಿಯಾಗಿ ಗ್ರಹಿಸಿ ಅರ್ಥ ಮಾಡಿಕೊಂಡರೆ ನಮ್ಮೆಲ್ಲರಿಗೂ ಹಿರಿಯರಾಗಿ ಮಾರ್ಗದರ್ಶಕರಾಗಿ ಇರಬಹುದು.

ಜಕ್ಕಲೆ : ಇಲ್ಲವಾದಲ್ಲಿ?

ತೈಲಪ : ಇಲ್ಲವಾದಲ್ಲಿ. ಇದ್ದೇ ಇರುವುದಲ್ಲ. ಸಂದಿಗ್ಧಗಳನ್ನು ಅಪಾಯಗಳನ್ನು ಎದುರಿಸುವುದು. ಜನ ಬೆಂಬಲವಂತೂ ನಿಮ್ಮ ತಂದೆಯವರಿಗೆ ಇಲ್ಲವೇ ಇಲ್ಲವೆಂಬುದು ಸತ್ಯ.

ಜಕ್ಕಲೆ : (ನೋವಿನಿಂದ) ದಯವಿಟ್ಟು ನಮ್ಮ ತಂದೆಯವರ ಪ್ರಾಣಕ್ಕೆ ಅಪಾಯವಾಗದಿರಲಿ.

ತೈಲಪ : ಜಕ್ಕಲೆ ಅವರು ನಿನಗೆ ತಂದೆಯಾದರೆ. ನನಗೆ ತಂದೆಯ ಸ್ಥಾನದಲ್ಲಿ ಇರುವ ಮಾವನಲ್ಲವೇ? ನಮಗ್ಯಾರಿಗೂ ಅವರ ಪ್ರಾಣ ಹರಣದ ಆಸೆಯಿಲ್ಲ.

ಜಕ್ಕಲೆ : ನನಗೀಗ ಸಮಾಧಾನವಾಯಿತು.

– – ವಿರಾಮ – –

ಕಾಳಲದೇವಿ : (ಸಿಟ್ಟಿನಿಂದ) ವಿನಯಾ.....................(ಹೂಂಕಾರ)

ವಿನಯಾ : (ಭಯದಿಂದ) ಅವ್ವೆ, ಕರೆದಿರೇನು? ಏನಾಗಬೇಕು ಅವ್ವೆ?

ಕಾಳಲ : ಏನಾಗಬೇಕಾದ್ದಿಲ್ಲ. ಏನಾಯಿತೆಂದು ಹೇಳಬೇಕಾದ-ವಳು ನೀನು. ಊರಿನ ಜನರ ಬಾಯಲ್ಲಿ ನಿನ್ನ ವಿಚಾರವಾಗಿ ಹೊಲಸು ಸುದ್ದಿಗಳು ಹೊರಳಾಡುತ್ತಿವೆ. ಬಲ್ಲೆಯೇನು?

ವಿನಯಾ : ಅಂತಹ ಹೊಲಸು ಕೆಲಸಗಳನ್ನೇನೂ ಮಾಡಿಲ್ಲ ಅವ್ವೆ.

ಕಾಳಲ : ಮಾಡುವುದು ಮಾಡಿ ಈಗ ಏನೂ ತಿಳಿಯದಂತೆ ನಟಿಸಬೇಡ...........ಆ ಕೃಷ್ಣನ ಸಂಗಾತ ನಿನ್ನ ಸರಸಗಳೇನು?

ವಿನಯಾ : (ಮೆಲ್ಲಗೆ) ಅವ್ವೆ ಸಿಟ್ಟಾಗದಿದ್ದಲ್ಲಿ ಎಲ್ಲವನ್ನೂ ಹೇಳಿ ಬಿಡುತ್ತೇನೆ.........ನಾನೂ ಕೃಷ್ಣರು ಪರಸ್ಪರ ಪ್ರೀತಿಸುತ್ತಿದ್ದೇವೆ. ಇದರಲ್ಲಿ ತಪ್ಪಿದೆಯೆಂದು ನನಗನಿಸುವುದಿಲ್ಲ.

ಕಾಳಲ : ನಿನಗನಿಸದಿರಬಹುದು. ನಿಮ್ಮ ತಂದೆಯವರಿಗೆ ಗೊತ್ತಾದ ಪಕ್ಷದಲ್ಲಿ ತಪ್ಪಿತಸ್ಥಳಾದ ನಿನ್ನನ್ನೇ ಅಲ್ಲ. ನನ್ನನ್ನೂ ಸೇರಿದಂತೆ ಸಿಗಿದು ಬಿಡುತ್ತಾರೆ.

ವಿನಯಾ : ಇದರಿಂದ ಅವರಿಗಾಗುವ ನಷ್ಟವಾದರೂ ಏನೂಂತ?

ಕಾಳಲ : ನಷ್ಟವೇ?..........ಅವರ ಯೋಚನೆಗಳು ತಲೆ ಕೆಳಗಾಗುವುದು ನಷ್ಟವಲ್ಲದೆ ಮತ್ತೇನು?

ವಿನಯಾ : ಅವರ ಯೋಚನೆ ಏನೆಂದು ತಿಳಿಯಬಹುದೆ?

ಕಾಳಲ : ನಿನ್ನನ್ನು ಚಕ್ರವರ್ತಿನಿ ಮಾಡಹೊರಟಿದ್ದಾರೆ.

ವಿನಯಾ : ಹಾಗಾದರೆ ಅಪ್ಪನ ಆಸೆಗೆ ಪೂರಕವೇ ಅಲ್ಲವೆ ನಮ್ಮಿಬ್ಬರ ಪ್ರೀತಿ?

ಕಾಳಲ : ಅಯ್ಯೋ ಹುಚ್ಚಿ. ನೀನು ಆಗಲಿರುವ ಚಕ್ರವರ್ತಿಯ ಬಗ್ಗೆ ಮಾತಾಡುತ್ತಿರುವೆ. ಅವರು ಆಗಿರುವ ಚಕ್ರವರ್ತಿ ಕುರಿತು ಆಲೋಚಿಸಿದ್ದಾರೆ. ಚಕ್ರವರ್ತಿಗಳೂ ಇದಕ್ಕೆ ಒಪ್ಪಿಗೆ ನೀಡಿದ್ದಾರಂತೆ.

ವಿನಯಾ : (ಬೆಚ್ಚಿ) ಏನು? ಅಪ್ಪನಿಗೆ ತಲೆ ಕೆಟ್ಟಿರಬೇಕು. ಚಕ್ರವರ್ತಿಗಳನ್ನು ಮದುವೆಯಾಗುವಷ್ಟು ಮುದುಕಿಯೇ ನಾನು?.......ಅವರಿಗೇಕೆ ಈ ಹುಚ್ಚು.

ಕಾಳಲ : ರಾಷ್ಟ್ರಕೂಟ ಸಿಂಹಾಸನಕ್ಕೆ ನಿನ್ನ ಮಗ ಚಕ್ರವರ್ತಿಯಾದರೆ ನಮ್ಮೆಲ್ಲರಿಗೂ ಒಳ್ಳೆಯದಲ್ಲವೇ?

ವಿನಯಾ : (ಅಳುತ್ತಾ) ಅವ್ವೆ. ನಿಮ್ಮ ಮಗಳ ವಿಚಾರವಾಗಿ ಅಪ್ಪ ಇಂತಹ ಆಲೋಚನೆ ಮಾಡಿದರೆ ನೀವು ಹೇಗೆ ಸುಮ್ಮನಿದ್ದಿರಿ? ನಿಮ್ಮೆದೆಯ ಮೇಲೆ ಕೈಯಿಟ್ಟುಕೊಂಡು ಹೇಳಿ........ನಿಮಗೆ ಈ ಮದುವೆ ಸಮ್ಮತವೆ?

ಕಾಳಲ : ನಿನ್ನ ಪ್ರಶ್ನೆಗೆ ನನ್ನಲ್ಲಿ ಉತ್ತರವಿಲ್ಲ. ಆದರೆ ಕೃಷ್ಣರು ಚಕ್ರವರ್ತಿಗಳಾಗುತ್ತಾರೆಂಬುದು ದೂರದ ಮಾತು. ಆದರೂ ಈಗ ನೀನು ಯಾವುದಕ್ಕೂ ಮುಂದುವರೆಯಬೇಡ. ಅವರಿವರ ಬಾಯಿ ತುತ್ತಾಗಿ ಮಾನಗೆಡಬೇಡ.

ವಿನಯಾ : ಅವ್ವೆ ನಿನ್ನ ಮಾತು ಮತ್ತು ಎಚ್ಚರಿಕೆಗಳು ಅರ್ಥವಾಗಲಿಲ್ಲ.....ನಾನು ಒಂದು ಮಾತು ಹೇಳುತ್ತೇನೆ. ಗಂಗರ ಮೇಲೆ ಯುದ್ಧಕ್ಕೆ ಹೊರಟಿರುವ ಚಕ್ರವರ್ತಿಗಳು ಗೆದ್ದು ಹಿಂತಿರುಗುತ್ತಾರೆಂಬ ಭರವಸೆ ಉಂಟೇನು?

ಕಾಳಲ : ನನಗೆ ಯುದ್ಧದ ಪರಿಸ್ಥಿತಿ ಗೊತ್ತಿಲ್ಲ. ಆದರೆ ನಿನ್ನ ತಂದೆಯವರು ಎಲ್ಲವನ್ನು ಬಲ್ಲವರು. ಪಾಂಡಿಗರ ನೆರವು ಬೇರೆ ಇದೆ. ಗೆದ್ದೇ ಬರುತ್ತಾರೆಂಬ ನಂಬಿಕೆ, ಹಾರೈಕೆಗಳು ನಮ್ಮದಾಗಿರಲಿ.

ವಿನಯಾ : ಅವ್ವೆ ಬೊಟ್ಟಿಗರ ಮಕ್ಕಳಾದ ಕೃಷ್ಣರಿಗೆ ನಿಮ್ಮೆಲ್ಲರಿಗಿಂತ ಹೆಚ್ಚಿನ ರಾಜಕೀಯ ಅರಿವಿದೆ. ಅವರ ಅರಿವಿಗೆ ಅನಿಸಿಕೆಗಳಿಗೆ ಬೆಲೆ ಕೊಡಬೇಕಲ್ಲವೆ?

ಕಾಳಲ : ಮಗು ನೀನು ಅವನ ಮಾತುಗಳಿಗೆ ಮರುಳಾಗಿರುವೆ. ಕೃಷ್ಣರಿಗೆ ಉನ್ನತ ಮಟ್ಟದ ರಾಜಕೀಯ ತಿಳಿವಳಿಕೆ ಇಲ್ಲ. ಅವರಿವರು ಹೇಳಿದ್ದಕ್ಕೆಲ್ಲಾ ತಲೆಯಾಡಿಸುತ್ತಾನೆ. ಸ್ವತಂತ್ರ ಆಲೋಚನೆಗಳೇ ಅವನಿಗಿಲ್ಲ. ಹಾಗಿದ್ದ ಪಕ್ಷದಲ್ಲಿ ಎಂದೋ ತಂದೆಯ ಸಿಂಹಾಸನವನ್ನು ತಾನು ಗಳಿಸಿಕೊಳ್ಳುತ್ತಿದ್ದ. ಕರ್ಕದೇವರಿಗೆ ಅವಕಾಶ ಮಾಡಿರುವುದೇ ಅವನ ಅಸಮರ್ಥತೆಗೆ ಸಾಕ್ಷಿಯಲ್ಲವೇ?

ವಿನಯಾ : ಅಪಾಯದ ಪರಿಸ್ಥಿತಿಗಳಿಂದ ರಕ್ಷಿಸಿಕೊಳ್ಳಲು ಹಾಗೆ ಮುಗ್ಧರಂತೆ ಕಾಣಿಸಿಕೊಳ್ಳುತ್ತಾರೆ.

ಕಾಳಲ : ಅಂದರೆ ಕೃಷ್ಣರು ಸಿಂಹಾಸನವನ್ನು ಪಡೆಯುತ್ತಾರೆಂಬುದು ನಿನ್ನ ನಂಬಿಕೆಯೇನು?

ವಿನಯಾ : ನನ್ನ ನಂಬಿಕೆ ಮತ್ತು ಅವರ ಮಾತು.

ಕಾಳಲ : ಹಾಗೆಂದು ಹೇಳಿದನೇ?

ವಿನಯಾ : ನೇರವಾಗಿ ಹೇಳಲಿಲ್ಲ. ಸಮಯಕ್ಕಾಗಿ ಕಾಯೋಣ ಎಂದರು......... 'ಅವರ ದೊಡ್ಡಪ್ಪ ಕನ್ನರ ದೇವ ಕೃಷ್ಣರು ಏರಿದ್ದ ಸಿಂಹಾಸನ ಏರಿ ಇಡೀ ರಾಷ್ಟ್ರವನ್ನು ಸುರಕ್ಷಿತವಾಗಿ ನಡೆಸಿಕೊಂಡು ಹೋಗುವ ಸಾಮರ್ಥ್ಯ, ಈಗ ಇರುವ ಯಾವ ರಾಷ್ಟ್ರಕೂಟ ರಾಜವಂಶೀಯನಲ್ಲೂ ಇಲ್ಲ ಎನ್ನುವುದು ಅವರ ಭಾವನೆ'.

ಕಾಳಲ : ಅಂದರೆ ತನಗೂ ಇಲ್ಲ ಎಂದು ಅವರೇ ಒಪ್ಪಿಕೊಂಡಂತೆ ಆಯಿತಲ್ಲ.

ವಿನಯಾ : ಸಿಂಹಾಸನದ ಆಸೆಯ ಪರಿಣಾಮಗಳ ಸ್ಪಷ್ಟ ಕಲ್ಪನೆ ಇರಿಸಿಕೊಂಡಿರುವ, ಅವರು ಅದಕ್ಕಾಗಿ ಎಂದೂ ಆಸೆ ಪಡಲಿಲ್ಲವಂತೆ. ಗಜ್ಜಿಂದ್ರರದೇ ಒತ್ತಾಯವಿತ್ತಾದರೂ ಈಗ ಗಬ್ಬೀಂದ್ರರೇ ಯಾವ ಸ್ಥಿತಿಯಲ್ಲಿದ್ದಾರೆಂಬುದು ಲೋಕಕ್ಕೇ ತಿಳಿದಿದೆ.

ಕಾಳಲ : ಓ! ಅದಕ್ಕೇ ಇರಬಹುದು ಗಬ್ಬೀಂದ್ರರನ್ನು ಪದಚ್ಯುತರನ್ನಾಗಿ ಮಾಡಿ ಬಂಧನದಲ್ಲಿ ಇರಿಸಲು ಆದೇಶಿಸಿದ್ದು. ಹೂಂ! ಪರವಾಗಿಲ್ಲ. ವೈರಿಯ ಬಲ ಮುರಿದು ತಮ್ಮ ಬಲ ಹೆಚ್ಚಿಸಿಕೊಳ್ಳುವ ಜಾಣರಾಗಿದ್ದಾರೆ ನಮ್ಮ ಚಕ್ರವರ್ತಿಗಳು.

ವಿನಯಾ : ಅವರು ತಮ್ಮನ್ನು ಜಾಣರೆಂದು ತಿಳಿದಿರಬಹುದು. ಕರ್ಕದೇವರನ್ನು ಉಪಾಯಾಂತರದಿಂದ ರಾಜಧಾನಿಯಿಂದ ದೂರ ಇರಿಸಿದ್ದರ ಹಿಂದೆ ಒಂದು ಆಶ್ಚರ್ಯಕರ ಸನ್ನಿವೇಶವನ್ನು ನಿರ್ಮಿಸುವ ಪ್ರಯತ್ನ ನಡೆಯಲಿದೆಯಂತೆ.

ಕಾಳಲ : ಏನದರ ಅರ್ಥ?

ವಿನಯಾ : ನಾನು ಕೇಳಿದರೆ. ಕಾದು ನೋಡಲಿ ಚಕ್ರವರ್ತಿ ಎನ್ನುತ್ತಾರೆ.

ಕಾಳಲ : ಇದೆಲ್ಲ ಏನೋ ನನಗೆ ಅರ್ಥವಾಗೊಲ್ಲ. ನೀನು ಮಾತ್ರ ಕೃಷ್ಣರನ್ನು ಸಂಧಿಸಬಾರದು. ನನ್ನ ಮೇಲಾಣೆ.

– – ವಿರಾಮ – –

ಚಟ್ಟಯ್ಯ : (ನಯ ವಿನಯಗಳಿಂದ) ಸನ್ನಿಧಾನದ ತುರ್ತುಕರೆಯ ಉದ್ದೇಶ ತಿಳಿದು ಬರಲಿಲ್ಲ.

ಕರ್ಕ : ಪಸಾಯಿತರೇ, ಪಂಡಿಗರ ಭಾವನೆಯಂತೆ ಗೆಲುವು ನಮ್ಮದೇ ಅಲ್ಲವೇ?

ಚಟ್ಟಯ್ಯ : ಹೌದು ಹಾಗೇ ಅನಿಸುತ್ತದೆ.

ಕರ್ಕದೇವ : ಹಾಗಾದರೆ ಕೂಡಲೇ ನಿಮ್ಮ ನಂಬಿಕಸ್ಥ ಊಳಿಗದವರೊಂದಿಗೆ ಬನವಾಸಿಗೆ ಬೇಹು ಕಳಿಸಿ ನಮ್ಮ ಪಾಣಿಗ್ರಹಣದ ವ್ಯವಸ್ಥೆಯನ್ನು ಆದಷ್ಟು ಬೇಗ ಮಾಡಿದರೆ ಒಳಿತಲ್ಲವೇ?

ಚಟ್ಟಯ್ಯ : ವಿವಾಹದ ವ್ಯವಸ್ಥೆ ಮಾಡುವುದೇನೋ ಒಳಿತೇ. ಆದರೆ ನಾಲ್ಕು ಜನರಿಂದ ಈ ಸಂದರ್ಭದಲ್ಲಿ ನಿಮ್ಮ ವಿವಾಹ ಕುರಿತು ಏನು ಪ್ರತಿಕ್ರಿಯೆ ಬರುವುದೋ ಹೇಳಲಾರೆ.

ಕರ್ಕದೇವ : ಈಗೇನಾದರೂ ಬೇಹು ಬಂದಿದೆಯೇನು?

ಚಟ್ಟಯ್ಯ : ಬೇಹೇನೂ ಇಲ್ಲ. ಆದರೆ ಸದ್ಯಕ್ಕೆ ಎಲ್ಲವೂ ಸುರಕ್ಷಿತವಾಗಿದೆ ಎಂಬುದು ಪಂಡಿಗರ ಅಭಿಪ್ರಾಯ.

ಕರ್ಕ : ದೇವರ ಕೃಪೆ ನಮ್ಮ ಮೇಲಿದೆ ಎಂದಾಯಿತು.

ಚಟ್ಟಯ್ಯ : ಸನ್ನಿಧಾನದ ದೂರಾಲೋಚನೆ ಎಂದು ಬೇಕಾದರೂ ಹೇಳಬಹುದು.

ಕರ್ಕ : ನನ್ನನ್ನೇಕೆ ಬಾಧ್ಯರನ್ನಾಗಿಸುತ್ತೀರಿ. ನನ್ನ ದೂರಾಲೋಚನೆಯಾದರೂ ಎಂತಹುದು?

ಚಟ್ಟಯ್ಯ : ಎಲ್ಲವೂ ಸ್ಪಷ್ಟವಾಗಿದೆಯಲ್ಲ. ಚಾಲುಕ್ಯ ವಿಕ್ರಮಾದಿತ್ಯರು ಪರಮಾರ ದಾಳಿಯಲ್ಲಿ ಸಹಕರಿಸಿದ್ದು, ಖೊಟ್ಟಿಗರು ಅನಿರೀಕ್ಷಿತ ಮರಣವನ್ನಪ್ಪಿದ್ದು, ಗಜ್ಜೇಂದ್ರರ ರಾಜದ್ರೋಹ ಬಯಲಿಗೆ ಬಂದದ್ದು. ತಮ್ಮ ಜಾಮಾತರ ಅಪರತಂತ್ರಮ ಎಲ್ಲವೂ ಒಟ್ಟಾರೆಯಾಗಿ ನಿಮಗೆ ಅನುಕೂಲಿಸಿದೆ.

ಕರ್ಕ : ಪಸಾಯತರೇ, ಗೆಲುವು ಇಷ್ಟೊಂದು ನಿಶ್ಚಯವಿರುವಾಗ ನಾವೇ ಬೇಗನೆ ಎಲ್ಲರಿಗಿಂತ ಮೊದಲೇ ಬನವಾಸಿಗೆ ಏಕೆ ಹೋಗಬಾರದು?

ಚಟ್ಟಯ್ಯ : ಆತುರಪಡಬಾರದು. ಪಂಡಿಗರೇ ಸನ್ನಿಧಾನಕ್ಕೆ ಸಮಯ ಬಂದಾಗ ಸೂಚಿಸುತ್ತಾರೆ.

ಸೇವಕ : (ಪ್ರವೇಶಿಸಿ) ಪ್ರಭು. ಸಾಮಂತ ಪಂಡಿಗರು ತಮ್ಮ ದರ್ಶನಾಪೇಕ್ಷಿಗಳಾಗಿದ್ದಾರೆ.

ಚಟ್ಟಯ್ಯ : ಹಾಗಾದರೆ ಸನ್ನಿಧಾನ ನನಗಿನ್ನು ಅಪ್ಪಣೆ ಕೊಡಿಸಬೇಕು.

ಕರ್ಕ : ನಿಮ್ಮನ್ನು ಮತ್ತೆ ಕಾಣುತ್ತೇನೆ. ಹೋಗಿ ಬನ್ನಿ........(ಸೇವಕನ ಕಡೆಗೆ) ಬರಹೇಳು.

ಪಂಡಿಗ : ಕ್ಷಮಿಸಬೇಕು. ಖಾಸಗಿ ಆಪ್ತಾಲೋಚನೆಗೆ ಭಂಗ ತಂದೆ. ಏನು ಮಾಡುವುದು ವಿಷಯ ಬಹಳ ಗಂಭೀರವೆನಿಸಿದ್ದರಿಂದ ತಡಮಾಡುವಂತಿರಲಿಲ್ಲ.

ಕರ್ಕ : ಅಂತಹ ಗಂಭೀರ ವಿಷಯವೇನಿದೆ. ಹೇಳಿ ಸಾಮಂತರೇ.

ಪಂಡಿಗ : ಯುದ್ಧದ ಪರಿಸ್ಥಿತಿಯಲ್ಲಿ ಸ್ವಲ್ಪ ಏರುಪೇರಾಗಿದೆ.

ಕರ್ಕ : ಅಂದರೆ?

ಪಂಡಿಗ : ಶತ್ರುಗಳಿಗೆ ಎಲ್ಲಿಂದಲೋ ಹೆಚ್ಚಿನ ಬಲ ದೊರಕಿದೆ. ಆದ್ದರಿಂದ ನಮ್ಮ ಮೇಲೆ ಬಹುಮುಖ ದಾಳಿಯ ಸಿದ್ಧತೆ ನಡೆಯುತ್ತಿದೆಯೆಂದು ನಮ್ಮ ಬೇಹು ತಿಳಿಸಿದೆ. ಆದರೆ ನಿಜಾಂಶ ಇನ್ನೂ ತಿಳಿದು ಬಂದಿಲ್ಲ........ ಅದರ ಜೊತೆಗೆ ಮತ್ತೊಂದು ಬೇಹೂ ಬಂದಿದೆ.

ಕರ್ಕದೇವ : ಮತ್ತೊಂದು ಬೇಹು?

ಪಂಡಿಗ : ಹೌದು. ಸನ್ನಿಧಾನಕ್ಕೆ ಗಾಭರಿಯಾಗಬಹುದು. ಮಾನ್ಯಖೇಟದಲ್ಲಿ ಸಿಂಹಾಸನಾರೋಹಣ ಸಿದ್ಧತೆ ನಡೆದಿದೆಯಂತೆ.

ಕರ್ಕದೇವ : (ಜೋರಾಗಿ ನಗುವನು)

ಪಂಡಿಗ : ನಿಮ್ಮ ನಗು ಅರ್ಥವಾಗಲಿಲ್ಲ.

ಕರ್ಕದೇವ : ಮತ್ತೆ? ಮಾನ್ಯಖೇಟದಲ್ಲಿ ಸಿಂಹಾಸನದ ಹಕ್ಕುದಾರರು ಯಾರಿದ್ದಾರೆ. ಇರುವವನೊಬ್ಬ ಅವನಿಂದಾಗಿಯೇ ಈಗ ನಡೆಯುತ್ತಿದೆ ಯುದ್ಧ ಅದೂ ನಮ್ಮ ಕಣ್ಣೆದುರಿಗೇ! ಇನ್ನುಳಿದವನು ಕೃಷ್ಣ ಅವನೊಬ್ಬ ಮುಕ್ಕಲು ಸ್ವಭಾವದವನು.

ಪಂಡಿಗ : ಸ್ವಭಾವ ಹೇಗಿದ್ದರೇನು? ಯಾರದಾದರೂ ಚಿತಾವಣೆಯಿಂದ ಧೈರ್ಯ ಬರಬಹುದಲ್ಲ!

ಕರ್ಕ : ಅದು ಸಾಧ್ಯವೇ ಇಲ್ಲ. ರಾಜಧಾನಿಯ ರಕ್ಷಣೆಗೆ ನಮ್ಮ ಅಳಿಯಂದಿರೇ ಟೊಂಕ ಕಟ್ಟಿ ನಿಂತಿರುವಾಗ ಯಾವೊಬ್ಬನೂ ಅತ್ತ ಸುಳಿಯುವ

ಸಾಹಸ ಮಾಡುವುದಿಲ್ಲ. ಅವರೇ ನಮ್ಮ ಪರವಾಗಿದ್ದ ಮೇಲೆ ಇಂತಹ ಸುದ್ದಿಗಳಿಗೆ ಬೇರುಗಳೇ ಇರುವುದಿಲ್ಲ.

ಪಂಡಿಗ : ಆಲೋಚನೆಯ ರೀತಿ ಸರಿಯಾದ್ದೇ! ಆದರೆ ಬೆಂಕಿ ಇಲ್ಲದೆ ಹೊಗೆ ಉಂಟೇ?

ಕರ್ಕದೇವ : ನೀವು ಹೇಳಿದಂತೆ ಹೊಗೆಯಾಳದಲ್ಲಿ ಇರಬಹುದಾದ ಬೆಂಕಿ ಯಾವ ರೀತಿಯದು. ರಾಷ್ಟ್ರಕೂಟ ಚಕ್ರವರ್ತಿ ಬದುಕಿರುವಾಗ ಸಿಂಹಾಸನಕ್ಕೆ ಕಣ್ಣು ಹಾಕುವ ಧೈರ್ಯ ಯಾರಿಗಿದೆ?

ಪಂಡಿಗ : ಯುದ್ಧ ಶಿಬಿರದಿಂದ ಬೇಹು ಹೊತ್ತು ಹೋದವರು ಹಿಂತಿರುಗಿ ಬಂದ ಮೇಲೆ ವಿಷಯ ತಿಳಿದೀತು. ಅವರು ಹೋಗಿ ಆಗಲೇ ಒಂದು ಪಕ್ಷವಾಯಿತು.

ಕರ್ಕ : ಬರಲಿ. ನಿಧಾನವಾಗಿ ಬರಲಿ. ನಮಗೆ ಯಾವುದೇ ಬಗೆಯ ಗಾಭರಿಯಿಲ್ಲ. ಶತ್ರುಗಳ ಕುತಂತ್ರವೇ ಇದಾಗಿರಬೇಕೆಂಬುದು ನನ್ನ ನಂಬಿಕೆ. ಆಧಾರವಿಲ್ಲದೆ ಸುದ್ದಿ ಹರಡುತ್ತಿರುವವರಲ್ಲೆ ಅವರಿಗೆ ತಕ್ಕ ಶಾಸ್ತಿಯಾಗಬೇಕು.

ಪಂಡಿಗ : ನಾಳೆಯೇ ಚಮೂಪರ. ಮಹಾಸಾಹಣೆಗಳ ಸಭೆಯೊಂದನ್ನು ಕರೆಯೋಣ. ಪರಿಸ್ಥಿತಿಯ ಬಗೆಗೆ ಚಿಂತಿಸೋಣ. ನಾಳೆ ನಡೆಯಬಹುದಾದ ಬಹುಮುಖಿ ದಾಳಿಯನ್ನು ಎದುರಿಸಲು ನಾನೇ ನಾಯಕತ್ವವನ್ನು ವಹಿಸಿಕೊಳ್ಳುತ್ತೇನೆ.

ಕರ್ಕದೇವ : ಮಿಕ್ಕ ಸೈನ್ಯವನ್ನು ಹೇಗೆ ಹಂಚಬೇಕೆಂಬುದನ್ನು ಯಾರ್‍ಯಾರು ನಮ್ಮ ಜೊತೆ ಇದ್ದಾರೆಂಬುದನ್ನು ಗಮನಿಸಿ.

ಪಂಡಿಗ : ನಾನೆಂದೆಂದೂ ನಿಮ್ಮ ಪರವೆಂಬುದನ್ನು ಮರೆಯದಿರಿ.

ಸೇವಕಿ : (ಪ್ರವೇಶಿಸಿ) ಬೇಹಿನವರು ಸನ್ನಿಧಾನವನ್ನು ಕಾಣಬೇಕಂತೆ.

ಕರ್ಕ : ಬೇಹಿನವನು ನನ್ನನ್ನು ಕಾಣಬೇಕೆಂದನೇ? ಇರಲಿ. ಬೇಗ ಬರ ಹೇಳು..................(ಪಂಡಿಗನಿಗೆ) ಪಂಡಿಗರೇ. ಬೇಹಿನ ವಿಷಯ ಏನೆಂದು ನೋಡಿ.

ಪಂಡಿಗ : (ಮೌನ) ನಾನು ಹೇಳಿದಾಗ ಸನ್ನಿಧಾನಕ್ಕೆ ನನ್ನ ಮಾತುಗಳಲ್ಲಿ ನಂಬಿಕೆ ಬರಲಿಲ್ಲ. ಈಗ ನೋಡಿ ನೇರವಾಗಿ ತೈಲಪರೇ ಈ ಕರೆಯೋಲೆ ಕಳಿಸಿದ್ದಾರೆ. ಅಶ್ವೀಜ ಶುದ್ಧ ದಶಮಿಯಂದು ಸಿಂಹಾಸನಾರೋಹಣವಂತೆ!

ಕರ್ಕ : ಹೂಂ!........ಒಂದು ಮಾಸಕ್ಕೂ ಹೆಚ್ಚು ಸಮಯವಿದೆ. ಪ್ರಸ್ತುತ ಇಂದ್ರನನ್ನು ಹೇಳ ಹೆಸರಿಲ್ಲದಂತೆ ಮಾಡಿ ಈ ಕಡೆ ತಿರುಗೋಣ.

ಪಂಡಿಗ : ಸನ್ನಿಧಾನದ ಒಪ್ಪಿಗೆ ಇಲ್ಲದೆ ಇಂತಹ ನಿರ್ಣಯವಾಗಿದೆ ಎಂದ ಮೇಲೆ, ನಿಮ್ಮ ಅನುಪಸ್ಥಿತಿಯಲ್ಲಿ ಏನೆಲ್ಲ ರಾಜಕಾರಣ ನಡೆದಿರಬಹುದು.

ಕರ್ಣ : ಯಾರ‍್ಯಾರು ಈ ಕಾರ್ಯಕ್ರಮಕ್ಕೆ ಹೋಗುತ್ತಾರಂತೆ?

ಪಂಡಿಗ : ಬೊಟ್ಟಿಗರ ಮಗ ಕೃಷ್ಣ. ಚಟ್ಟಯ್ಯನವರ ಕುಟುಂಬ ರಾಜಧಾನಿಗೆ ಹೋಗುತ್ತಿರುವುದಾಗಿ ತಿಳಿದುಬಂತು.

ಕರ್ಣ ಅಂದರೆ ಕೃಷ್ಣ ಈಗ ಪಕ್ಷಾಂತರಗೊಂಡಿದ್ದಾನೆ ಎಂದಾಯಿತು?

ಪಂಡಿಗ : ಅವರೊಬ್ಬರೇ ಅಲ್ಲ. ಚಟ್ಟಯ್ಯನವರ ಪತ್ನಿ, ಪುತ್ರಿಯರೂ ಹೋಗುತ್ತಿದ್ದಾರೆಂದ ಮೇಲೆ ತಮ್ಮ ಬೆಂಬಲವೂ ಇರಬೇಕೆಂದು ಭಾವಿಸಬಹುದಲ್ಲವೇ?

ಕರ್ಣ : ನನ್ನ ಒಪ್ಪಿಗೆಯಿಲ್ಲದೆ ಹೋಗುವುದು ಸಾಧ್ಯವೇ ಇಲ್ಲ. ಒಂದು ವೇಳೆ ಹಾಗಾಗಿದ್ದರೆ, ಯಾರದೋ ಪಿತೂರಿ ನಡೆದಿದೆ ಎಂದೇ ಅರ್ಥ.

ಪಂಡಿಗ : ತಮ್ಮ ಮತ್ತು ಪಸಾಯಿತ ಕುಟುಂಬದ ನಡುವೆ ಬಹಳ ಆತ್ಮೀಯತೆ ಇದೆ ಎಂದು ತಿಳಿದು ಬಂತು........ಸಂತೋಷ.........ಆದರೆ ನಮ್ಮ ಗಂಭೀರ ಚರ್ಚೆಯ ನಡುವೆ ನಾನು ಇನ್ನೊಂದನ್ನು ಹೇಳಲು ಮರೆತೆ.

ಕರ್ಣ : ಏನದು?

ಪಂಡಿಗ : ಕೃಷ್ಣರು ಮತ್ತು ಚಟ್ಟಯ್ಯನವರ ಪುತ್ರಿಯವರ ನಡುವೆ ಸಲುಗೆ ಅತಿಯಾಗಿದೆ ಎಂದು ಕೇಳಿ ಬರುತ್ತಿದೆ.

ಕರ್ಣ : ಏನೆಂದಿರಿ?

ಪಂಡಿಗ : ಕಾತರಕ್ಕೆ ಕಾರಣವಿಲ್ಲ ಬಿಡಿ. ವಯಸ್ಸು ಅಂತಹುದು. ಈ ಪ್ರಾಯದಲ್ಲಿ ಗಂಡು ಹೆಣ್ಣಿನ ಆಕರ್ಷಣೆ ಸಹಜವಲ್ಲವೇ?

ಕರ್ಣ : ಹೋಗಲಿ ಬಿಡಿ. ಇಂತಹ ಹೊತ್ತಿನಲ್ಲಿ ಅವುಗಳ ಚರ್ಚೆ ಬೇಡ. ನಾಳೆ ನಾವು ಸೇರುವ ಸಭೆಯಲ್ಲಿ ಪರಿಸ್ಥಿತಿಯನ್ನು ನೋಡಿ ನಿರ್ಣಯಗಳನ್ನು ಕೊಳ್ಳೋಣ.

ಪಂಡಿಗ : ಹಾಗೇ ಆಗಲಿ. ಆದರೆ ಈಗ ಪಸಾಯಿತರನ್ನು ಬನವಾಸಿಗೆ ಕಳಿಸಿಕೊಡುವುದು ಒಳ್ಳೆಯದಲ್ಲವೇ?

ಕರ್ಣ : ಇಲ್ಲೇ ಇರುವರಲ್ಲ. ಅವರನ್ನೇ ಒಂದು ಮಾತು ಕೇಳಿಬಿಡಿ.

ಪಂಡಿಗ : ಏನು ಪಸಾಯಿತರೇ. ನಮ್ಮ ಸಲಹೆಗೆ ನಿಮ್ಮ ಉತ್ತರವೇನು.

ಚಟ್ಟಯ್ಯ : (ಅನುಮಾನದಿಂದ) ಅದು................ಅದು........

ಪಂಡಿಗ : ಏಕೆ ಅನುಮಾನಿಸುತ್ತಿದ್ದೀರಿ?

ಕರ್ಕದೇವ : ಸುಮ್ಮನಿದ್ದೀರೇಕೆ?...........ನನ್ನನ್ನು ಕೇಳಿದರೆ ಪಂಡಿಗರ ಸಲಹೆ ಸೂಕ್ತವಾಗಿದೆ. ನಿಮ್ಮ ಕುಟುಂಬದವರನ್ನು ಅನ್ಯರ ಜವಾಬ್ದಾರಿಯಲ್ಲಿ ಇರಿಸುವುದು ಸರಿಯಲ್ಲವೇನೋ ಎನಿಸುತ್ತದೆ.

ಚಟ್ಟಯ್ಯ : ಸನ್ನಿಧಾನಕ್ಕೆ ನಮ್ಮಿಂದ ಬೇಸರವಾಯಿತೇನೋ.

ಕರ್ಕ : ಛೆ! ಛೆ! ಬೇಸರವೆಂದೇನೂ ಇಲ್ಲ.

ಚಟ್ಟಯ್ಯ : ಸನ್ನಿಧಾನದ ಕ್ಷೇಮದ ದೃಷ್ಟಿಯಿಂದ ನಾವು ಸ್ವಲ್ಪ ಹಿಂಜರಿಯುತ್ತಿದ್ದೇವೆ. ಅಷ್ಟೆ. ನೀವು ನಮ್ಮನ್ನು ಹೋಗಲೇಬೇಕೆಂದು ಆದೇಶಿಸಿದರೆ ನಮಗೆ ಅನ್ಯ ಮಾರ್ಗವಿಲ್ಲ.

ಕರ್ಕ : ಹಾಗಾದರೆ ಆದಷ್ಟು ಬೇಗನೆ ಹೊರಡಿ.

ಚಟ್ಟಯ್ಯ : ಅಪ್ಪಣೆ. (ಹೋಗುವನು)

ಕರ್ಕ : ಪಂಡಿಗರೇ ಮಿಕ್ಕ ವಿಷಯಗಳು ಆದೇಶದಂತೆ ನಡೆಯಲಿ.

ಪಂಡಿಗ : ಸನ್ನಿಧಾನವು ಆತುರಪಡುವಂತಿದೆ.........ಮತ್ತೊಮ್ಮೆ ಆಲೋಚಿಸಿ ನೋಡಿ.............ಯಾಕೆಂದರೆ ಪರಿಣಾಮಗಳು ಈ ಬಾರಿ ಕ್ರೂರವಾಗಿದ್ದಾವು.

ಕರ್ಕ : ಇಲ್ಲ ಪಂಡಿಗರೆ. ಈ ಬಾರಿ ನಾನು ನಿಮ್ಮ ಮಾತುಗಳನ್ನು ಮೀರಿ ನಡೆಯಲು ನಿರ್ಧರಿಸಿದ್ದೇನೆ. ಕ್ಷಮಿಸಿ. ರಾಜಕೀಯ ಕುತಂತ್ರಗಳಿಗೆ ಬಲಿಪಶುವಾಗಿ ಸಾಯುವುದಕ್ಕಿಂತ ಶೌರ್ಯ ಸಾಹಸಗಳನ್ನು ಮೆರೆದು ವೀರ ಮರಣವನ್ನು ಸ್ವೀಕರಿಸುವುದೇ ಮೇಲು.

ಪಂಡಿಗ : ಶತ್ರುಗಳು ಬಹಳ ಪ್ರಬಲರು. ಹಲವು ಮುಖದ ದಾಳಿ ಇದಾಗಿದೆ.

ಕರ್ಕ : ಏನಾದರಾಗಲಿ. ದೇವರಿಟ್ಟಂತೆ ನಡೆಯುವುದು. ನೀವು ನಿಶ್ಚಿಂತೆಯಿಂದಿರಿ.

ಪಂಡಿಗ : ತಮ್ಮ ಚಿತ್ತ. ಜಯವಾಗಲೆಂದು ಹಾರ್ದಿಕವಾಗಿ ಕೋರುತ್ತೇನೆ.

೦೦

# ದೃಶ್ಯ - ೮

**ನಿರೂಪಕ** : ಅವರವರಿಗೆ ಅವರವರದೇ ಚಿಂತೆ. ಕರ್ಕರಿಗೆ ವಿವಾಹದ ಚಿಂತೆ. ವಿನಯಳಿಗೆ ಕೃಷ್ಣರ ಚಿಂತೆ. ಚಟ್ಟಯ್ಯನಿಗೆ ಆಡಳಿತಾಧಿಕಾರಿಯಾಗುವ ಚಿಂತೆ; ಮಾವನಾಗುವ ಚಿಂತೆ...... ಎಷ್ಟೇ ಚಿಂತೆಗಳಿದ್ದರೂ ಕಾಲಚಕ್ರ ಅನ್ನುವುದು ಇದೆಯಲ್ಲ ಅದರ ಪರಿಭ್ರಮಣ ದಿಕ್ಕುಗಳನ್ನು ಬದಲಾಯಿಸಿ ಬಿಡುತ್ತದೆ. ಆದರೂ ಪರಿಭ್ರಮಣದಿಂದ ತಾವು ಬಂದು ನಿಂತ ಕೋನದಿಂದಲೇ ಕೆಲಸ ಸಾಧಿಸಿಕೊಳ್ಳುವ ಮನುಷ್ಯನ ಸ್ವಭಾವದ ವೈಚಿತ್ರ್ಯವೇ ವೈಚಿತ್ರ್ಯ! ಕರ್ಕರಿಂದ ನಿರಾಶೆಗೊಂಡ ಚಟ್ಟಯ್ಯ. ಚಕ್ರವರ್ತಿ ಆಗಲಿರುವ ತೈಲಪರ ಕಡೆಗೆ ನಿಷ್ಠೆಯನ್ನು ತಿರುಗಿಸಿದ್ದಾರೆ.

– – ವಿರಾಮ – –

**ತೈಲಪ** : ಹೂಂ! ಕುಳಿತುಕೊಳ್ಳಿ, ಬಂದ ವಿಷಯವೇನೆಂದು ತಿಳಿಯಲಿಲ್ಲ.

**ಚಟ್ಟಯ್ಯ** : ನಾನು ಬಂದದ್ದು ತಮಗೆ ಆಶ್ಚರ್ಯವೆನಿಸಿರಬೇಕು.

**ತೈಲಪ** : ಆಶ್ಚರ್ಯವೇಕೆ? ಬಂದೇ ಬರುತ್ತೀರೆಂದು ನಿರೀಕ್ಷಿಸುತ್ತಿರುವಾಗ?

**ಚಟ್ಟಯ್ಯ** : ಅಂದರೆ ನಾನು ಬರುತ್ತಿರುವುದು ತಮಗೆ.......(ಅನುಮಾನ)

**ತೈಲಪ** : ಪಂಡಿಗರಿಂದ ಸುದ್ದಿ ಬಂತು.

**ಚಟ್ಟಯ್ಯ** : ಕರ್ಕದೇವರಿಗೆ ಅಸಮಾಧಾನವಾಗಿತ್ತು. ನನ್ನ ಬಗ್ಗೆ ಕೂಡಾ ಸ್ವಲ್ಪ ಅಸಮಾಧಾನದಿಂದಲೇ ಇದ್ದರು.

**ತೈಲಪ** : ನಿಮ್ಮ ಬಗ್ಗೆ ಅಸಮಾಧಾನವಿದೆಯೆಂದು ಹೇಗೆ ಗ್ರಹಿಸಿದಿರಿ?

**ಚಟ್ಟಯ್ಯ** : ಅವರ ಧ್ವನಿಯಿಂದ ಗುರುತಿಸಬಲ್ಲವನಾಗಿದ್ದ.

**ತೈಲಪ** : ಪಾಪ, ನಿಮ್ಮ ಸಲಹೆಯೇ ಅವರ ಅಸಮಾಧಾನಕ್ಕೆ ಕಾರಣವಾಯಿತು.

**ಚಟ್ಟಯ್ಯ** : ನನ್ನ ಸಲಹೆಯೇ?

ತೈಲಪ : ಹೌದು. ತಾವೇನೋ ತಮ್ಮ ಮಗಳನ್ನು ಧಾರೆಯರೆದು ಕೊಡುವುದಾಗಿ ಹೇಳಿದ್ದರಂತೆ. ಆದರೆ ಅದು ಕೈಗೂಡಲಿಲ್ಲವಾಗಿ ಅವರು ಸಿಟ್ಟುಗೊಂಡಿದ್ದಾರೆ.......... ನಿಮಗೂ ಬೇಸರವಾಗಿರಬೇಕಲ್ಲ, ನಿಮ್ಮ ಮಗಳು ನಿಮ್ಮಾಸೆಯ ಮೇಲೆ ತಣ್ಣೀರು ಎರಚಿದಳಲ್ಲ.

ಚಟ್ಟಯ್ಯ : ನನ್ನಾಸೆಯ ಸುಳಿವನ್ನು ನಾನು ಕೊಟ್ಟಿರಲಿಲ್ಲ. ಕೊಟ್ಟಿದ್ದರೆ ನನ್ನ ಕತೆ ಮುಗಿಯುತ್ತಿತ್ತು.

ತೈಲಪ : ಹೋಗಲಿ ಬಿಡಿ. ಅದನ್ನು ಚಿಂತಿಸಿ ಫಲವಿಲ್ಲ ಈಗ.

ಚಟ್ಟಯ್ಯ : ಹಾಗೆಂದುಕೊಂಡು ಸುಮ್ಮನಿರಲು ಸಾಧ್ಯವೇ? ನಿಜವಾಗಿಯೂ ನನಗೆ ಇತ್ತೀಚಿನ ರಾಜಕೀಯ ಸ್ಥಿತ್ಯಂತರಗಳಿಗೆ ಕಾರಣವೇನೆಂಬುದು ತಿಳಿದಿರಲಿಲ್ಲ.

ತೈಲಪ : ತಮ್ಮ ನಿರೀಕ್ಷೆಗೆ ವ್ಯತಿರಿಕ್ತವಾಗಿ ಏನಾದರೂ ಜರುಗಿದೆಯೇನು?

ಚಟ್ಟಯ್ಯ : ತಾವು ತಪ್ಪು ತಿಳಿಯಬಾರದು. ತಮ್ಮ ಸಿಂಹಾಸನಾರೋಹಣ ನನ್ನ ಕಲ್ಪನೆಗೇ ಎಟುಕದ್ದಾಗಿದೆ.

ತೈಲಪ : ನಿಮ್ಮ ಕಲ್ಪನೆಯ ಮಿತಿಯೊಳಗೆ ಬರುವುದು ಸಾಧ್ಯವೂ ಇಲ್ಲ.

ಚಟ್ಟಯ್ಯ : ಅದೇ ನನಗೆ ಅರ್ಥವಾಗುತ್ತಿಲ್ಲ. ಪಸಾಯತನಾದ ನನಗೆ ಸಹಜವಾಗಿ ತೀರ ಆಂತರಿಕ ವಿಷಯಗಳೂ ತಿಳಿದು ಬರಬೇಕು. ಮತ್ತು ತಿಳಿದು ಬರುತ್ತವೆ.

ತೈಲಪ : ಹಾಗೆ ಭಾವಿಸಲು ಕಾರಣ?

ಚಟ್ಟಯ್ಯ : ಈ ಕೆಲಸಕ್ಕೆ ತೀರಾ ವಿಶ್ವಾಸಾರ್ಹನಾದ ಸಮರ್ಥನಾದ ವ್ಯಕ್ತಿಯನ್ನೇ ನೇಮಿಸಲಾಗುತ್ತದೆ.

ತೈಲಪ : ಅಂದರೆ ಕರ್ಕದೇವರು ನಿಮ್ಮನ್ನು ಸಂಪೂರ್ಣವಾಗಿ ನಂಬಿರಲಿಲ್ಲವೆಂದೇ?

ಚಟ್ಟಯ್ಯ : ಹಾಗೆ ಹೇಳಿದರೆ ನಾನು ಅವರಿಗೆ ದ್ರೋಹ ಬಗೆದಂತೆಯೇ!

ತೈಲಪ : ಮತ್ತೇಕೆ ಅವರಿಗೆ ತಮ್ಮ ಬಗ್ಗೆ ಅಸಮಾಧಾನವಿದೆಯೆಂದು ಭಾವಿಸುತ್ತೀರಿ.

ಚಟ್ಟಯ್ಯ : ಅದೇ ನನ್ನ ಮಗಳ ವಿಚಾರವಾಗಿ ಪ್ರಚಾರವಾಗಿರುವ ಸುದ್ದಿಯೊಂದು ಕಡೆಯಾದರೆ ಸಿಂಹಾಸನಾರೋಹಣದ ಸುದ್ದಿಯೊಂದು ಸೇರಿ ಮನಸ್ಸು ಕಸಿವಿಸಿಯಾಗಿರಬೇಕು. ಅದಕ್ಕೇ ಈ ಬಗೆಯ ಸಿಟ್ಟು, ಸೆಡವು.

ತೈಲಪ : ನಿಮ್ಮ ಮಗಳ ನಡತೆಯ ಬಗ್ಗೆ ಇಂತಹ ಮಾತು ಕೇಳಿ ನಿಮಗೆ ಮಾತ್ರ ಏನೂ ಅನಿಸಲಿಲ್ಲವೇ?

**ಚಟ್ಟಯ್ಯ** : ನನಗೂ ಅಸಮಾಧಾನವಾಯಿತು. ಆದರೆ ಏನು ಮಾಡುವ ಹಾಗಿತ್ತು. ಈ ವದಂತಿಗಳಲ್ಲಿ ಎಷ್ಟು ನಿಜ ಎಷ್ಟು ಸುಳ್ಳು. ನೋಡಿ ಬರೋಣವೆಂದು ಬೆಳಗವತ್ತಿಯಿಂದ ಬನವಾಸಿಗೆ ಹೋದೆ.

**ತೈಲಪ** : ಓ, ಬನವಾಸಿಗೆ ಹೋಗಿ ಬಂದಿರಾ? ಅದಕ್ಕೆ ಇಲ್ಲಿಗೆ ಬರಲು ತಡವಾಗಿದೆ. ನೀವು ಬರುವ ಬೇಹು ಪಂಡಿಗರಿಂದ ಬಂದಿತ್ತು. ಆದರೆ ಬೇಹು ಬಂದರೂ ನೀವು ಬರಲಿಲ್ಲ. ಅದಕ್ಕೇ ಸ್ವಲ್ಪ ಆತಂಕವಾಗಿತ್ತು.

**ಚಟ್ಟಯ್ಯ** : ಯುದ್ಧದ ಬಗೆಗಾಗಲೀ. ಅಥವಾ ಬೇರೆ ಯಾವ ವಿಚಾರಕ್ಕೆ ಸಂಬಂಧಿಸಿದ್ದಾಗಲೀ ಕುರಿತು ಬೇಹು ಬಂದಿದೆಯೇನು?

**ತೈಲಪ** : ಇಲ್ಲವಲ್ಲ. ಬೇರೆ ಯಾವ ವಿಚಾರಕ್ಕೆ ಸಂಬಂಧಿಸಿದ್ದು ಬಂದಿರಲ್ಲ......... ಏನದು?

**ಚಟ್ಟಯ್ಯ** : ನೋಡಿ. ನಾನು ಮಾನ್ಯಖೇಟದ ಈ ಸಿಂಹಾಸನಕ್ಕೆ ತುಂಬ ನಿಷ್ಠೆಯುಳ್ಳವನು. ನಾನು ಏನಾದರೂ ಹೇಳಿದರೆ ಅಪಾರ್ಥಗಳನ್ನು ಕಲ್ಪಿಸಬಾರದು. ನೀವು ಸಿಂಹಾಸನಾರೋಹಣ ಮಾಡಿದ ವಿಷಯ ಯುದ್ಧ ಶಿಬಿರದಲ್ಲಿಯೇ ತಿಳಿಯಿತು. ಆ ಕ್ಷಣದಿಂದ ನನ್ನಲ್ಲಿ ನೂರಾರು ಪ್ರಶ್ನೆಗಳು ಎದ್ದಿವೆ.

**ತೈಲಪ** : ಹೀಗೆ ಪ್ರಶ್ನೆಗಳು ಏಳುವುದು ಇಂತಹ ಪರಿಸ್ಥಿತಿಯಲ್ಲಿ ಸಹಜವೇ......... ಕರ್ಕರಿಗೆ ಸುದ್ದಿ ತಿಳಿದಿರಬೇಕಲ್ಲ.

**ಚಟ್ಟಯ್ಯ** : ತಿಳಿಯಿತು. ಅಷ್ಟೇ ಅಲ್ಲ. ಸುದ್ದಿ ತಿಳಿದ ಮರುಕ್ಷಣವೇ ಸೈನ್ಯದ ಮುಂದಾಳ್ತನವನ್ನು ತಮಗೇ ಘೋಷಿಸಿಕೊಂಡು ಬಿಟ್ಟರು. ಈ ಘೋಷಣೆ ಸೈನಿಕರನ್ನು ಹುರಿದುಂಬಿಸುವ ಘೋಷಣೆಯಾಗಿರಲಿಲ್ಲ; ಆತ್ಮಾರ್ಪಣೆಯ ಘೋಷಣೆಯಾಗಿತ್ತು.

**ಚಟ್ಟಯ್ಯ** : ಆದರೆ ಈಗಿನ ಪರಿಸ್ಥಿತಿ ನೋಡಿದರೆ, ಹೀಗೆ ಆದದ್ದೇ ಒಳ್ಳೆಯದೆನಿಸುತ್ತದೆ.

**ತೈಲಪ** : ಹೇಗೆಂದು ನನಗೆ ಸ್ಪಷ್ಟವಾಗಲಿಲ್ಲ.

**ಚಟ್ಟಯ್ಯ** : ಅದೇ ನಿಮ್ಮ ಸಿಂಹಾಸನಾರೋಹಣ ವಿಷಯ. ಎರಡು ಶತಮಾನಕ್ಕೂ ಮೀರಿ ಸಾಮಂತರಾಗಿ ಬಾಳಿದ ನಿಮಗೆ ಈ ಕೆಲಸ ಹೇಗೆ ಸಾಧ್ಯವಾಯಿತೆಂಬುದು ನನ್ನ ಕಲ್ಪನೆಗೂ ಮೀರಿದ ವಿಷಯವೆನಿಸುತ್ತದೆ.

**ತೈಲಪ** : ಯಾಕೆ ಸಾಮಂತರಾಗಿ ಬಾಳಿದವರು ಚಕ್ರವರ್ತಿಗಳಾಗಬಾರದೇನು?

**ಚಟ್ಟಯ್ಯ** : ಆಗಬಹುದು. ನೇರವಾಗಿ ಮುಖಾಮುಖಿಯಾಗಿ ಯುದ್ಧ ಮಾಡಿ ತಮ್ಮ ಸ್ವ ಸಾಮರ್ಥ್ಯದಿಂದ ಹಾಗೆ ಮಾಡಿದ್ದರೆ ಒಪ್ಪಿಕೊಳ್ಳುತ್ತಿದ್ದೆ.

ತೈಲಪ : ಅಂದರೆ ಈಗ ಬೇರೆಯವರ ಸಾಮರ್ಥ್ಯದಿಂದ ಆಗಿದೆಯೆಂದೇ ನಿಮ್ಮ ಭಾವನೆ?

ಚಟ್ಟಯ್ಯ : ನೀವು ಚಕ್ರವರ್ತಿಗಳ ಅಳಿಯಂದಿರಾಗಿ ಅವರಿಂದ ಈ ರೀತಿ ಕಸಿದುಕೊಳ್ಳುವುದು............

ತೈಲಪ : ನೀವು ಏನು ಹೇಳಬೇಕೆಂದಿದ್ದೀರಿ ಎಂಬುದು ನಮಗೆ ಗೊತ್ತು. ನಾವು ಇದನ್ನು ಮಾಡಿದ್ದು ಅವರ ಪ್ರಾಣ ರಕ್ಷಣೆಯ ಉದ್ದೇಶದಿಂದ.

ಚಟ್ಟಯ್ಯ : ಸಿಂಹಾಸನ ಕಸಿದುಕೊಂಡು ಪ್ರಾಣ ರಕ್ಷಣೆಯ ನೆಪ ಹೇಳುವುದು ಯಾವ ನ್ಯಾಯ?

ತೈಲಪ : ಚಟ್ಟಯ್ಯನವರೇ ನಿಮಗೆ ಈ ಸಿಂಹಾಸನದ ಇತಿಹಾಸ ಗೊತ್ತಿಲ್ಲ. ಮೂಲತಃ ಈ ಸಿಂಹಾಸನ ನಮ್ಮದು.

ಚಟ್ಟಯ್ಯ : ನಿಮ್ಮದಾದರೆ ಇಷ್ಟು ವರ್ಷ ನೀವೇಕೆ ಅದನ್ನು ಬಿಟ್ಟು ಕೊಟ್ಟಿರಿ?

ತೈಲಪ : ಬಲಕುಂದಿ ಯಾವುದೋ ಒಂದು ಕೆಟ್ಟ ಗಳಿಗೆಯಲ್ಲಿ ರಾಷ್ಟ್ರಕೂಟರ ಪಾಲಾಯಿತು., ಒಳ್ಳೆ ಆಡಳಿತ ನಡೆಸುತ್ತ ಜನಾನುರಾಗಿಯಾಗಿ ರಾಜ್ಯವಾಳುತ್ತಿದ್ದ ಚಕ್ರವರ್ತಿಗಳು ಇರುವವರೆಗೆ ಸುಮ್ಮನಿದ್ದವು. ಈಗ ಜನತೆಗೆ ಅನ್ಯಾಯ, ದುರಾಡಳಿತ ಹೆಚ್ಚಾಗಿದ್ದರಿಂದ ಜನತೆಯ ರಕ್ಷಣೆಯ ಕರ್ತವ್ಯವನ್ನು ವಹಿಸಿಕೊಂಡಿದ್ದೇವೆ.

ಚಟ್ಟಯ್ಯ : ಅದಕ್ಕೆಂದು ಹೆಣ್ಣು ಕೊಟ್ಟ ಮಾವಂದಿರಿಗೇ ಮೋಸ ಮಾಡಬಹುದೇ?

ತೈಲಪ : ಹೆಣ್ಣು ಕೊಟ್ಟದ್ದು ನಿಜವೆ. ಆದರೆ ಈ ಮನೆ ತುಂಬಿಸುವ ಯೋಚನೆಯ ಹಿಂದಿನ ಗುರಿಯೇನಿತ್ತು ಗೊತ್ತೇ?

ಚಟ್ಟಯ್ಯ : ಅದರ ಹಿಂದೆ ಗುರಿಯಾಗಲೀ, ಗುಟ್ಟಾಗಲೀ ಇದ್ದಂತೆ ನನಗನಿಸುವುದಿಲ್ಲ.

ತೈಲಪ : ಹೋಗಲಿ. ನಿಮ್ಮ ಪುತ್ರಿಯ ಪಾಣಿ ಗ್ರಹಣದ ಯೋಚನೆಯ ಹಿಂದಿನ ಉದ್ದೇಶವಾದರೂ ಗೊತ್ತೇ?................ ಗೊತ್ತಿದ್ದರೂ ಹೇಳಲಾರಿರಿ.....,......... ನಾನು ಹೇಳುತ್ತೇನೆ. ಈ ಸಿಂಹಾಸನಕ್ಕೆ ಹಕ್ಕುದಾರನನ್ನು ಸೃಷ್ಟಿಸಬೇಕೆಂದಿರಬಹುದಲ್ಲವೇ?

ಚಟ್ಟಯ್ಯ : ಇರಬಹುದು. ತನ್ನದು ತನ್ನ ಮಕ್ಕಳಿಗೇ ಎಂದು ಯೋಚಿಸುವುದರಲ್ಲಿ ತಪ್ಪೇನಿದೆ?

ತೈಲಪ : ತಪ್ಪಿಲ್ಲ. ಆದರೆ ಮದುವೆಯಾಗುವ ಹೆಣ್ಣು ನಿಮ್ಮ ಮಗಳಲ್ಲವಾದರೆ ನಿಮಗೇನನ್ನಿಸುತ್ತದೆ?...............ಹೇಳಿ,...............ಮೌನದಿಂದೇಕೆ ಇರುವಿರಿ....... ಈಗ ನಿಮ್ಮ ಮುಂದೆ ಕರ್ಕರ ಪರವಾಗಿ

ಕಾಣಿಸಿಕೊಳ್ಳುತ್ತಿರುವ ಪಂಡಿಗರು ಅವರ ಪತ್ನಿಯವರು ಚಾಲುಕ್ಯ ಮನೆತನದವರು ನ್ಯಾಯ ಪಕ್ಷಪಾತಿಗಳು.

**ಚಟ್ಟಯ್ಯ** : ಅಂದರೆ...? ಅವರು..............ರಾಷ್ಟ್ರಕೂಟ ವಿರೋಧಿಗಳು ಎಂದಾಯಿತು.

**ತೈಲಪ** : ಸ್ವಾರ್ಥದಿಂದ ರಾಷ್ಟ್ರಕೂಟರು ನ್ಯಾಯ ಬಾಹಿರರಾಗಿ ನಡೆದುಕೊಂಡರು. ಅದಕ್ಕಾಗಿಯೇ ಅವರು ಹೊರಗೆ ಉಳಿದರು. ಕನ್ನರದೇವ ಕೃಷ್ಣರ ಮಗ ಗೋವಿಂದ ತೀರಕೊಂಡರೆ, ಮೊಮ್ಮಗ ಇಂದ್ರನಿಗೆ ತಾನೇ ಸಿಂಹಾಸನ ಹೋಗಬೇಕು.

**ಚಟ್ಟಯ್ಯ** : ಹೌದು.

**ತೈಲಪ** : ಆದರೆ ಆದದ್ದೇನು? ದುರ್ಬುದ್ಧಿಯ ಗಜ್ಜೇಂದ್ರರ ಚಿತಾವಣೆಗಳಿಂದ ಖೊಟ್ಟಿಗರು ಅನ್ಯಾಯವಾಗಿ ಸಿಂಹಾಸನವನ್ನು ಆಕ್ರಮಿಸಿದರು......... ಅದನ್ನು ತಪ್ಪಿಸಿ ಚಾಲುಕ್ಯ ವಂಶದವರಾದ ನಾವು ನಮ್ಮ ಕಳೆದು ಹೋದ ಸಿಂಹಾಸನವನ್ನು ಮತ್ತೆ ಗಳಿಸಿಕೊಂಡದ್ದು ತಪ್ಪೇನು.

**ಚಟ್ಟಯ್ಯ** : ಹಾಗಿದ್ದ ಮೇಲೆ ಪಂಡಿಗರು ಕರ್ಕರ ರಕ್ಷಾಕವಚದಂತೆ ಬೆಳಗವತ್ತಿಯಲ್ಲೇ ಉಳಿದದ್ದೇಕೆ?

**ತೈಲಪ** : ಸ್ವಾರ್ಥದ ಒತ್ತಡದಿಂದ ತಾವು ಕನಸು ಕಂಡಿದ್ದ ವಿವಾಹ ತಪ್ಪಿ ಹೋದುದರ ಮಾನಸಿಕ ಆಘಾತದಿಂದ ತಾವೇ ಅಪಾಯಕ್ಕೆ ತಮ್ಮನ್ನು ಒಪ್ಪಿಕೊಂಡಿದ್ದಾರೆಂದೆನಿಸಿ. ಅವರನ್ನು ರಕ್ಷಿಸುವ ಹೊಣೆ ಹೊತ್ತು ಪಂಡಿಗರು ಅಲ್ಲೇ ಉಳಿದಿದ್ದಾರೆ.

**ಚಟ್ಟಯ್ಯ** : ರಕ್ಷಿಸಿ ಇಲ್ಲಿಗೆ ಬರುತ್ತಾರೆಂಬ ನಂಬಿಕೆ ಇದೆಯೇನು?

**ತೈಲಪ** : ಗೆಲುವು ಮತ್ತು ಸುರಕ್ಷಿತತೆಯೊಂದಿಗೆ ಹಿಂತಿರುಗುತ್ತಾರೆಂದೇ ನನ್ನ ಭಾವನೆ. ಇನ್ನೂ ಹೆಚ್ಚಿನ ವಿವರಗಳು ಬೇಕಿದ್ದರೆ, ನಿಮ್ಮ ಮಗಳನ್ನೇ ಕೇಳಿ.

**ಚಟ್ಟಯ್ಯ** : ನಮ್ಮ ಮಗಳಿಗೆ ತಿಳಿಯುವುದು ಹೇಗೆ ಸಾಧ್ಯ.

**ತೈಲಪ** : ನಿಮ್ಮ ಮಗಳನ್ನು ಪ್ರೀತಿಸುತ್ತಿರುವ ಮತ್ತು ನಮ್ಮ ವಿಚಾರಗಳಿಗೆ ಸಹಸ್ಪಂದನ ಹೊಂದಿರುವ ಕೃಷ್ಣರಿಗೆ ಎಲ್ಲವೂ ಗೊತ್ತು. ಆದ್ದರಿಂದ ಅವರು ಮತ್ತು ಪಂಡಿಗರ ಪತ್ನಿ ಜಕ್ಕಿ ಸುಂದರಿಯವರು ನಿಮ್ಮ ಮಗಳಿಗೆ ಎಲ್ಲವನ್ನೂ ವಿವರಿಸಿ ತಿಳಿಸಿದ್ದಾರೆ.

**ಚಟ್ಟಯ್ಯ** : ಹೂಂ! ಹಾಗಾದರೆ ಇಷ್ಟೊಂದು ಮಂದಿ ಜಾಣ ರಾಜಕಾರಣಿಗಳ ಮಧ್ಯೆ ನಾನೊಬ್ಬ ಬೆಪ್ಪನೆಂದಾಯಿತು!

ತೈಲಪ : ಅದಕ್ಕೆ ಹೊಣೆ ತಾವೇ!

ಚಟ್ಟಯ್ಯ : ಅನ್ಯರ ಸೇವೆಯಲ್ಲಿ ಸವೆಯುವವನಿಗೆ ಸ್ವಂತ ವಿಚಾರಗಳಾಗಲೀ, ಸ್ವತಂತ್ರ ವ್ಯಕ್ತಿತ್ವವಾಗಲಿ ಇಲ್ಲವೇನೋ ಎನಿಸುತ್ತದೆ...........ಸೇವಿಸುವುದೇ ಹಣೆ ಬರಹವಾಗಿ ಪಡೆದಿರುವವನಿಗೆ ಅವರಾದರೇನು............ ನೀವಾದರೇನು?.......... ಹಿಂದಿನಂತೆಯೇ ಸಿಂಹಾಸನವೇರಿದವರ ಸೇವಾವೃತ್ತಿ ನನ್ನದಾಗಿ ಮುಂದುವರೆಯುಲು ಅವಕಾಶವಾದರೆ ನಿಜವಾಗಿಯೂ ನಾನು ಧನ್ಯ.

ತೈಲಪ : ಸಿಂಹಾಸನಾರೋಹಣದ ಕಾರ್ಯಕ್ರಮಗಳೆಲ್ಲ ಮುಗಿಯಲಿ......... ಆಮೇಲೆ ಯಾರಾರು ಯಾರಿಗೆ ಯಾವ ಸೇವೆ ಎಂಬುದು ನಿರ್ಣಯುವಾಗುತ್ತೆ.

ಚಟ್ಟಯ್ಯ : ಸಿಂಹಾಸನಾರೋಹಣ ಕಾರ್ಯಕ್ರಮದ ಸಂದರ್ಭದಲ್ಲಿ ಪಸಾಯತರದೇ ಮುಖ್ಯ ಪಾತ್ರ. ಸಾಂಪ್ರದಾಯಿಕ ಉಡುಗೆ ತೊಡುಗೆ ಉಡುಗೊರೆ, ಪಾಂಗಿತವಾಗಿ ನೆರವೇರಿಸಲು ಅನುಭವವಿರುವವರೇ ಆ ಕೆಲಸ ಮಾಡಬೇಕು. ಆ ಜವಾಬ್ದಾರಿಯನ್ನು ನಿವ ್ಹಿಸಲು ನನಗೆ ತುಂಬ ಆಸೆಯಿದೆ.

ತೈಲಪ : ನಿಮ್ಮಾಸೆ ತಿಳಿಯಿತು. ಪರಿಶೀಲಿಸುತ್ತೇವೆ. ಅದಕ್ಕೆ ಮೊದಲು ನಾನು ಹೇಳಿದಂತೆ ನಿಮ್ಮ ಮಗಳಿಂದ ವಿವರಗಳನ್ನು ತಿಳಿದುಕೊಳ್ಳಿ.

– – ವಿರಾಮ – –

ವಂದಿಮಾಗಧರು:ರಾಜಾಧಿರಾಜ, ರಾಜಮಾರ್ತಾಂಡ, ಅರಿರಾಯರ ಗಂಡ, ಚಾಲುಕ್ಯ ಕುಲ ತಿಲಕ, ಚಾಲುಕ್ಯ ವಂಶ ಸೂರ್ಯ, ಚಾಲುಕ್ಯ ಚಕ್ರವರ್ತಿ ತೈಲಪ ಅಹವಮಲ್ಲರಿಗೆ

ಜೈ.........ಜಯವಾಗಲಿ.......ಜಯವಾಲಿ......ಜಯವಾಗಲಿ

(ಕರತಾಡನ ಜಯಘೋಷಗಳು ಮುಂದುವರೆಯುವುದು)

ತೈಲಪ : ಪೂಜ್ಯರೇ, ಹಿರಿಯರೇ, ಪ್ರಜಾ ಬಂಧುಗಳೇ, ನಿಮ್ಮ ಸಂಭ್ರಮೋತ್ಸಾಹಗಳೇ ನಮಗೆ ಭದ್ರ ಕವಚ. ನಿಮ್ಮೆಲ್ಲರ ಆಸೆ, ಆಕಾಂಕ್ಷೆ, ನಿರೀಕ್ಷೆಗಳನ್ನು ಪೂರೈಸಿ, ಇತಿಹಾಸದಲ್ಲಿ ಒಂದು ಹೊಸ ಪುಟವನ್ನು ಸೇರಿಸಬೇಕೆಂಬುದು ನಮ್ಮ ಅಭಿಲಾಷೆ. ನಿಮ್ಮೆಲ್ಲರ ಪ್ರೀತಿ, ವಿಶ್ವಾಸ, ಬೆಂಬಲಗಳು ನನಗೆ

ದೊರೆತಲ್ಲಿ ಖಂಡಿತವಾಗಿಯೂ ನನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನು ಮೀರಿ ನಿಮ್ಮನ್ನು ರಕ್ಷಿಸಿಕೊಳ್ಳಲು, ಸುಖಿಗಳನ್ನಾಗಿ ಇಡಲು ಪ್ರಯತ್ನಿಸುತ್ತೇನೆ..........

(ಮತ್ತೆ ಜಯಘೋಷ)

**ತೈಲಪ** : ನೀವೆಲ್ಲ ಶಾಂತ ಚಿತ್ತರಾಗಿದ್ದಲ್ಲಿ ನಮ್ಮ ಪಂಡಿಗರು ಚಮೂಪತಿಗಳು ತಮ್ಮೆಲ್ಲರನ್ನು ಉದ್ದೇಶಿಸಿ ಒಂದೆರಡು ಮಾತುಗಳನ್ನಾಡುತ್ತಾರೆ.

**ಪಂಡಿಗ** : ಈ ಸಾಮ್ರಾಜ್ಯದ ನಿಷ್ಠಾವಂತ ನಾಯಕರೇ, ಸಾಮಂತ ಮಹನೀಯರೇ, ಅಧಿಕಾರಿಗಳೇ, ಪುರಶ್ರೇಷ್ಠರೇ, ಸತ್ಪ್ರಜೆಗಳೇ ಇಂತಹ ಶುಭ ದಿನಕ್ಕಾಗಿ ಹಾತೊರೆಯುತ್ತಿದ್ದ ನನಗೆ ಇಂದು ಫಲಿಸಿದ್ದು ಹೆಚ್ಚಿನ ಸಂತೋಷ ತಂದಿದೆ. ಈ ಕನ್ನಡ ನಾಡನ್ನು ಸಂಗೀತ, ಸಾಹಿತ್ಯ, ಕಲೆ ಇತ್ಯಾದಿ ಸಾಂಸ್ಕೃತಿಕ ವಿಚಾರಗಳಲ್ಲಿ ಮಹೋನ್ನತಿಯನ್ನು ಸಾಧಿಸಿದೆ ಎಂಬಂತೆ ರೂಪಿಸಬೇಕೆಂಬುದು ನಮ್ಮೆಲ್ಲರ ಆಸೆ.

**ತೈಲಪ** : ಪಂಡಿಗರೇ ನಾವು ಚಕ್ರವರ್ತಿಗಳಾಗಿರುವುದರ ಬಗ್ಗೆ ಜನ ಸಮರ್ಥನೆಯನ್ನು ಯಾಚಿಸುವಂತೆ ಕಾಣುತ್ತಿದ್ದಾರೆ. ಏಕೆಂಬುದನ್ನು ವಿವರಿಸಿ.

**ಪಂಡಿಗ** : ಬಂಧುಗಳೇ ಗಂಡು ಸಂತಾನವಿಲ್ಲದ ಕರ್ಕರಿಗೆ ದೌಹಿತ್ರನೇ ಉತ್ತರಾಧಿಕಾರಿ. ದೌಹಿತ್ರನು ಇನ್ನೂ ಎಳೆಯ ಕೂಸಾಗಿರುವುದರಿಂದ ಅವರ ಪರವಾಗಿ ತೈಲಪರು ಆಳುತ್ತಾರೆ. ವಾಸ್ತವವಾಗಿ ಈ ಸಿಂಹಾಸನ ಅವರದೇ! ರಕ್ತಪಾತವಿಲ್ಲದೆ, ಸ್ನೇಹ ಮಾರ್ಗದಿಂದ ಇದನ್ನು ಗಳಿಸಿಕೊಂಡಿದ್ದಾರೆ. ಆದರೂ ಕೆಲವರಲ್ಲಿ ದ್ವೇಷ ತಲೆ ಹಾಕಿದೆ ಎಂದರೆ ಅದೂ ಸಹಜವೇ!........ಆದರೆ ನಾವು ಆದಷ್ಟು ದ್ವೇಷವನ್ನು ಮರೆತು ಸಾಂಸ್ಕೃತಿಕವಾಗಿ ನಮ್ಮ ನಾಡನ್ನು ಬೆಳೆಸೋಣ.

**ತೈಲಪ** : ಬಂಧುಗಳೇ ಈ ಸಂದರ್ಭದಲ್ಲಿ ಇನ್ನೂ ಒಂದು ಸಂತಸದ ಸುದ್ದಿಯಿದೆ............. ನಮ್ಮೆಲ್ಲ ಸಮರಗಳಲ್ಲಿ ಭುಜಕ್ಕೆ ಭುಜಕೊಟ್ಟು ನಮಗೆ ಭದ್ರ ಕೋಟೆಯಂತೆ ನಿಂತು ಅನುಪಮ ಶೌರ್ಯ ಪರಾಕ್ರಮಗಳನ್ನು ಮೆರೆದ ಮಲ್ಲಪ, ಪುನ್ನಿಮಯ್ಯರನ್ನು ಚಮೂಪತಿ ಸ್ಥಾನದಿಂದ ಏರಿಸಿ ದಂಡನಾಥರನ್ನಗಿ ಘೋಷಿಸಲು ನಮಗೆ ಹೆಮ್ಮೆ ಎನಿಸುತ್ತದೆ. ಬನ್ನಿ ಪುನ್ನಿಮಯ್ಯ, ಮಲ್ಲಪರೇ, ನಾವು ನೀಡುತ್ತಿರುವ ಈ ಕರವಾಳಗಳು ನಿಮ್ಮ ಶೌರ್ಯ, ಪರಾಕ್ರಮಗಳ ಸಂಕೇತ.

ಮಲ್ಲಪ
ಪುನ್ನಿಮಯ್ಯ : ಕೃತಾರ್ಥರಾದೆವು ಪ್ರಭುಗಳೇ. ನಮ್ಮಲ್ಲಿ ಉಸಿರಿರುವ ತನಕವೂ ನಮ್ಮ ಬದುಕುಗಳನ್ನು ತಮ್ಮ ಮತ್ತು ಈ ನಾಡಿನ ರಕ್ಷಣೆಗೆ ಮೀಸಲಿಡುತ್ತೇವೆಂದು ಈ ಪ್ರಜಾನೀಕದ ಮುಂದೆ ಪ್ರಮಾಣ ಮಾಡುತ್ತೇವೆ.

ತೈಲಪ : ಭಲಾ! ದಂಡನಾಯಕರೇ. ಈ ನಾಡಿನ ಚಕ್ರವರ್ತಿಗಳಾಗಿ ನಿಮ್ಮಂತಹ ನಿಷ್ಠಾವಂತರನ್ನು ಪಡೆದಿರುವುದು ನಮ್ಮ ಪುಣ್ಯ. ಈ ನಾಡಿನ ಕೀರ್ತಿ ಪತಾಕೆ ವಿಶಾಲ ಗಗನದಲ್ಲಿ ನಿರಂತರವಾಗಿ ಹಾರಾಡುತ್ತ ನಮ್ಮ ಧೈರ್ಯ, ಸ್ಥೈರ್ಯ, ಸಾಧನೆಗಳನ್ನು ನೆನಪಿಸುತ್ತಿರಬೇಕು.

ಪಂಡಿಗ : ಬಂಧುಗಳೇ, ನಮ್ಮ ಚಕ್ರವರ್ತಿಗಳಿಗೆ ನಿಮ್ಮೆಲ್ಲರ ಹಾರೈಕೆ. ಹಿರಿಯರೆಲ್ಲರ ಆಶೀರ್ವಾದ ವಿರಲಿ. ಈ ಸಮಾರಂಭಕ್ಕೆ ಬಂದು ನಮ್ಮ ಗೌರವ ಹೆಚ್ಚಿಸಿದ್ದೀರಿ......ಅರಮನೆಯ ಆತಿಥ್ಯವನ್ನು ಸ್ವೀಕರಿಸಿ ಹೊರಡಬೇಕು ಎಂಬುದು ನಮ್ಮ ಪ್ರಾರ್ಥನೆ.

(ಮತ್ತೊಮ್ಮೆ ಜಯಘೋಷ – ತೈಲಪ ಅಹವಮಲ್ಲರಿಗೆ ಜಯವಾಗಲಿ.)

– – ವಿರಾಮ – –

ಪಂಡಿಗ : ವೈದ್ಯರೇ ಕರ್ಕ ಪ್ರಭುಗಳ ಸ್ಥಿತಿಯಲ್ಲಿ ಸುಧಾರಣೆಯೇನಾದರೂ ಕಂಡು ಬಂದಿದೆಯೇನು?

ವೈದ್ಯರು : ಪ್ರಯತ್ನ ಸಾಗಿದೆ. ಆದರೆ ಅವರ ಉಳಿವು ಅಳಿವು ಆ ಭಗವಂತನ ಕೈಯಲ್ಲಿದೆ.....ಸಾಮಂತರೊಂದಿಗೆ ಕರ್ಕರ ವಿಚಾರವಾಗಿ ಏನೂ ವಿವರಗಳನ್ನು ಕೇಳಲಿಲ್ಲ. ರೋಗಿಯೇ ಎದುರಿಗೆ ಇದ್ದಾಗ ಪರೀಕ್ಷೆಯಿಂದಲೇ ರೋಗದ ಕಾರಣ ತಿಳಿಯಬಹುದೆಂದು ಇದ್ದೆ.

ಪಂಡಿಗ : ಈಗ ನಿಮಗೆ ಆ ವಿವರಗಳ ಅಗತ್ಯವಿದೆ ಎನಿಸಿದೆಯೇನು?

ವೈದ್ಯ : ಹೂಂ! ಸ್ವಲ್ಪ ಮಟ್ಟಿಗೆ..........ಅವರು ಯುದ್ಧಭೂಮಿಯಲ್ಲಿಯೇ ಪ್ರಜ್ಞಾಹೀನರಾಗಿದ್ದರೆ? ಅಥವಾ ಇಲ್ಲಿಗೆ ಬಂದ ಮೇಲೊ?

ಪಂಡಿಗ : ಯುದ್ಧಭೂಮಿಯಲ್ಲಿ ಪ್ರಜ್ಞಾಹೀನರಾಗಿದ್ದರೆ, ಇಲ್ಲಿಗೆ ತರುವ ಸಾಹಸವನ್ನೇ ಮಾಡುತ್ತಿರಲಿಲ್ಲ. ಆತುರವಾಗಿ ನುಗ್ಗಿ ಆಘಾತಕ್ಕೆ ಒಳಗಾಗಿದ್ದಾರೆ. ಅಲ್ಲಿಯೇ ಇದ್ದರೆ ಮತ್ತೇನಾದರೂ ತೊಂದರೆಯಾದೀತೆಂದು ಹೆದರಿ ನಾನೇ ಜೊತೆಗೂಡಿ ಬಂದೆ.

ವೈದ್ಯ : ಬಂದದ್ದು ಒಳ್ಳೆಯದೇ ಆಯಿತು............ಅಂದ ಹಾಗೆ ಪ್ರಜ್ಞೆ ತಪ್ಪಿದ್ದು ಯಾವಾಗ? ಏಕೆ?

ಪಂಡಿಗ : ಏಕೆಂದು ಹೇಳಲಾರೆನಾದರೂ, ಪ್ರಜ್ಞೆ ತಪ್ಪಿದ್ದು ಮಾತ್ರ ರಾಜಧಾನಿಯನ್ನು ತಲುಪುವ ಹಂತದಲ್ಲಿ.

ವೈದ್ಯ : ಅದಕ್ಕಾದರೂ ಕಾರಣವಿರಲೇಬೇಕಲ್ಲ?

ಪಂಡಿಗ : ಅಂಥಾದ್ದೇನೂ ಇಲ್ಲ. ರಾಜಧಾನಿ ಹತ್ತಿರವಾದಂತೆ ಕಣ್ ಕುಕ್ಕುವ ಬೆಳಕಿನ ಪುಂಜವಾಗಿ ರಾಜಧಾನಿ ಕಾಣಿಸುತ್ತಿದ್ದುದನ್ನು ನೋಡಿ ಇಷ್ಟೊಂದು ಬೆಳಕಿಗೆ ಕಾರಣ ಕೇಳಲು, ತೈಲಪರ ಸಿಂಹಾಸನಾರೋಹಣ ವಿಷಯ ತಿಳಿಸಿದೆ. ಅಷ್ಟೆ!

ವೈದ್ಯ : ಅವರ ಈ ಸ್ಥಿತಿಗೆ ಕಾರಣ ಅಷ್ಟೇ ಸಾಕು. ಬಹುಶಃ ಅವರಿಗೆ ಆ ವಿಷಯ ಅಪ್ರಿಯವಾಗಿರಬೇಕು. ಅಪ್ರಿಯವೆನಿಸಬಹುದೆಂಬ ಕಲ್ಪನೆ ನಿಮಗಿರಲಿಲ್ಲವೇ?

ಪಂಡಿಗ : ಅದನ್ನು ಸಾಮಾನ್ಯ ವಿಷಯದಂತೆ ಭಾವಿಸಿದೆವು. ಇಷ್ಟು ಅತಿರೇಕಕ್ಕೆ ದಾರಿ ಮಾಡಬಹುದೆನಿಸಲಿಲ್ಲ.

ವೈದ್ಯ : ಅವರಿಗೆ ಬೇಸರವಾಗಿ ಅನುಚಿತ ಆತುರದಲ್ಲಿ ಯುದ್ಧಕ್ಕೆ ನುಗ್ಗಿ ವಿನಾಕಾರಣ ಪ್ರಾಣಕ್ಕೆ ತಂದುಕೊಂಡರು ಎನಿಸುತ್ತೆ.

ಪಂಡಿಗ : ನಿಜ. ನಿಮ್ಮ ತರ್ಕ ಊಹೆಗಳು ಸರಿಯಾದ್ದೆ!...........ನಾವು ಕೂಡ ಅವರನ್ನು ಅವರ ಮಗಳ ಆಶ್ರಯದಲ್ಲಿ ಇರುವುದೇ ಒಳಿತೆಂದು ಭಾವಿಸಿ ಇಲ್ಲಿಗೆ ಕರೆತಂದೆವು.

ವೈದ್ಯ : ನಿಮ್ಮ ಆಲೋಚನೆ ಸಾಧುವಾದುದೆ!

ಪಂಡಿಗ : ಸದ್ಯದ ಪರಿಸ್ಥಿತಿ ಹೇಗಿದೆ? ತಮ್ಮ ಚಿಕಿತ್ಸೆಗೆ ಸ್ಪಂದಿಸುತ್ತಿರುವರೇನು?

ವೈದ್ಯ : ವೈದ್ಯರು ಯಾವಾಗಲೂ ಆಶಾವಾದಿಗಳೇ. ಇನ್ನೊಂದು ಅರ್ಧ ಪ್ರಹರ ಕಾದು ನಂತರ ವಿಶಿಷ್ಟವಾದ ಔಷಧಿಯನ್ನು ಸಿದ್ಧ ಮಾಡಬೇಕು. ಬೇಪಿನ ಬೀಜ, ಮೆಣಸು, ಜೀವಂತ ಕಳ್ಳಿಯ ದಿಂಡು ಮುಂತಾದ ಪದಾರ್ಥಗಳಿಂದ ಸಿದ್ಧಗೊಳಿಸಿದ ಚೂರ್ಣದಿಂದ ಪ್ರಜ್ಞೆ ಏರಿಸುವ ಪ್ರಯತ್ನ ಮಾಡುತ್ತೇನೆ.

ತೈಲಪ : ಪಂಡಿಗರೇ ನಮ್ಮ ಮಾವಂದಿರ ಪರಿಸ್ಥಿತಿ ಹೇಗಿದೆ? ಗಾಭರಿಯಾಗುವ ಸಂದರ್ಭವಿರಲಾರದು ಎಂದುಕೊಳ್ಳುತ್ತೇನೆ. ದಶಮಿಯಂದು ನಿಮ್ಮನ್ನು ನೋಡಿ ಸಂಭ್ರಮಾಶ್ಚರ್ಯಗಳಾದವು. ಎಲ್ಲವನ್ನು ಕೇಳಿ ತಿಳಿಯುವ ಕುತೂಹಲವಿದ್ದರೂ ನೀವೇ ಸಕಾಲದಲ್ಲಿ ಹೇಳುತ್ತೀರೆಂದು ಸುಮ್ಮನಿದ್ದೆ.

ಪಂಡಿಗ : ಗಂಗರು ಸೋತು ಹಿಮ್ಮೆಟ್ಟಿದರು. ಗೆಲುವು ನಮ್ಮದೇ ಆಯಿತು. ಆದರೆ ಪ್ರಭುಗಳ ಸ್ಥಿತಿಯೊಂದೇ ಚಿಂತಾಜನಕವಾಗಿದೆ.

ವೈದ್ಯ : ಪಂಡಿಗರೇ ಇಲ್ಲಿ ಹೆಚ್ಚು ಮಂದಿ ಕೂಡುವುದು ಬೇಡ. ಪ್ರಭುಗಳಿಗೆ ತೊಂದರೆಯಾದೀತು. ನಾಳಿನಿಂದಲೇ ನಾನು ಮತ್ತೊಂದು ಬಗೆಯ ಚಿಕಿತ್ಸೆ ಪ್ರಾರಂಭಿಸುತ್ತೇನೆ. ಸುಧಾರಣೆ ಕಾಣುತ್ತಿದ್ದಂತೆ ಪ್ರಭುಗಳ ಕುಟುಂಬದವರೆಲ್ಲರೂ ಬೇಕಾದರೆ ಬಂದು ದರ್ಶನ ಪಡೆಯಲಿ.

ತೈಲಪ : ಅಪ್ಪಣೆ ವೈದ್ಯರೆ. ನಾವು ಬರುತ್ತೇವೆ. ನಮ್ಮ ಮಾವಂದಿರನ್ನು ಬದುಕಿಸಿ ಕೊಡುವುದು ನಿಮ್ಮ ಜವಾಬ್ದಾರಿ. ಪಂಡಿಗರೇ ಇಲ್ಲಿನ ಕೆಲಸ ಮುಗಿಸಿ ನಮ್ಮ ಮಂಥನ ಸಾಲೆಯ ಕಡೆ ಸ್ವಲ್ಪ ಬನ್ನಿ.

– – ವಿರಾಮ – –

[ತೈಲಪನ ಸಭೆ. ಸಭಾ ಸದರು. ಪಂಡಿಗ. ದಂಡನಾಯಕ ಮಲ್ಲಪ. ಪುನ್ನಿಯ್ಯರಯ ಮತ್ತು ಇತರ ಪ್ರಮುಖರು]

ತೈಲಪ : ಪೂಜ್ಯರೇ, ಹಿರಿಯರೇ, ಸಭಾಸದರೇ, ನಾವು ಸಿಂಹಾಸನಾರೋಹಣ ಮಾಡಿದಂದಿನಿಂದ ರಾಜ್ಯದಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಬಲ್ಲಿರಿ. ಕಾರಣಾಂತರಗಳಿಂದ ನಮ್ಮ ರಾಜಧಾನಿಯನ್ನು ಕಲ್ಯಾಣಕ್ಕೆ ಸ್ಥಳಾಂತರಿಸಿದೀವಿ. ನಮಗೆ ಮತ್ತೊಬ್ಬ ಪುತ್ರನ ಜನನವಾಯಿತಾದರೂ, ಈ ಸಂತೋಷದ ಜೊತೆ ಜೊತೆಗೆ ದುಃಖಕರವಾದ ಸನ್ನಿವೇಶಗಳನ್ನು ಎದುರಿಸಬೇಕಾಗಿ ಬಂತು. ನಮ್ಮ ಮಾವಂದಿರ ಸಾವು ನಮಗೆ ಭರಿಸಲಾಗದ ನೋವನ್ನು ತಂದಿದೆ. ಮತ್ತೊಂದು ಕಡೆಯಿಂದ ವಿಧ ವಿಧದ ಬೇಹುಗಳು ಬರುತ್ತಿವೆ. ಪಂಡಿಗರು ಬೇಹಿನ ಸುದ್ದಿಗಳನ್ನು ನಿಮಗೆ ವಿವರಿಸುತ್ತಾರೆ. ನಂತರವೇ ನಮ್ಮ ಮುಂದಿನ ನಡೆ.

ಪಂಡಿಗರೇ : ಪ್ರಭುಗಳು ಈಗ ಒಕ್ಕಣಿಸಿದ್ದನ್ನು ನೋಡಿದಿರಿ. ಕೊಂಕಣದ ಸಿಲಹಾರ, ಸೌಂದತ್ತಿಯ ರಟ್ಟ, ತಲಕಾಡು ಗಂಗನೊಳಂಬ ಪಲ್ಲವರ ರಾಜ್ಯಗಳಿಂದ ಬೇಹುಗಾರರು ಬಂದಿದ್ದಾರೆ. ಕೊಂಗಾಳ್ವ ನಾಡಿನಿಂದ ಯಾವುದೇ ಬೇಹು ಬಂದಿಲ್ಲ. ವಾಯುವ್ಯೋತ್ತರದ ಕಡೆಯಿಂದ ಬಂದ ಬೇಹು ಸ್ವಲ್ಪ ಆತಂಕಕ್ಕೆ ದಾರಿ ಮಾಡುತ್ತಿದೆ. ಧಾರಾ ನಗರದ ಪರಮಾರರು ಹಿಂದಿನ ಸೋಲನ್ನು ಮರೆಯದೆ ಮತ್ತೆ ಆಕ್ರಮಿಸುವ ಯೋಚನೆಯಲ್ಲಿದ್ದಾನೆ.

ತೈಲಪ : ಹನ್ನೆರಡು ವರ್ಷ ಕಳೆದರೂ ಹಗೆ ಹೊಗೆಯಾಡುತ್ತಿದೆ. ಸೀಯಕ ಹರ್ಷರು ತೀರಿಕೊಂಡರು. ಸಿಂಧುಲರು ಸಿಂಹಾಸನವೇರಿದರೂ

ರೋಗಗ್ರಸ್ತರಾಗಿ ಸಾವನ್ನಪ್ಪಿದರು. ಅವರ ಮಗ ಭೋಜರು ಇನ್ನೂ ಎಳೆಯರು. ಅದಕ್ಕೇ ಸಿಂಧುಲರು ತಮ್ಮ ಸೋದರ ಮುಂಜನನ್ನು ನಂಬಿ ರಾಜ್ಯ ಒಪ್ಪಿಸಿದರು.

**ಪಂಡಿಗ** : ಈಗ ಬಂದಿರುವುದು ತೊಡಕು ಅಲ್ಲಿಂದಲೇ ಎಂಬುದು ಸ್ಪಷ್ಟವಾಗಿದೆ. ಮುಂಜನೇ ಪರಮರ ಸಿಂಹಾಸನವೇರಿ ಸೊಕ್ಕಿ ಮೆರೆಯುತ್ತಿದ್ದಾನೆ. ತನ್ನ ಆಪ್ತರನ್ನೆಲ್ಲ ಕರೆದು ಅವರ ಎದೆಯೊಳಗೆ ಚಾಲುಕ್ಯರ ವಿರುದ್ಧ ಮತ್ಸರದ ಬೀಜ ಬಿತ್ತುತ್ತಿದ್ದಾನೆ.

**ಮಲ್ಲಪ** : ಅಷ್ಟೇ ಅಲ್ಲ. ಸಿಂಧುಲ ಕುಮರ ಭೋಜರನ್ನೂ ಮುಗಿಸಿ ಸಿಂಹಾಸನವನ್ನು ಭದ್ರ ಪಡಿಸಿಕೊಳ್ಳುವ ಹುನ್ನಾರದಲ್ಲಿ ಚೇರೆ ಇದ್ದಾನಂತೆ. ಆದ್ದರಿಂದ ಮುಂಜನಿಂದ ನಮಗೆ ಅಪಾಯ ತಪ್ಪಿದ್ದಲ್ಲ. ಯಾವ ಕ್ಷಣದಲ್ಲಾದರೂ ದಾಳಿ ನಡೆಯಬಹುದು. ನಾವು ಇದಕ್ಕೆ ಸಿದ್ಧರಾಗಿರಬೇಕು.

**ತೈಲಪ** : ಕನ್ನಯ್ಯರೇ ನಿಮ್ಮ ಕಾರ್ಯಕ್ಷೇತ್ರ ಐಚಲಾಪುರ ಹಾಗೂ ಸುತ್ತಮುತ್ತ ಎಂದು ಪಂಡಿಗರು ತಿಳಿಸಿದ್ದಾರೆ. ಈಚೆಗೆ ನೀವೇನಾದರೂ ಧಾರಾನಗರದ ಕಡೆಗೆ ಹೋಗಿದ್ದಿರೇನು?

**ಕನ್ನಯ್ಯ** : ಹೋಗಿ ಬಂದಿದ್ದೇನೆ.

**ತೈಲಪ** : ಈಗಿನ ಅಲ್ಲಿನ ಆಡಳಿತದ ಬಗೆಗೆ ಜನಾಭಿಪ್ರಾಯವೇನಿದೆಯೆಂದು ತಿಳಿದು ಬಂತೇ?

**ಕನ್ನಯ್ಯ** : ಪ್ರಭು. ಅವರನ್ನು ಆಳುತ್ತಿರುವ ಮುಂಜ ಜಾಣ ಮಾತುಗಾರ. ಜನರ ಮನ ಒಲಿಸಿಕೊಳ್ಳುವ ವಾಕ್ ಚಾತುರ್ಯವನ್ನು ಮತ್ತು ಆತ ಸಂಗೀತ, ಸಾಹಿತ್ಯ, ನೃತ್ಯ ಅವುಗಳ ಅಭಿವೃದ್ಧಿಗಾಗಿ ಮಾಡುತ್ತಿರುವ ಪ್ರಯತ್ನಗಳನ್ನು ಜನ ಬಾಯ್ತುಂಬ ಹೊಗಳುತ್ತಿದ್ದಾರೆ.

**ತೈಲಪ** : ಯೋಗ್ಯತೆ ಇದ್ದಲ್ಲಿ ಮೆಚ್ಚಿಗೆ ಸಹಜವೇ.

**ಕನ್ನಯ್ಯ** : ಯೋಗ್ಯತೆಯ ನಿಜಾನಿಜಗಳು ತಿಳಿಯುವುದು ಬಹಳ ಕಷ್ಟವಂತೆ. ಸದಾ ಹಸನ್ಮುಖಿಯಾಗಿ ನಗು ನಗುತ್ತಲೇ ಇರುವನಾದರೂ ಆ ನಗುವಿನ ಹಿಂದೆ ಅಡಗಿ ಕುಳಿತಿರುವ ದ್ರೋಹ ಯಾರ ಗಮನಕ್ಕೂ ಬರುತ್ತಿಲ್ಲ.

**ತೈಲಪ** : ಇದೆಲ್ಲ ನಿಮಗೆ ಹೇಗೆ ಗೊತ್ತು?

**ಕನ್ನಯ್ಯ** : ಅರಮನೆಯ ಅಂತರಂಗ ದಾಸಿಯ ಭಾವನೆಗಳು ಅವು.

ತೈಲಪ : ಅವಳ ಪರಿಚಯ ನಿಮಗೆ ಹೇಗಾಯಿತು?

ಕನ್ನಯ್ಯ : ನನ್ನ ಮಡದಿಯ ಸೋದರಿ ಇರುವುದು ಧಾರಾ ನಗರದಲ್ಲಿ. ಆ ದಾಸಿ ಇವರ ಮನೆಯ ನೆರೆಯಲ್ಲಿಯೇ ಇರುವುದರಿಂದ ಸಲುಗೆ ಹೆಚ್ಚು. ಅರಮನೆಯ ವಿಚಾರಗಳೆಲ್ಲವನ್ನೂ ಚಾಚೂ ತಪ್ಪದಂತೆ ವರದಿ ಒಪ್ಪಿಸುತ್ತಾಳೆ.

ಪಂಡಿಗ : ಪ್ರಭು ಇನ್ನೂ ಒಂದು ಭಯಂಕರ ವಿಷಯವೂ ತಿಳಿದುಬಂದಿದೆ. ಸಿಂಧುಲ ಕುಮಾರ ಭೋಜರು ಅತ್ಯಂತ ಕುಶಾಗ್ರ ಬುದ್ಧಿಯುಳ್ಳವರು. ಬೆರಳು ತೋರಿದರೆ ಹಸ್ತ ನುಂಗುವ ಪ್ರಚಂಡ ಬುದ್ಧಿ. ಆ ಬುದ್ಧಿಯೇ ಅವರ ಪಾಲಿಗೆ ಮುಳುವಾಗುವ ಸಾಧ್ಯತೆಯೂ ಇದೆ.

ತೈಲಪ : ಅಂದರೆ?

ಪಂಡಿಗ : ಏನಿದೆ ಪ್ರಭು. ಮುಂಜರು ಇದರಿಂದ ತುಂಬಾ ಕಸಿವಿಸಿ, ಗಾಬರಿಗೊಂಡಿದ್ದಾರೆ. ಭೋಜರು ತಮ್ಮ ಆಸೆಗೆ ಅಡ್ಡಿಯಾಗುತ್ತಾರೆಂದು. ತಮ್ಮ ಸಾಮಂತರಲ್ಲಿ ತಮಗೆ ಆಪ್ತರಾದ ವತ್ಸರಾಜ ಎಂಬುವವರನ್ನು ಕರೆದು ಭೋಜರನ್ನು ಮುಗಿಸಿಬಿಡಲು ಆದೇಶಿಸಿದ್ದಾರೆ.

ತೈಲಪ : ಹಾಗಾದರೆ ಮುಂದೆ?

ಪಂಡಿಗ : ವತ್ಸರಾಜ ಭೋಜರನ್ನು ಕರೆದೊಯ್ಯುವಾಗ ತಿಳಿದವರು ಯಾರೋ ಎಲ್ಲಿಗೆಂದು ಪ್ರಶ್ನಿಸಿದ್ದಕ್ಕೆ ವಿದ್ಯಾರ್ಜನೆಗಾಗಿ ಒಳ್ಳೆ ಗುರುಗಳ ಬಳಿ ಕರೆದೊಯ್ಯುತ್ತಿರುವುದಾಗಿ ಹೇಳಿದರಂತೆ!

ತೈಲಪ : ಇದು ನಡೆದದ್ದು ಯಾವಾಗ?

ಪಂಡಿಗ : ಒಂದು ಸಂವತ್ಸರವಾಗಿರಬಹುದು.

ತೈಲಪ : ರಾಜಕುಮಾರರು ಈಗ ಎಲ್ಲಿದ್ದಾರೆ?

ಪಂಡಿಗ : ಯಾರಿಗೂ ಗೊತ್ತಿಲ್ಲ.

ತೈಲಪ : ಪಂಡಿಗ, ಕನ್ನಯ್ಯರೇ, ಹೇಗಾದರೂ ಮಾಡಿ ಭೋಜರು ಎಲ್ಲಿದ್ದಾರೆಂಬುದನ್ನು ಪತ್ತೆ ಹಚ್ಚಿ. ಅವರನ್ನು ಹುಡುಕಿ ತೆಗೆಯುವುದು ನಮಗೆ ಅನಿವಾರ್ಯ.

ಕನ್ನಯ್ಯ : ಅಪ್ಪಣೆ.

ತೈಲಪ : ಸಂಗೀತ, ಸಾಹಿತ್ಯಗಳೆಂದು ಏನೋ ಹೇಳಿದಿರಲ್ಲ, ಆಸ್ಥಾನ ಕಲಾವಿದ, ಸಾಹಿತಿಗಳು ಯಾರೆಂಬುದು ತಿಳಿದಿದೆಯೇ?

**ಕನ್ನಯ್ಯ** : ಧನಂಜಯ, ಪದ್ಮಗುಪ್ತ ಮೊದಲಾದವರೆಲ್ಲ ಇದ್ದಾರೆ.

**ತೈಲಪ** : ಒಂದು ನಾಡಿನ ಸಮಗ್ರ ಬೆಳವಣಿಗೆ ಆ ನಾಡಿನ ಸಂಸ್ಕೃತಿಯನ್ನು ಇತರ ವಿಷಯಗಳಂತೆ ಪ್ರಾಮುಖ್ಯತೆ ಕೊಟ್ಟು ಬೆಳೆಸಿದರೇನೆ ಸಾಧ್ಯವಾಗುವುದು.

**ಪಂಡಿಗ** : ನೀವು ಇಷ್ಟೊಂದು ಉದಾತ್ತವಾಗಿ ಮತನಾಡುತ್ತಿದ್ದೀರಿ. ಆದರೆ ಅಲ್ಲಿನ ಜನರ ಕಣ್ಣುಗಳಲ್ಲಿ ಚಾಲುಕ್ಯರು ನಿಕೃಷ್ಟರು, ಅರಸಿಕರು. ಸದಾ ಹೊಡಿ, ಬಡಿ, ಕಡಿ ಎಂಬ ಘೋಷಣೆಗಳಲ್ಲದೆ ಮಧುರ ಸಂಗೀತ, ನೂಪುರ ರವಗಳಿಗೆ ಅವಕಾಶವೇ ಇಲ್ಲವೆಂಬ ಪ್ರಚಾರ ನಡೆದಿದೆ.

**ತೈಲಪ** : ಇಂತಹ ಅಪಪ್ರಚಾರಗಳಿಂದ ಸತ್ಯವನ್ನು, ವಾಸ್ತವತೆಯನ್ನು ಮರೆ ಮಾಚಿಡಲು ಸಾಧ್ಯವಿಲ್ಲವಲ್ಲ. ಅವರ ಕಡೆಯ ಬೇಹಿನವರು ಇಲ್ಲಿನ ಸಂಗತಿಗಳನ್ನು ಖಂಡಿತವಾಗಿಯೂ ಬಿತ್ತರಿಸಿರುತ್ತಾರೆ. ಆಗ ಅವರಿಗೆ ತಿಳಿದೇ ತಿಳಿಯುವುದಲ್ಲ.

**ಪಂಡಿಗ** : ತಿಳಿದುಕೊಳ್ಳಬೇಕೆಂಬ ಮನಸ್ಸಿದ್ದಾಗ ಮಾತ್ರ ಇದು ಸಾಧ್ಯ. ವಾಸ್ತವವಾಗಿ ನಮ್ಮ ಕುರಿತು ಒಳ್ಳೆಯದನ್ನು ಕೇಳಿಸಿಕೊಳ್ಳುವ ಮನಸ್ಥಿತಿಯಲ್ಲಿಯೇ ಇಲ್ಲವಲ್ಲ.

**ಕನ್ನಯ್ಯ** : ಇನ್ನೂ ಒಂದು ವಿಷಯವೆಂದರೆ ಚಾಲುಕ್ಯ ಸಾಮ್ರಾಟರ ಆಶ್ರಯವನ್ನು ಆಶಿಸಿ ಬರಬೇಕೆಂದು ಪ್ರಯತ್ನಿಸುವ ಕವಿ, ಕಲಾವಿದರನ್ನು ಪತ್ತೆ ಹಚ್ಚಿ ಅವರ ತಲೆ ಕೆಡಿಸುತ್ತಿದ್ದಾರಂತೆ! 'ಆ ನಾಡಿನಲ್ಲಿ ಕವಿಗಳಿಗೆ, ನಾಯಕರಿಗೆ, ನಟರಿಗೆ ಜಾಗವೇ ಇಲ್ಲ. ನೀವೆಲ್ಲ ಹೋಗಿ ಅಲ್ಲಿ ಏನು ಮಾಡುತ್ತೀರಿ.............ಸುಮ್ಮನೆ ಸಾಯಬೇಕಾಗುತ್ತದೆ' ಎಂದು ಅವರೆಲ್ಲರನ್ನೂ ನಿರುತ್ತೇಜನಗೊಳಿಸುತ್ತಿದ್ದಾರಂತೆ.!

ಭಿಲ್ಲಮರೇ ಪರಮಾರರಿಗೆ ನಮ್ಮ ಶಕ್ತಿ ಸಾಮರ್ಥ್ಯಗಳ ತಿಳುವಳಿಕೆ ಇದೆ.

**ಭಿಲ್ಲಮ** : ಇದ್ದರೂ ಹೀಗೆ ಅಪಪ್ರಚಾರವೇಕೆ?

**ಕನ್ನಯ್ಯ** : ತಮ್ಮೊಳಗೆ ತಾವೇ ಉತ್ಸಾಹವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಹೀಗೆ ಮಾತಾಡುತ್ತಾ, ಜನರನ್ನು ಒಲಿಸಿಕೊಳ್ಳುತ್ತಾ, ನಮ್ಮ ಬಗ್ಗೆ ಅಸಹ್ಯದ ಮಾತುಗಳನ್ನಾಡಿ ನಂಬಿಸುತ್ತಾ, ನಮ್ಮ ಬಲವನ್ನು ಮುರಿಯುವ ಪ್ರಯತ್ನ ಇದಾಗಿದೆ.

**ಭಿಲ್ಲಮ** : ಅಂದರೆ ಹೀಗೆ ಮಾಡಿ ಜನತೆಯ ದೃಷ್ಟಿಯಲ್ಲಿ ನಮ್ಮನ್ನು ನಿಕೃಷ್ಟರನ್ನಾಗಿಸಿ ಅದರ ಲಾಭ ಪಡೆಯುವ ಹವಣಿಕೆ ಅವರದು ಎಂದಾಯಿತು.

ಅಮ್ಮಗಿ : ಪಂಡಿಗರೇ ನಿಜವಾಗಿಯೂ ಅವರು ನಮ್ಮ ಮೇಲೆ ಯುದ್ಧ ಘೋಷಿಸಲಿದ್ದಾರೆಯೇ?

ಪಂಡಿಗ : ನೇರವಾಗಿ ಘೋಷಿಸಿಲ್ಲ. ಆದರೆ ಸಿದ್ಧತೆಗಳಂತೂ ಭರದಿಂದ ಸಾಗಿವೆ ಎಂಬುದು ತಿಳಿದು ಬಂದಿದೆ.

ಮಲ್ಲಪ : ಬಹುಶಃ ಅವರ ಲೆಕ್ಕಾಚಾರ ಹೀಗಿದ್ದೀತು.

ತೈಲಪ : ಹೇಗೆ ಮಲ್ಲಪರೇ?

ಮಲ್ಲಪ : ನಾವು ನಮ್ಮ ರಾಜಧಾನಿಯನ್ನು ಬದಲಾಯಿಸಿದೆವು. ಇದು ಸಾಮಾನ್ಯ ವಿಷಯವಲ್ಲ. ರಾಜಧಾನಿಯನ್ನು ಎಲ್ಲ ವಿಧಗಳಿಂದ ಸಕ್ರಮಗೊಳಿಸುವ ಪ್ರಯತ್ನಗಳಲ್ಲಿ ನಾವು ತೊಡಗಿರುತ್ತೇವೆ. ಶತ್ರುಗಳ ಕಡೆ ನಮ್ಮ ಗಮನ ಹರಿದಿರಲಾರದು ಎಂಬುದು ಅವರ ವಿಚಾರವಾಗಿರುತ್ತೆ.

ತೈಲಪ : ಅವರಿಗೇನು? ಯಾರಿಗಾದರೂ ಹಾಗೇ ಅನಿಸುವುದು..........ಹಾಗಾದರೆ ಶತ್ರುದಾಳಿಯನ್ನು ಎದುರಿಸಲು ನಾವು ಸಕಲ ಸಿದ್ಧತೆಯನ್ನು ಮಾಡಿಕೊಂಡಿದ್ದೇವೆಂಬುದು ಅವರಿಗೆ ತಿಳಿದು ಬಂದಿಲ್ಲವೇನು?

ಪಂಡಿಗ : ಆ ಬಗ್ಗೆ ಏನೂ ಸುಳಿವು ಸಿಕ್ಕಿಲ್ಲ.

ತೈಲಪ : ದಾಳಿಯ ಸಾಧ್ಯಾಸಾಧ್ಯತೆಗಳು ಹೇಗೆ? ಯಾವಾಗ ಎಂಬುದರ ಸೂಚನೆ ಇದೆಯೇ?

ಪಂಡಿಗ : ಬಹುಶಃ ಚಿತ್ರಭಾನು ಸಂವತ್ಸರದ ಕೊನೆಯಲ್ಲಿ!

ಅಮ್ಮಗಿ : ತೈಲಪ ಕುಮಾರರೇ ಈಗ ನಾವು ಎದುರಿಸಬೇಕಾಗಿ ಬಂದಿರುವ ಯುದ್ಧ ಬಹಳ ಗಂಭೀರವಾದುದು.

ಪಂಡಿಗ : ಮುಂಜನಂತಹ ದುಷ್ಟನನ್ನು ಕುತಂತ್ರಿಯನ್ನು ಬಗ್ಗು ಬಡಿಯುವುದು ನಮಗೊಂದು ಸವಾಲು.

ಕನ್ನಯ್ಯ : ಮುಂಜನ ಆಟದ ವಿಧಾನವನ್ನು ಅರಿಯುವುದೇ ಬಹಳ ಕಷ್ಟ. ಅವನು ತನ್ನ ಸ್ವಾರ್ಥಕ್ಕೆ ಮನುಷ್ಯರ ಮಾರಣ ಹೋಮ ಮಾಡಬೇಕಾಗಿ ಬಂದರೂ ಹಿಂಜರಿಯುವುದಿಲ್ಲ.

ಪಂಡಿಗ : ಇಂತಹ ಸಂದರ್ಭಗಳಲ್ಲಿ ಅವನಿಗೆ ಸ್ವಕೀಯ ಪರಕೀಯಗಳೆಂಬುದೇ ಇಲ್ಲ.

ಭಿಲ್ಲಮ : ಚಕ್ರವರ್ತಿಗಳು ಈ ಯುದ್ಧದಲ್ಲಿ ನಾವು ಮುಂಚೂಣಿಯಲ್ಲಿರಲು ಅವಕಾಶ ಮಾಡಿಕೊಡಬೇಕು.

**ತೈಲಪ** : ಗೆಳೆಯ ಭಿಲ್ಲಮ. ನಿನ್ನ ರಣೋತ್ಸಾಹವನ್ನು ನೋಡುತ್ತಿದ್ದರೆ ನನಗೆ ಗರ್ವವೆನಿಸುತ್ತಿದೆ. ನಿನ್ನಂತಹ ಗೆಳೆಯ, ಇಲ್ಲಿ ಕುಳಿತಿರುವ ಹಿರಿಯ ಸಮಸ್ತರನ್ನು ಬೆನ್ನಿಗೆ ಪಡೆದ ನಾನೇ ಧನ್ಯ. ಚಾಲುಕ್ಯ ಸಾಮ್ರಾಜ್ಯಕ್ಕೆ ಇನ್ನೆಂದಿಗೂ ಅಳಿವೆಂಬುದಿಲ್ಲ. ನಮ್ಮ ವಿಜಯ ಪತಾಕೆ ಜಗತ್ತಿಗೆ ನಮ್ಮ ಸಾಹಸವನ್ನು ಸಾರಿ ಹೇಳುತ್ತದೆ.

ಂಂ

# ದೃಶ್ಯ - ೯

[ತೈಲಪ ಮಲ್ಲಿಪರು ಗಂಭೀರ ಸಂಭಾಷಣೆಯಲ್ಲಿ]

ತೈಲಪ : ದಂಡನಾಯಕರಾದ ಮಲ್ಲಪರೇ, ನಾವು ನಮ್ಮ ರಾಜಧಾನಿಯನ್ನು ಕಲ್ಯಾಣಕ್ಕೆ ಸ್ಥಳಾಂತರಿಸಿ ಮೂರು ವರ್ಷಗಳಾಗಿವೆ. ಈಗ ಮಾನ್ಯಖೇಟ ಮತ್ತು ಸುತ್ತಮುತ್ತಲಿನ ಪರಿಸ್ಥಿತಿಗಳು ಹೇಗಿವೆಯೆಂದು ಬೇಹು ಬಂತೇನು?

ಮಲ್ಲಪ : ಆತಂಕಕ್ಕೆ ಯಾವುದೇ ಕಾರಣವಿಲ್ಲ ಪ್ರಭು! ಪ್ರಜೆಗಳೆಲ್ಲರೂ ನೆಮ್ಮದಿಯಿಂದ ಇದ್ದಾರೆ. ಮಾನ್ಯಖೇಟದಲ್ಲಿ ನಮ್ಮ ಮಗಳಾದ ಅತ್ತಿಮಬ್ಬೆ ಸ್ಥಾಪಿಸಿದ ಆಶ್ರಯಧಾಮ- ಸಾಹಿತ್ಯ, ಸಂಸ್ಕೃತಿಯ ಅಭಿವೃದ್ಧಿಗೆ ಸಾಕಷ್ಟು ಪ್ರಯತ್ನಿಸುತ್ತಿದೆ.

ತೈಲಪ : ಮಲ್ಲಪರೇ ಅತ್ತಿಮಬ್ಬೆಯವರ ವಿಚಾರವಾಗಿ ನಾವು ಬಹಳಷ್ಟು ಕೇಳಿದ್ದೇವೆ. ಅವರ ತ್ಯಾಗ, ಬಲಿದಾನ, ಆತ್ಮೋನ್ನತಿಗೆ ನಡೆಸುತ್ತಿರುವ ಸಾಧನೆ. ಕವಿ, ಕಲಾವಿದರಿಗೆ ನೀಡುತ್ತಿರುವ ಪ್ರೋತ್ಸಾಹಗಳ ಬಗ್ಗೆ ಕೇಳಿ ಸಂತೋಷಪಟ್ಟಿದ್ದೇನೆ. ಅವರನ್ನೊಮ್ಮೆ ಕಂಡು ಮಾತನಾಡಿಸಬೇಕೆಂಬುದು ನಮ್ಮಾಸೆ.

ಮಲ್ಲಪ : ಅವಕಾಶ ಸದ್ಯದಲ್ಲಿಯೇ ಬರಲಿದೆ-ಪ್ರಭು ಆದರೆ ನಮ್ಮ ರಾಜ್ಯದಲ್ಲಿ ಎಷ್ಟೆಲ್ಲ ಶಾಂತಿ, ಸೌಹಾರ್ದಗಳು ನೆಲೆಸಿವೆ ಎಂದು ಭಾವಿಸಿದರೂ ಇನ್ನೂ ನಾವು ಸಂಪೂರ್ಣ ಸುರಕ್ಷಿತರಾಗಿಲ್ಲ. ಶತ್ರುದ್ವೇಷ ಇನ್ನೂ ನಮಗೆ ತಪ್ಪಿದ್ದಲ್ಲ.

ತೈಲಪ : ಅಂದರೆ, ಆಕ್ರಮಣದ ಸೂಚನೆಗಳೇನಾದರೂ ಕಂಡು ಬಂದಿವೆಯೇನು?

ಮಲ್ಲಪ : ಆಕ್ರಮಣದ ಸೂಚನೆ ಇಲ್ಲದಿದ್ದರೂ, ಬೇರೆ ಬೇರೆ ರಾಜ್ಯಗಳಿಂದ ಬಂದಿರುವ ಬೇಹುಗಾರರ ಬಹುದೊಡ್ಡ ಜಾಲ ಹರಡಿಕೊಂಡಿದೆ ಎಂಬುದು ನಮ್ಮವರ ಬೇಹಿನಿಂದ ತಿಳಿದುಬಂದಿದೆ. ಅದಕ್ಕಾಗಿಯೇ

ನಾನು ಸಮರ್ಥ ಬೇಹುಗಾರರ ತಂಡವೊಂದನ್ನು ಮೂಲೆ ಮೂಲೆಗಳಲ್ಲಿ ಶೋಧಿಸಿ ಬರಲು ಕಳುಹಿಸಿದ್ದೇನೆ.

**ತೈಲಪ** : ಈ ಚಾಲುಕ್ಯ ಸಾಮ್ರಾಜ್ಯದಲ್ಲಿ ಅಂತಹ ಕವಿ ಕಲಾವಿದರು ನೋವು, ಹತಾಶೆಗಳನ್ನು ಅನುಭವಿಸಬಾರದು. ಅವರು ಆರ್ಥಿಕವಾಗಿ ನೆಮ್ಮದಿಯಿಂದ ಇದ್ದಾಗಲೇ ನಿರಾತಂಕವಾಗಿ ಕಾವ್ಯ ರಚಿಸಲು ಸಾಧ್ಯ. ಅವರನ್ನು ನಮ್ಮ ತೆಕ್ಕೆಗೆ ತೆಗೆದುಕೊಳ್ಳಲೇಬೇಕು ಮಲ್ಲಪರೇ.

**ಮಲ್ಲಪ** : ಪ್ರಭು, ನಿಮ್ಮ ಔದಾರ್ಯ, ಕಲಾಪ್ರೇಮಗಳನ್ನು ಕಂಡು ಹೃದಯ ತುಂಬಿ ಬಂದಿದೆ. ರನ್ನಮಯ್ಯರಂತಹ ಕವಿ ಆಸ್ಥಾನ ಕವಿಗಳಾಗಿರಬೇಕೆಂಬುದು ನನ್ನ ಭಾವನೆಯೂ ಆಗಿತ್ತು. ಈಗ ನಿಮ್ಮ ಮಾತು ಕೇಳಿದ ಮೇಲೆ ನಿಸ್ಸಂಕೋಚವಾಗಿ ಪ್ರಾರ್ಥಿಸಬಲ್ಲೆ.

**ತೈಲಪ** : ನೀವು ಹಿರಿಯರು. ನಿಮ್ಮ ಕೈ ದೀವಿಟಗೆಯ ಬೆಳಕಿನಲ್ಲಿ ಹೆಜ್ಜೆ ಇಡುತ್ತಿರುವ ನಾನು ನಿಮ್ಮ ಎಲ್ಲ ಸಲಹೆ, ಸೂಚನೆಗಳಿಗೆ ಬದ್ಧನಾಗಿದ್ದೇನೆ. ನಿಮಗೆ ಯಾವುದು ಒಳ್ಳೆಯದೆನಿಸುವುದೋ ಅದನ್ನು ಆದೇಶಿಸಿ ನನ್ನಿಂದ ಮಾಡಿಸಬಹುದು. ಈ ಮಾತಿಗೆ ಎರಡಿಲ್ಲ.

**ಮಲ್ಲಪ** : ನನ್ನದು ಕೇವಲ ಎರಡು ವಿನಂತಿಗಳಿವೆ ಪ್ರಭು. ರನ್ನಮಯ್ಯರನ್ನು ನಮ್ಮ ಆಸ್ಥಾನಕ್ಕೆ ಕರೆಸಿಕೊಳ್ಳೋಣ! ಎರಡನೆಯದಾಗಿ ನಮ್ಮ ಅತ್ತಿಮಬ್ಬೆಯ ಸುಪುತ್ರ ಅಣ್ಣಿಗ ದೇವರನ್ನು ತಮ್ಮ ಸೇವೆಯಲ್ಲಿ ಉಳಿಸಿಕೊಳ್ಳೋಣ.

**ತೈಲಪ** : ಗಂಗರ ವಿಚಾರವಾಗಿ ಏನಾದರೂ ತಿಳಿದು ಬಂತೇ?

**ಮಲ್ಲಪ** : ಈಗ ಗಂಗರೇ ಸಂಕಟಕ್ಕೆ ಒಳಗಾಗಿದ್ದಾರೆ ಪ್ರಭು. ಚೋಳರ ಕಿರುಕುಳಕ್ಕೆ ಒಳಗಾಗಿ ಬಾಧೆ ಪಡುತ್ತಿರುವ ಗಂಗರಿಂದ ಸದ್ಯಕ್ಕೆ ಭಯವಿಲ್ಲ! ಶಿಲಹಾರರು ಚಾಲುಕ್ಯರ ಅಧಿಪತ್ಯವನ್ನು ಒಪ್ಪದೆ ತೊಂದರೆ ಕೊಟ್ಟಿದ್ದಕ್ಕೆ ನಮ್ಮ ದಂಡನಾಯಕರು ಅವರಿಗೆ ಸರಿಯಾಗಿ ಪಾಠ ಕಲಿಸಿ ಅಂಕೆಯಲ್ಲಿರಿಸಿದ್ದಾರೆ!

**ತೈಲಪ** : ಹಾಗಾದರೆ ನಾವು ಸಾಹಿತ್ಯ, ಕಲೆಗಳ ಉನ್ನತಿಗಾಗಿ ಯೋಚಿಸಬೇಕಾದ ಯೋಜನೆಗಳ ಕಡೆ ಗಮನ ಹರಿಸಬೇಕಿದೆ.

**ಮಲ್ಲಪ** : ಪ್ರಭು ನಾನೊಂದು ವಿಷಯವನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುವುದಿತ್ತು. ಸಾಹಿತ್ಯ, ಕಲೆ ಎಂದಾಗ ನೆನಪಾಯಿತು.

**ತೈಲಪ** : ಹೇಳಿ ಮಲ್ಲಪರೇ.

ಮಲ್ಲಪ : ಮೊನ್ನೆ. ನಾನು ನನ್ನ ಮಗಳನ್ನು ಕಂಡು ಬರಲು ಹೋಗಿದ್ದೆ. ಅಲ್ಲಿ ನನ್ನ ಮಗಳ ಆಶ್ರಯದಲ್ಲಿ ಮಹಾಕವಿಯೊಬ್ಬರನ್ನು ಕಂಡು ಮಾತನಾಡಿಸುವ ಅವಕಾಶ ಸಿಕ್ಕಿತು.

ತೈಲಪ : ಏನು ಮಹಾಕವಿಗಳೇ! ಯಾರವರು?

ಮಲ್ಲಪ : 'ರನ್ನ' ಎಂಬ ಹೆಸರಿನವರು. ಅವರನ್ನು ಮಾತನಾಡಿಸಿದಾಗ ಅವರ ಪ್ರತಿಭೆ, ಪಾಂಡಿತ್ಯಗಳ ಅಗಾಧತೆಯ ಪರಿಚಯವಾಯಿತು. ಜೊತೆಗೆ ನನ್ನ ಮಗಳಿಂದಲೂ ಅವರ ಬಗ್ಗೆ ಸಾಕಷ್ಟು ಕೇಳಿದೆ. (ನೋವು) ಅವರ ಜೀವನಗಾಥೆಯನ್ನು ಕೇಳಿ, ಬಹಳ ನೋವಾಯಿತು.

ತೈಲಪ : ಹಾಗಾದರೆ ಅವರ ಬಗ್ಗೆ ನೀವೇನೂ ಯೋಚಿಸಲಿಲ್ಲವೆ?

ಮಲ್ಲಪ : ಅನ್ಯ ಕವಿಗಳ ಅಸೂಯೆ, ಮಾತ್ಸರ್ಯಗಳಿಂದ ಪ್ರತಿಭಾ ಪುರಸ್ಕಾರ ವಂಚಿತರಾಗಿದ್ದಾರೆಂದು ಸ್ಪಷ್ಟವಾಯಿತು.

ತೈಲಪ : ಮಲ್ಲಪರೇ, ಇದಕ್ಕಿಂತ ನಿದರ್ಶನಗಳು ಬೇಕೆ?

ಮಲ್ಲಪ : ನಮ್ಮ ಅಣ್ಣಿಗ–ತಂದೆಯ ಎಲ್ಲ ಗುಣಗಳನ್ನು ರಕ್ತಗತವಾಗಿ ಪಡೆದಿದ್ದಾನೆ. ನಾನು ಅಲ್ಲಿಗೆ ಹೋದ ಕ್ಷಣದಿಂದ, ಚಾಲುಕ್ಯ ಸೈನ್ಯದಲ್ಲಿ ತನ್ನನ್ನು ಸೇರಿಸಿಕೊಳ್ಳಬೇಕೆಂದು ಒಂದೇ ಸಮನೆ ಹಟ ಹಿಡಿದಿದ್ದಾನೆ ಪ್ರಭೂ!

ತೈಲಪ : ಚಿರಂಜೀವಿ ಅಣ್ಣಿಗರ ಉತ್ಸಾಹ ಕಂಡು ಹೆಮ್ಮೆ ಎನಿಸುವುದಾದರೂ ಇರುವ ಒಬ್ಬನೇ ಮಗನನ್ನು ಹೀಗೆ ಕಳಿಸಿಬಿಟ್ಟರೆ ಆ ತಾಯಿಯ ಹೃದಯಕ್ಕೆ ನೋವಾಗುವುದಿಲ್ಲವೆ?

ಮಲ್ಲಪ : ನಿಜ ಪ್ರಭು. ಎಳೆತನದಲ್ಲಿಯೇ ತಂದೆಯ ಪ್ರೀತಿಯಿಂದ ವಂಚಿತನಾದ ಅಣ್ಣಿಗ, ತಾಯಿಯ ಆಸರೆಯಲ್ಲಿ ಅಕ್ಕರೆಯಲ್ಲಿ ಬೆಳೆದವನು. ಅವನನ್ನು ಕಳಿಸಿಕೊಡುವಾಗ ಮಾತೃ ಹೃದಯಕ್ಕೆ ನೋವಾಗುವುದು ಸಹಜವೇ! ಆದರೆ ನನ್ನ ಮಗಳದು ಉಕ್ಕಿನ ಹೃದಯ. ಇಂತಹ ನೋವಿನ ಆಘಾತಗಳಷ್ಟನ್ನೋ ಸಹಿಸಿಕೊಂಡಿದ್ದಾಳೆ. ಅಲ್ಲದೇ ಧೈರ್ಯ ಸಾಹಸಗಳಲ್ಲಿ ತನ್ನ ಪತಿಯಂತೆ ತನ್ನ ಮಗನೂ ಕೀರ್ತಿವಂತನಾಗಬೇಕೆಂಬುದು ಅವಳ ಆಂತರ್ಯದ ಆಸೆ!

ತೈಲಪ : ಬಹಳ ಸಂತೋಷವಾಗುತ್ತಿದೆ ಮಲ್ಲಪರೇ. ತಮ್ಮ ಮೊಮ್ಮಗನನ್ನು ನಮ್ಮ ಮಕ್ಕಳಂತೆಯೇ ಭಾವಿಸುತ್ತೇವೆ.

ಮಲ್ಲಪ : ಕೃತಾರ್ಥರಾದೆವು ಪ್ರಭು. ಹಾಗೆಯೇ ರನ್ನಮಯ್ಯರನ್ನು ನಮ್ಮ ಆಸ್ಥಾನಕ್ಕೆ ಬರಮಾಡಿಕೊಳ್ಳುವ ಬಗೆಗೆ ಮತ್ತೊಮ್ಮೆ ಯೋಚಿಸಬೇಕೆಂಬುದು ನನ್ನ ಪ್ರಾರ್ಥನೆ.

ತೈಲಪ : ಆಗಬಹುದು. ನಾವು ಸಂತೋಷದಿಂದ ಹೃದಯಪೂರ್ವಕವಾಗಿ ರನ್ನಮಯ್ಯರನ್ನು ನಮ್ಮ ಆಸ್ಥಾನಕ್ಕೆ ಆಹ್ವಾನಿಸುತ್ತಿದ್ದೇವೆಂಬ ಸಂದೇಶವನ್ನು ಅವರಿಗೆ ಕಳಿಸಿ ಕೊಡುವ ವ್ಯವಸ್ಥೆಯನ್ನು ಮಾಡಿ.

ಮಲ್ಲಪ : ಅಪ್ಪಣೆ ಪ್ರಭು!

– – ವಿರಾಮ – –

ಅತ್ತಿಮಬ್ಬೆ : ಅಪ್ಪಾಜಿ ಇದೇನು ಹೇಳದೆ ಕೇಳದೆ ಹೀಗೆ ದಿಢೀರನೆ ಬಂದು ಬಿಟ್ಟಿರಿ? ಏನಾದರೂ ರಾಜಕಾರ್ಯವಿತ್ತೇನು?

ಮಲ್ಲಪ : ಒಂದು ರೀತಿಯಿಂದ ರಾಜಕಾರ್ಯವೂ ಹೌದು! ನಾನು ಬಂದಾಗ– ನೀನು, ರನ್ನಮಯ್ಯರೂ ಶ್ರವಣ ಬೆಳಗೊಳಕ್ಕೆ ಹೋಗಿದ್ದೀರೆಂದು ತಿಳಿಯಿತು. ಪ್ರವಾಸ ಹೇಗಿತ್ತು ಮಗಳೆ! ಬಾಹುಬಲಿ ಸ್ವಾಮಿಯ ದರ್ಶನವಾಯಿತೆ?

ಅತ್ತಿಮಬ್ಬೆ : ಅಪ್ಪಾಜಿ, ಬಾಹುಬಲಿಯ ಮಹಾಮಸ್ತಕಾಭಿಷೇಕ ನೋಡಿ ಬಂದ ಮೇಲೆ ಈ ಜನ್ಮಕ್ಕೆ ಇಷ್ಟು ಸಾಕೆಂಬ ತೃಪ್ತಿಯಾಗಿದೆ. ಚಾವುಂಡರಾಯನ ಮಗ ಜಿನದೇವಣ್ಣನ ಗೃಹದಲ್ಲಿ ನಡೆದ ಪರಶುರಾಮ ಚರಿತೆಯ ಪಠಣ–ವ್ಯಾಖ್ಯಾನಗಳು ಮನಸ್ಸಿಗೆ ಶಾಂತಿ, ನೆಮ್ಮದಿಗಳನ್ನು ತಂದಿತು.

ಮಲ್ಲಪ : ಪುಣ್ಯವಂತೆಯಾದೆ ಬಿಡು ಮಗಳೆ! ಚಾವುಂಡರಾಯರ ಶಕ್ತಿ, ಸಾಮರ್ಥ್ಯಗಳು, ಮಾನವ ವಿನಾಶಕಾರೀ ಸಂಘರ್ಷ ಸಮರಗಳಿಂದ ಭಿನ್ನವಾದ, ಧರ್ಮೋದ್ಧಾರ, ಆತ್ಮೋದ್ಧಾರಗಳಿಗೆ ಹಾದಿ ಮಾಡಬಲ್ಲ ರಚನಾತ್ಮಕ ಕೆಲಸಗಳ ಕಡೆ ಹೊರಳಿದ್ದು, ಶಾಂತಿ ಜಗತ್ತಿನ ನಿರ್ಮಾಣಕ್ಕೆ ನಾಂದಿಯಾಯಿತು.

ಅತ್ತಿಮಬ್ಬೆ : ಅಪ್ಪಾಜಿ, ತ್ಯಾಗಮೂರ್ತಿ ಬಾಹುಬಲಿಯ ಮಹೋನ್ನತ ಶಿಲ್ಪವನ್ನು ನೋಡಿ ತಣಿಯುವುದಕ್ಕೆ ಎರಡು ಕಣ್ಣು ಸಾಲದು.

ಮಲ್ಲಪ : ನನಗೂ ಒಮ್ಮೆ ದರ್ಶಿಸಿ ಬರಬೇಕೆಂಬ ಅಭಿಲಾಷೆ ಇದೆ ಮಗಳೆ. (ನಿಟ್ಟುಸಿರು) ಆದರೆ ಏನು ಮಾಡಲಿ ಹೇಳು! ಈ ರಾಜಕೀಯ ಚಟುವಟಿಕೆಗಳಿಂದ ಬಿಡುಗಡೆಯೇ ಇಲ್ಲವಾಗಿದೆ!

ಅತ್ತಿಮಬ್ಬೆ : ಅಪ್ಪಾಜಿ ಅಣ್ಣಿಗ ಹೇಗಿದ್ದಾನೆ? ಹೊಸ ಪರಿಸರ ಬದುಕುಗಳಿಗೆ ಹೊಂದಿಕೊಂಡಿದ್ದಾನೆಯೇ?

ಮಲ್ಲಪ : (ಉತ್ಸಾಹ) ಬಹಳ ಉತ್ಸಾಹದಿಂದ ಸೈನ್ಯದಲ್ಲಿ ಸೇರಿ, ತೀವ್ರ ಗತಿಯಿಂದ ಶಸ್ತ್ರಾಸ್ತ್ರ ವಿದ್ಯೆಯಲ್ಲಿ ಪರಿಣತಿ ಗಳಿಸುತ್ತಿದ್ದಾನೆ. ಮುಂಬರುವ

ಯುದ್ಧಗಳಲ್ಲಿ ತನಗೆ ಅವಕಾಶ ಸಿಗಲೇಬೇಕೆಂಬ ಹಟದೊಂದಿಗೆ ಕಲಿಯುತ್ತಿದ್ದಾನೆ.

ಅತ್ತಿಮಬ್ಬೆ : ಅಪ್ಪಾಜಿ. ನಮ್ಮ ರನ್ನಮಯ್ಯರ ವಿಚಾರವಾಗಿ ಏನು ಯೋಚಿಸಿದಿರಿ. ಅವರ ಪ್ರತಿಭೆಗೆ ತಕ್ಕ ಪುರಸ್ಕಾರ ಸಿಗುತ್ತಿಲ್ಲವೆಂಬ ನೋವು ಮನದಾಳದಲ್ಲಿ ಮುಳ್ಳಾಡುತ್ತಿದೆ. ಪ್ರಭುಗಳೊಂದಿಗೆ ಮಾತನಾಡಿದಿರಿ ತಾನೇ?

ಮಲ್ಲಪ : ಓಹೋ! ನಾನೀಗ ಬಂದದ್ದು ಅದೇ ಕೆಲಸದ ಮೇಲೆ. ರನ್ನಮಯ್ಯರ ಕಾವ್ಯ, ಶಕ್ತಿ ಸಾಮರ್ಥ್ಯಗಳ ಬಗ್ಗೆ ಮಾತನಾಡಿದೆ. ಪ್ರಭುಗಳು ಒಮ್ಮೆಲೇ ಅವರನ್ನು ತಮ್ಮಲ್ಲಿಗೆ ಆಹ್ವಾನಿಸಲು ಒಪ್ಪಿದರು. ಅದಕ್ಕಾಗಿಯೇ ಅವರ ಸಂದೇಶ ಹೊತ್ತು ನಾನೇ ಬಂದಿದ್ದೇನೆ.

ಅತ್ತಿಮಬ್ಬೆ : ಅಪ್ಪಾಜಿ ರನ್ನಮಯ್ಯರು ಯಾವುದೋ ಒಂದು ಹೊಸ ಕಾವ್ಯದ ರಚನೆಯಲ್ಲಿದ್ದಾರಂತೆ. ವಸ್ತುವಿಗಾಗಿ ಚಿಂತಿಸುತ್ತಿದ್ದರು. ನೀವು ಬಂದದ್ದು ಒಳ್ಳೆಯದೇ ಆಯಿತು.

– – ರನ್ನಮಯ್ಯನ ಪ್ರವೇಶ ––

ಅತ್ತಿಮಬ್ಬೆ : ಬನ್ನಿ ರನ್ನಮಯ್ಯರೇ, ಇಂದಿನಿಂದ ನಿಮ್ಮ ಚಿಂತೆಗಳು ದೂರವಾಗಲಿವೆ. ಈಗ ತಾನೇ ರಾಜಧಾನಿಯಿಂದ ಅಪ್ಪಾಜಿಯವರು ಬಂದಿದ್ದಾರೆ.

ರನ್ನಮಯ್ಯ : ಪೂಜ್ಯರಿಗೆ ನಮಸ್ಕಾರ. ಯಾವಾಗ ಬರೋಣವಾಯಿತು.

ಮಲ್ಲಪ : ಬನ್ನಿ ಬನ್ನಿ ರನ್ನಮಯ್ಯರೇ! ಈಗಷ್ಟೇ ಬಂದೇ. ಪ್ರಭುಗಳು ತಮ್ಮನ್ನು ಕಲ್ಯಾಣಕ್ಕೆ ಆಹ್ವಾನಿಸಿದ್ದಾರೆ.

ರನ್ನಮಯ್ಯ : ಕೃತಾರ್ಥನಾದೆ.

ಮಲ್ಲಪ : ರನ್ನಮಯ್ಯರೇ. ಯಾವುದೋ ಹೊಸ ಕಾವ್ಯದ ರಚನೆಯಲ್ಲಿ ತೊಡಗಿದ್ದೀರೆಂದು ಕೇಳಿದೆ. ಎಂತಹ ಕಾವ್ಯ ಬರೆಯಬೇಕೆಂದು ಯೋಚಿಸುತ್ತಿದ್ದೀರಿ.

ರನ್ನಮಯ್ಯ : ಸ್ಪಷ್ಟವಾಗಿ ಏನೂ ಯೋಚಿಸಿಲ್ಲ. ತಮ್ಮಂತಹವರು ಎಂತಹ ವಸ್ತು ಆಯ್ದುಕೊಳ್ಳಬೇಕೆಂಬುದನ್ನು ಸೂಚಿಸಲು ಸಾಧ್ಯವಾದರೆ?

ಮಲ್ಲಪ : ರನ್ನಮಯ್ಯರೇ, ನಾವು ಏನಿದ್ದರೂ ಕಾವ್ಯಪ್ರೇಮಿಗಳು, ಸಹೃದಯರು, ನೀವು ಬರೆದದ್ದನ್ನು ಕೇಳಿ ರಸಾಸ್ವಾದ ಮಾಡಬಲ್ಲೆವೇ ಹೊರತಾಗಿ, ನಿಮಗೆ ಇಂತಹ ವಸ್ತುವನ್ನು ಆಯ್ದುಕೊಳ್ಳಿರೆಂದು ಆದೇಶಿಸುವುದಾಗಲೀ, ಸೂಚಿಸುವುದಾಗಲೀ ನಮ್ಮಿಂದ ಸಾಧ್ಯವೇ?

**ಅತ್ತಿಮಬ್ಬೆ** : ಅಲ್ಲದೆ ಕಾವ್ಯ ಸಿದ್ಧಿಯನ್ನು ಪಡೆದ ನಿಮ್ಮ ಪ್ರತಿಭೆ ಜಗತ್ತಿನಲ್ಲಿ ಮೂಡಿ ನಿಲ್ಲುವ ವರ್ಣರಂಜಿತ ಕಲ್ಪನೆಗಳನ್ನು ನಮಗೆ ಊಹಿಸುವುದಕ್ಕೂ ಆಗುವುದಿಲ್ಲ. ಆದರೂ ನೀವೊಮ್ಮೆ ಸಾಂದರ್ಭಿಕವಾಗಿ ನಿಮ್ಮ ಕಾವ್ಯದ ಆಶಯದ ಬಗ್ಗೆ ಪ್ರಸ್ತಾಪಿಸಿದ್ದೀರಿ.

**ರನ್ನಮಯ್ಯ** : ನಾನು ಪ್ರಸ್ತಾಪಿಸಿದ್ದೇನೆ..........ಯಾಕೋ ನೆನಪಾಗುತ್ತಿಲ್ಲ.

**ಅತ್ತಿಮಬ್ಬೆ** : ಅದೇ, ಯುದ್ಧಗಳಿಂದ ಆಗುವ ಅನಾಹುತಗಳನ್ನು ಒಳಗೊಂಡತಹ ವಸ್ತುವನ್ನು ಆಯ್ದುಕೊಂಡು ಅದರ ಮೂಲಕ ಗುಣಾವಗುಣಗಳನ್ನು ವಿಶ್ಲೇಷಿಸಬೇಕೆಂದು ಹೇಳಿದ್ದರಿ.

**ರನ್ನಮಯ್ಯ** : ಓಹ್. ತಾಯಿ ನೀವು ಈ ಅಲ್ಪಸ ಮಾತುಗಳಿಗೆ ಎಷ್ಟೊಂದು ಮಹತ್ವಕೊಟ್ಟು ನೆನಪಿನಲ್ಲಿ ಭದ್ರಪಡಿಸಿಕೊಳ್ಳುತ್ತೀರಿ. ನಿಜ. ನಾನು ಅದನ್ನು ಎಂದಿನಿಂದಲೋ ಆಲೋಚಿಸುತ್ತಿದ್ದೆ. ಆದರೆ ಯುದ್ಧವನ್ನು ಪ್ರತ್ಯಕ್ಷವಾಗಿ ನೋಡದೆ ಕಲ್ಪನೆ ಮಾತ್ರದಿಂದ ಬರೆಯುವುದು ಅಷ್ಟು ಸಮರ್ಪಕವಾಗಲಾರದೇನೋ ಎನಿಸಿದೆ.

**ಅತ್ತಿಮಬ್ಬೆ** : ಹೋಗಲಿ ಬಿಡಿ. ಇನ್ನೇನು, ರಾಜಧಾನಿಗೆ ಹೋಗಲಿದ್ದೀರಿ. ಅಲ್ಲಿ, ಯುದ್ಧದಲ್ಲಿ ಭಾಗವಹಿಸಿದ ಹಲವು ಮಂದಿಯ ಮೂಲಕ ಯುದ್ಧವರ್ಣನೆ ಕೇಳಿ ಒಂದು ಚಿತ್ರವನ್ನು ಕಲ್ಪಿಸಿಕೊಳ್ಳಬಲ್ಲಿರಿ.

**ರನ್ನಮಯ್ಯ** : ಎಷ್ಟಾದರೂ ಕಣ್ಣಿಂದ ನೋಡಿದಾಗಲೇ ಬಲ್ಲೆ.

**ಮಲ್ಲಪ** : ಕೇಳ್ಮೆ, ಕಲ್ಪನೆಗಳು ಎರಡೂ ಸೇರಿದರೆ ನೀವೇ ಒಂದು ಹೊಸ ರೀತಿಯ ಸಮರ ಚಿತ್ರವನ್ನು ಕೊಡಬಹುದಲ್ಲ?

**ರನ್ನಮಯ್ಯ** : ಪಂಪ ಮಹಾಕವಿ ಯುದ್ಧ ಪ್ರಸಂಗಗಳನ್ನುಳ್ಳ ಮಹಾಭಾರತವನ್ನು ಬಿಟ್ಟು ಇಳಿಸಿದ್ದಾರಲ್ಲ.

**ಮಲ್ಲಪ** : ಅಲ್ಲಿ ಇಡೀ ಮಹಾಭಾರತ ಕಥೆಯಿದ್ದರೆ, ಮಹಾಭಾರತದ ಯಾವುದಾದರೂ ಯುದ್ಧ ಪ್ರಸಂಗವನ್ನೇ ನೀವು ಏಕೆ ಕಾವ್ಯವಾಗಿಸಬಾರದು?

**ರನ್ನಮಯ್ಯ** : ಹೂಂ! ಇದು ಬಹಳ ಒಳ್ಳೆಯ ಸೂಚನೆ ಎಂದೇ ಅನಿಸುತ್ತದೆ. ಖಂಡಿತವಾಗಿ ಇದರ ಬಗ್ಗೆ ಆಲೋಚಿಸುತ್ತೇನೆ.

**ಮಲ್ಲಪ** : ರನ್ನಮಯ್ಯರೇ, ನೀವು ರಾಜಧಾನಿಗೆ ಹೊರಡುವ ಸಿದ್ಧತೆಗಳನ್ನು ಮಾಡಿಕೊಳ್ಳಿ, ಒಳ್ಳೆಯ ಮುಹೂರ್ತ ಒಂದನ್ನು ನೋಡಿ ಪ್ರಯಾಣ ಬೆಳೆಸುವಾ!

– – ವಿರಾಮ – –

ತೈಲಪ : ನನ್ನ ಪ್ರೀತಿಯ ಮಂತ್ರಿಗಳೇ ದಂಡನಾಯಕರೇ, ಇಲ್ಲಿಯವರೆಗೆ ನಿಶ್ಚಿಂತೆಯಿಂದ ಇದ್ದ ನಮಗೆ ಈಗ ಮತ್ತೆ ಶತ್ರುದಾಳಿ ಎದುರಾಗಿದೆ. ಪರಮಾರರು ತಮ್ಮ ಮೊದಲಿನ ಸೋಲನ್ನು ಮರೆತು ಮತ್ತೆ ಚಿಗುರಿಕೊಂಡಿದ್ದಾರೆ.

ಮಲ್ಲಪ : ಪರಮಾರ ಮುಂಜರು ಮೊದಲಿನಿಂದಲೂ ಸೇಡನ್ನು ತೀರಿಸಿಕೊಳ್ಳಲು ಹೊಂಚಿ ಕಾಯುತ್ತಲೇ ಇದ್ದಾರೆ. ಮುಂಜರನ್ನು ಹೇಗಾದರೂ ಬಗ್ಗು ಬಡಿದು, ಮತ್ತೊಮ್ಮೆ ತಲೆ ಎತ್ತದಂತೆ ಮಾಡಬೇಕು.

ತೈಲಪ : ಹೌದು ಮಲ್ಲಪರೆ. ಈ ಏಲಾಪುರದ ಮೇಲಿನ ಆಕ್ರಮಣವನ್ನು ಎದುರಿಸಲು ಯಾವ ರೀತಿಯ ಸೈನ್ಯ ರಚನೆ ಮಾಡಿಕೊಂಡಿದ್ದೀರಿ.?

ಮಲ್ಲಪ : ಪ್ರಭು ಈಗಾಗಲೇ ಸೈನ್ಯವನ್ನು ಬೇರೆ ಬೇರೆ ಘಟಕಗಳಲ್ಲಿ ವಿಂಗಡಿಸಲಾಗಿದೆ. ನಮ್ಮ ಸೈನ್ಯದ ಬಲವಾದ ತೋಮರ ಘಟಕವೊಂದನ್ನು ಮತ್ತು ಬಿಲ್ಲಾಗ್ಗರರ ತಂಡವೊಂದನ್ನು ಏಲಾಪುರದ, ಅದರಲ್ಲಿಯೂ ಕೈಲಾಸ ದೇವಾಲಯದ ರಕ್ಷಣೆಗೆಂದು ಕಳಿಸಲಾಗಿದೆ.

ತೈಲಪ : ಈ ವ್ಯವಸ್ಥೆಯಿಂದ ಶತ್ರು ಸೈನ್ಯವನ್ನು ಎದುರಿಸಲಾಗುವುದೇನು?

ಮಲ್ಲಪ : ತಮಗೆ ಸಂಶಯಬೇಡ. ಇತ್ತೀಚಿಗೆ ಅಲ್ಲಿಂದ ಬೇಹು ತರಿಸಿಕೊಂಡಿದ್ದೇವೆ. ಶತ್ರು ಪಾಳೆಯವನ್ನು ಹೇಗೆ ಛಿದ್ರಗೊಳಿಸಿ ಪ್ರವೇಶಿಸಬೇಕೆಂಬುದನ್ನು ತಿಳಿದ ಸಮರ್ಥ ಸೈನ್ಯವನ್ನು ಕಳಿಸಿ ಮುಂಜನನ್ನು ಮುಖಭಂಗಿತನನ್ನಾಗಿಸಲಿ. ನಾನೇ ನಾಯಕತ್ವ ವಹಿಸಬೇಕೆಂದಿದ್ದೇನೆ. ಅಂದ ಹಾಗೆ ಪ್ರಭು ನಿಮ್ಮ ಸೋದರ ಮಾವಂದಿರಾದ ಅಮ್ಮುಗಿಯವರ ಅಭಿಪ್ರಾಯವೇನೆಂದು ತಿಳಿಯೋಣ.

ಅಮ್ಮುಗಿ : ಸಮಸ್ತ ಸೈನ್ಯವನ್ನೂ..............ಹಿಮ್ಮೆಟ್ಟಿಸುವ ಯೋಜನೆಯನ್ನೂ ರೂಪಿಸಿದ್ದೇವೆ.

ಮಲ್ಲಪ : ನಮ್ಮ ಇಡೀ ಸೈನ್ಯವನ್ನು ಮೂರು ಗುಂಪುಗಳಾಗಿ ವಿಂಗಡಿಸೋಣ. ಯಾವ ಗುಂಪಿಗೆ ಯಾರ ನಾಯಕತ್ವ ಎಂಬುದನ್ನು ಚಕ್ರವರ್ತಿಗಳೇ ತೀರ್ಮಾನಿಸಲಿ.

ತೈಲಪ : ನಿಮ್ಮ ಸೂಚನೆ ಸರಿಯಾದ್ದೆ. ಏಲಾಪುರದ ಯುದ್ಧದ ಸಮಗ್ರ ನಾಯಕತ್ವವನ್ನು ನಾನೇ ವಹಿಸಿಕೊಳ್ಳುತ್ತೇನೆ. ಇನ್ನು ಮೂರು ಗುಂಪಿನ ಸೈನ್ಯದ ನಾಯಕತ್ವವನ್ನು ಕ್ರಮವಾಗಿ ಮಲ್ಲಪರು, ಪಂಡಿಗರು ಮತ್ತು ಅಮ್ಮುಗಿಯವರು ವಹಿಸಿಕೊಳ್ಳಲಿ.

**ಮಲ್ಲಪ** : ಪ್ರಭು ಈ ಸಂದರ್ಭದಲ್ಲಿ ನನ್ನದೊಂದು ಮನವಿ.

**ತೈಲಪ** : ಹೇಳಿ ಮಲ್ಲಪರೆ, ಏನಾಗಬೇಕು ಹೇಳಿ.

**ಮಲ್ಲಪ** : ಏನಿಲ್ಲ. ಅದೇ ನನ್ನ ಮೊಮ್ಮಗ ಅಣ್ಣಿಗನಿಗೂ ಯುದ್ಧದಲ್ಲಿ ಭಾಗವಹಿಸಬೇಕೆಂಬ ಆಸೆ.

**ತೈಲಪ** : ಅಣ್ಣಿಗರೇ ಅವರಿನ್ನೂ ಚಿಕ್ಕವರಲ್ಲವೇ?

**ಅಮ್ಮಗಿ** : ಚಿಕ್ಕವರೇ ಆದರೂ ತುಂಬಾ ಉತ್ಸಾಹ ಉಳ್ಳವರೆಂದು ಬಲ್ಲೆ. ಬಹಳ ಶೂರವಂತ, ಧೈರ್ಯವಂತ ಎಂಬುದನ್ನೂ ಬಹಳವಾಗಿ ಕೇಳಿದ್ದೇನೆ.

**ಮಲ್ಲಪ** : ಅದೇ ಕಷ್ಟಕ್ಕೆ ಇಟ್ಟುಕೊಳ್ಳುವುದು! ಯೌವನೋತ್ಸಾಹ , ಹುರುಪು, ಹುಮ್ಮಸ್ಸುಳ್ಳವರಾಗಿ ಆತುರದ ನಿರ್ಣಯಗಳಿಗೆ ಬಲಿಬೀಳುವಂತಾಗಬಹುದು.

**ಅಮ್ಮಗಿ** : ಮಲ್ಲಪರೇ ಒಂದು ಕೆಲಸ ಮಾಡಿ. ಹೇಗಿದ್ದರೂ ಪ್ರಭುಗಳ ರಕ್ಷಣೆಗೆ ಭಿಲ್ಲಮರನ್ನು ನೇಮಿಸಬೇಕಾಗಿದೆ. ಪ್ರಭುಗಳ ಹೊಣೆಗಾರಿಕೆ ಗುರುತರವಾದ್ದು. ಎಲ್ಲರ ಕಣ್ಣೂ ಅತ್ತ ಇರಬೇಕಾಗಿದೆ. ಅವರ ರಕ್ಷಣೆಗೆ ಇರುವವರ ಸಂಖ್ಯೆ ಸೀಮಿತ. ಓಡಾಟವೂ ಕಡಿಮೆ. ಭಿಲ್ಲಮರ ಭದ್ರ ಕಾವಲಿನಲ್ಲಿ ಹುಡುಗ ಸುರಕ್ಷಿತನಾಗಿ ಇರುತ್ತಾನೆ. ನಿಮ್ಮ ಹೊಣೆಗಾರಿಕೆಯ ವಿಸ್ತಾರದಲ್ಲಿ ಅವನ ಬಗ್ಗೆ ಗಮನ ಹರಿಸುವುದು ಸಾಧ್ಯವಾಗುವುದಿಲ್ಲ ಸರಿಯೂ ಎನಿಸುವುದಿಲ್ಲ.

**ಮಲ್ಲಪ** : ಈಗ ಯುದ್ಧದ ವಿಚಾರವಾಗಿ ಎಲ್ಲವೂ ನಿಶ್ಚಿತವಾದಂತಾಗಿದೆ. ಇನ್ನು, ರಾಜಧಾನಿಯ ರಕ್ಷಣೆಯ ಬಗ್ಗೆ ತಮ್ಮ ಆಲೋಚನೆಯೇನು ಪ್ರಭು?

**ತೈಲಪ** : ಪಂಡಿಗರು ಈ ವಿಚಾರವಾಗಿ ಆಗಲೇ ಆಲೋಚಿಸಿದ್ದಾರೆ. ಯೊಟ್ಟಿಗ ಕುಮಾರ ಕೃಷ್ಣರನ್ನು ಬನವಾಸಿಯಿಂದ ಬರಮಾಡಿಕೊಳ್ಳೋಣ.

**ಮಲ್ಲಪ** : ಹಾಗಾದರೆ ಅವರಿಗೆ ಈ ಕೂಡಲೇ ಬೇಹು ಕಳಿಸಬೇಕಾಗಿದೆ. ಅವರಲ್ಲಿಗೆ ಬಂದ ಮೇಲ ರಕ್ಷಣೆಯ ವ್ಯವಸ್ಥೆಯ ಬಗ್ಗೆ ತಿಳಿಸಿ ಹೇಳೋಣ.

**ತೈಲಪ** : ಸೇನಾಪತಿಗಳೇ, ನಾವು ಸಿಂಹಾಸನಾರೋಹಣ ಮಾಡಿದ ಮೇಲೆ ನಡೆಯಲಿರುವ ಪ್ರಥಮ ಸಮರ ಇದು! ಚಾಲುಕ್ಯ ಸಾಮ್ರಾಜ್ಯಕ್ಕೆ ಸೋಲೆಂಬುದು ಇನ್ನೂ ಇರಬಾರದು. ನಮ್ಮ ಶತ್ರುಗಳಿಗೆ ನಮ್ಮ ಬಲಾಬಲಗಳ ಪ್ರಮಾಣದ ಅರಿವಾಗಬೇಕು. ಎಂದೆಂದಿಗೂ ನಮ್ಮ ತಂಟೆಗೆ ಬರುವ ಸಾಹಸ ಮಾಡದಂತಾಗಬೇಕು.

– – ವಿರಾಮ – –

ಕಾಳಲದೇವಿ : ವಿನಯಾ ನಿನ್ನ ಮತ್ತು ಕೃಷ್ಣರ ದಾಂಪತ್ಯದ ಅನೋನ್ಯತೆ ನನಗೆ ಇನ್ನಿಲ್ಲದ ಸಂತಸ ತಂದಿದೆ. ನೀನು ಅವರನ್ನು ಪ್ರೀತಿಸಿಸದೆಯೆಂದು ಕೇಳಿದಾಗ ನನಗೆ ಮತ್ತು ನಿನ್ನ ತಂದೆಗೆ ಬಹಳ ಸಿಟ್ಟಾಗಿತ್ತು. ಹೋಗಲಿ ಬಿಡು ಆದದ್ದೆಲ್ಲ ಒಳ್ಳೆಯದೇ ಆಯಿತು.

ವಿನಯಾ : ಕೃಷ್ಣರಂತಹ ವ್ಯಕ್ತಿಯನ್ನು ಪತಿಯಾಗಿ ಪಡೆಯಲು ನಿಜವಾಗಿಯೂ ನಾನು ಪುಣ್ಯ ಮಾಡಿದ್ದೆ ಅಪ್ಪ. ಅವರ ನಿಸ್ವಾರ್ಥತೆ, ಔದಾರ್ಯ, ಸ್ವಾಮಿಭಕ್ತಿಗಳು ನನಗೆ ಹೆಮ್ಮೆ ಎನಿಸಿವೆ.

ಕಾಳಲ : ನಿಜ ಮಗಳೆ, ನನಗೂ ಈಗ ಅವರ ಬಗ್ಗೆ ಗರ್ವ ಪಡುವಂತಾಗಿದೆ........ ನಿಮ್ಮಿಬ್ಬರ ಅನೋನ್ಯತೆ, ಸುಖ, ಸಂತೋಷಗಳು ತೃಪ್ತಿ ಎನಿಸಿದೆ.

ವಿನಯಾ : ನನ್ನವರು ಯಾವುದರಲ್ಲಿಯೂ ಮುಂದುವರೆಯುವ ಪ್ರವೃತ್ತಿಯುಳ್ಳವರಲ್ಲ. ಪಾಲಿಗೆ ಬಂದದ್ದೇ ಪಂಚಾಮೃತವೆಂದು ಭಾವಿಸಿ ತೃಪ್ತಿ ಪಟ್ಟುಕೊಳ್ಳುವವರು. ನಾನೆಲ್ಲಿ ಕೈ ಜಾರಿ ಹೋಗುತ್ತೇನೋ ಎಂದು ಹೆದರಿದ್ದ ಅವರಿಗೆ ನಾನು ಸಿಕ್ಕಿದ್ದು ತನಗೆ ದೊರೆಯಬಹುದಾಗಿದ್ದ ಸಾಮ್ರಾಜ್ಯಕ್ಕಿಂತ ಅಮೂಲ್ಯವೆಂದು ಹೇಳುತ್ತಿರುತ್ತಾರೆ.

– – ಕೃಷ್ಣನ ಪ್ರವೇಶ – –

ಕಾಳಲದೇವಿ : ವಿನಯಾ ಅಳಿಯಂದಿರು ಬರಲಿದ್ದಾರೆ. ನಾನಿನ್ನು ಬರುತ್ತೇನೆ.

ವಿನಯಾ : ಇದೇನು ಸ್ವಾಮಿ ಹೀಗೆ ಪೂರ್ವ ಸೂಚನೆಯಿಲ್ಲದೆ ಪ್ರತ್ಯಕ್ಷರಾಗಿ ಬಿಟ್ಟಿದ್ದೀರಿ.

ಕೃಷ್ಣ : ಹೂಂ! ನಮ್ಮ ದೇವಿಯವರನ್ನು ಯಾಕೋ ನೋಡಬೇಕೆನಿಸಿತು. ಅದಕ್ಕೇ ಬಂದು ಬಿಟ್ಟೆವು.

ವಿನಯಾ : ಸಾಕು ಮಾಡಿ ನಿಮ್ಮ ಪರಿಹಾಸ. ನೀವು ಹೀಗೆ ಇದ್ದಕ್ಕಿದ್ದಂತೆ ಬಂದಿರೆಂದ ಮೇಲೆ ಯಾವುದೋ ತುರ್ತು ಕೆಲಸವಿದ್ದಿರಲೇಬೇಕು.

ಕೃಷ್ಣ : ಸರಿಯಾಗಿ ಊಹಿಸಿದೆ.

ವಿನಯಾ : ಅಂದರೆ ಬನವಾಸಿಯ ಆಡಳಿತಕ್ಕೆ ಏನಾದರೂ ವಿಘಾತ ಉಂಟಾಗಿದೆಯೇನು?

ಕೃಷ್ಣ : ಅದೇನೂ ಇಲ್ಲ. ಆದರೆ ಮಹಾಮಂತ್ರಿ ಮಲ್ಲಪರು ಬಂದಿದ್ರು. ಸೆರೆಮನೆಯಲ್ಲಿ ಕೊಳೆಯುತ್ತಿರುವ ಗಬ್ಬೇಂದ್ರರ ಹಿತ ಚಿಂತಕರು,

ಗಬ್ಬೀಂದ್ರನನ್ನು ಸೆರೆಮನೆಯಿಂದ ತಪ್ಪಿಸಲು ಸಂಚು ಮಾಡುತ್ತಿದ್ದಾರೆ ಎಂಬ ಬೇಹು ಬಂದಿದೆ ಎಂದು ತಿಳಿಸಿದರು.

**ವಿನಯಾ** : ಅದಕ್ಕೆ ನೀವೇನು ಮಾಡಬೇಕಂತೆ?

**ಕೃಷ್ಣ** : ನಾನು ಈ ಕೂಡಲೇ ಇಲ್ಲಿನ ರಕ್ಷಕ ಸೈನ್ಯದ ಒಂದು ತುಕಡಿಯೊಂದಿಗೆ ಬನವಾಸಿಗೆ ಹೋಗಬೇಕು. ನೀನು ಬೇಕಾದರೆ ನಿನ್ನ ತವರಿನಲ್ಲಿರು. ಇಲ್ಲ ಇಲ್ಲಿಯೇ ಅರಮನೆಯಲ್ಲಿ ಇರುವುದಾದರೆ, ಪಂಡಿಗರ ಪತ್ನಿ ಜಕ್ಕಿ ಸುಂದರಿಯವರು ನಿನ್ನೊಟ್ಟಿಗೆ ಅರಮನೆಯಲ್ಲಿರುವ ವ್ಯವಸ್ಥೆ ಮಾಡುತ್ತೇನೆ.

**ವಿನಯಾ** : ನೀವು ಹೇಗೆ ಹೇಳಿದರೆ ಹಾಗೆ..............ಒಂದೊಮ್ಮೆ ಇದೇ ರೀತಿ ಆಗಿತ್ತಲ್ಲವೇ?........... ಗಬ್ಬೀಂದ್ರನ ಕಡೆಯವರು ನಿಮ್ಮಿಂದ ನೆರವು ನಿರೀಕ್ಷಿಸಿದ್ದರಲ್ಲವೇ?

**ಕೃಷ್ಣ** : ಗಬ್ಬೀಂದ್ರನ ಚಿತಾವಣೆಗಳಿಂದ ನನ್ನ ತಂದೆ ದಾರಿ ತಪ್ಪುತ್ತಿದ್ದಾರೆಂದು ತಿಳಿದೂ ತಿಳಿದೂ ನಾನು ಅವರಿಗೆ ನೆರವು ನೀಡಲು ಹೇಗೆ ಸಾಧ್ಯ? ಆದರೆ ನಾನೂ ಗಬ್ಬೀಂದ್ರನ ಪರ ಎಂಬ ತಪ್ಪು ಕಲ್ಪನೆಯಿಂದ ಬಂದು, ನಿರಾಶರಾಗಿ ಹಿಂತಿರುಗಿದರು.

**ವಿನಯಾ** : ಇದೇ ಸಂದರ್ಭದಲ್ಲಿ ತಾನೇ ಪಂಡಿಗರ ಅಂತರ್ಯ ತಿಳಿದದ್ದು. ಅವರ ನಿಷ್ಠಾವಂತ ಜಾಣ ನಡೆವಳಿಕೆಯಿಂದ ಏಕಕಾಲದಲ್ಲಿ ಏನೆಲ್ಲವನ್ನು ಸಾಧಿಸಿದವರು! ಒಂದು ಕಡೆ ಪರಮಾರರ ಸೋಲು, ಗಂಗರ ಪಲಾಯನ, ಚಾಲುಕ್ಯ ಸಿಂಹಾಸನದ ಸಾಧನೆ!

**ಕೃಷ್ಣ** : ಓಹೋ (ನಗುತ್ತಾ) ಪರವಾಗಿಲ್ಲ. ದೇವಿಯವರಿಗೆ ರಾಜಕೀಯ ಪರಿಸ್ಥಿತಿಗಳ ಬಗ್ಗೆ ಎಷ್ಟೊಂದು ತಿಳಿವಳಿಕೆ ಇದೆ!

**ವಿನಯಾ** : ಎಲ್ಲ ನಿಮ್ಮ ಸಹವಾಸದಿಂದ.....ಪಂಡಿಗರೂ ಕೂಡಾ ಚಾಲುಕ್ಯ ವಂಶದವರೇ ಅಂತ ನೀವೇ ಒಮ್ಮೆ ಹೇಳಿದ್ದಿರಲ್ಲ.......ಜಕ್ಕಿ ಸುಂದರಿಯವರ ಹಾಗೆ ಎಲ್ಲ ಹೆಂಗಸರೂ ಧೈರ್ಯವಂತರೂ, ಜಾಣ್ಮೆ, ಸಮಯಪ್ರಜ್ಞೆಯುಳ್ಳವರೂ ಆದರೆ ಎಷ್ಟು ಚೆನ್ನ!

**ವಿನಯಾ** : ನಿಮ್ಮ ಪ್ರಯಾಣ ಹಾಗಾದರೆ?

**ಕೃಷ್ಣ** : ನಾಳೆಯೇ ಹೊರಡಬೇಕೆಂದಿದ್ದೇನೆ.

**ವಿನಯಾ** : ಹಿಂತಿರುಗಿ ಬರುವುದು.

**ಕೃಷ್ಣ** : (ಯೋಚಿಸಿ) ಈಗಲೇ ಏನನ್ನೂ ಹೇಳಲಾರೆ. ಯಾವಾಗ ಬರುತ್ತೇನೆಂದು ಹೇಳುವುದಕ್ಕೆ ಪರಿಸ್ಥಿತಿಗಳು ನನ್ನ ಕೈಯಲ್ಲಿ ಇಲ್ಲ. ಅಲ್ಲಿಗೆ ಹೋದ

ಮೇಲೆಯೇ ಏನಾದರೂ ತಿಳಿದು ಬರಲು ಸಾಧ್ಯ. ನೀನೇನೂ ಚಿಂತಿಸಬೇಡ. ಅಲ್ಲಿಂದ ವಿಷಯ ತಿಳಿದ ಮೇಲೆ ಬೇಹು ಕಳಿಸುತ್ತೇನೆ.

ವಿನಯಾ : ನೀವು ಮಾತ್ರ ಬಹಳ ಎಚ್ಚರಿಕೆಯಿಂದ ಇರಬೇಕು. ಮೈಯೆಲ್ಲ ಕಣ್ಣಾಗಿ ಕಾಯಬೇಕು.

ಕೃಷ್ಣ : ವಿನಯಾ ನನ್ನ ವಿಚಾರವಾಗಿ ನೀನು ಬಹಳ ಮನಸ್ಸಿಗೆ ಹಚ್ಚಿಕೊಂಡಂತಿದೆ. ನಿನಗೇನೂ ಭಯ ಬೇಡ. ನಾವು ಯಾರಿಗೂ ಅನ್ಯಾಯ ಮಾಡಿಲ್ಲ. ಆದ್ದರಿಂದ ನಾವು ಹೆದರಬೇಕಿಲ್ಲ ನಮಗೆ ಶತ್ರುಗಳಿಲ್ಲ.

ವಿನಯಾ : ಶತ್ರುಗಳಿಲ್ಲ ಎಂದು ಇಷ್ಟೊಂದು ಖಚಿತವಾಗಿ ಹೇಳಬೇಡಿ. ನಮಗೆ ಹಿತರಾಗಿ ಇರುವವರೇ ನಮ್ಮ ಮೇಲೆ ಕತ್ತಿ ಮಸೆದು ಹಾಯಬಹುದು. ಶತ್ರುಗಳು ಶತ್ರುಗಳೆಂದು ತೋರಿಸಿಕೊಳ್ಳುತ್ತಲೇ ಶತ್ರುಗಳಾಗಬೇಕಿಲ್ಲ.

ಕೃಷ್ಣ : ವಿನಯಾ ನನ್ನನ್ನು ಎಷ್ಟೊಂದು ಪ್ರೀತಿಸುತ್ತಿರುವಿ. ನಾನು ನಿಜವಾಗಿಯೂ ಅದೃಷ್ಟಶಾಲಿ. ನನಗೆ ಮಾತ್ರ ನಿನ್ನ ಬಗ್ಗೆ ಕಾಳಜಿ ಇಲ್ಲವೆಂದುಕೊಂಡೆಯಾ? ವಿನಯಾ ನಿನ್ನನ್ನು ಅನಾಥನನ್ನಾಗಿ ಮಾಡಿ ಅಪಾಯಗಳನ್ನು ಸ್ವಾಗತಿಸಿ ಸಾಯುವುದಕ್ಕೆ ನನಗೂ ಮನಸ್ಸಿಲ್ಲ.

ವಿನಯಾ : ಸಾಕು. ನೀವಿಷ್ಟು ಭರವಸೆ ತುಂಬುವುದಾದರೆ ಇದಕ್ಕಿಂತ ನನಗಿನ್ನೇನು ಬೇಕು. ಹೋಗಿ ಬನ್ನಿ. ನಿಮ್ಮ ಪ್ರಯಾಣ ಸುಖಕರವಾಗಲಿ.

– – ವಿರಾಮ – –

ತೈಲಪ : ಕೇಶಿ ದಂಡನಾಥರೇ ಎಲ್ಲವೂ ಹೇಗಿದೆ. ಪರಿಸ್ಥಿತಿ ಒಂದು ಹದಕ್ಕೆ ಬಂದಿದೆಯೇ?

ಕೇಶಿದಂಡನಾಥ: ಪ್ರಭು ಏನೊಂದನ್ನೂ ಹೇಳಲಾಗುತ್ತಿಲ್ಲ. ನೀವಂತೂ ನಿರೀಕ್ಷಿಸಿದ ಸಮಯಕ್ಕಿಂತ ಮೊದಲೇ ಇಲ್ಲಿಗೆ ತಲುಪಿದ್ದೀರಿ. ನೀವು ಬಂದದ್ದು ಒಳ್ಳೆಯದೇ ಆಯಿತು.

ಕೇಶಿದಂಡನಾಥ: ಪ್ರಭು ಈಗ ಬೇಹು ಸಂದೇಶ ಬಂದಿದೆ. ಪರಮಾರರು ವಂಚಿಸಿ ಆಕ್ರಮಿಸುವ ತಂತ್ರದ ಆಲೋಚನೆಯಲ್ಲಿ ಇದ್ದಾರೆ. ಎರಡು ಗುಂಪಾಗಿ ಹೊರಟು ಬಂದು ನೇರವಾಗಿ ಏಲಾಪುರದ ವಾಯುವ್ಯೋತ್ತರ ಭಾಗದಲ್ಲಿ ದಾಳಿ ಆರಂಭಿಸಿ ಶತ್ರುಗಳ ಗಮನ ಅತ್ತಕಡೆ ಇದ್ದಾಗ ಇನ್ನೊಂದು ಗುಂಪು ನವಸಾರಿಕಾ ನಾಸಿಕಾಗಳ ಮುಖಾಂತರ

ನೈರುತ್ಯದಿಂದ ಅಂದರೆ ಹಿಂದಿನಿಂದಲೂ ದಾಳಿ ಮಾಡಿ ನಮ್ಮ ಸೈನ್ಯದಲ್ಲಿ ತಳಮಳ ಉಂಟು ಮಾಡಿ ಸದೆಬಡಿಯುವ ಹುನ್ನಾರ ಅವರದಾಗಿದೆ.

**ತೈಲಪ** : ಓಹೋ ಹಾಗೇನು? ........... ಕೇಶೀ ದಂಡನಾಥರೇ ಇಂತಹ ಪರಿಸ್ಥಿತಿ ಇರುವಾಗ ನಿಮ್ಮ ನೇತೃತ್ವದ ಸೈನ್ಯ ನನ್ನ ಎಲಾಪುರದ ರಕ್ಷಣೆಗೆ ಉಳಿಯಲಿ. ನಾನು ನನ್ನ ಸೈನ್ಯದೊಂದಿಗೆ ವಾಯುವ್ಯೋತ್ತರದ ಕಡೆಗೆ ಒಯ್ದು ಶತ್ರುಗಳು ಮುಂದುವರೆಯುವುದನ್ನು ತಡೆದು, ಅವರು ಹಿಮ್ಮೆಟ್ಟುವಂತೆ ಮಾಡುತ್ತೇನೆ.

**ಕೇಶಿದಂಡನಾಥ**: ಹಾಗಾದರೆ ಪ್ರಭು, ಮಲ್ಲಪರು ತಮ್ಮ ಸೈನ್ಯವನ್ನು ನವಸಾರಿಕ, ನಾಸಿಕಗಳ ನಡುವಿನ ಮಲೆ ಪ್ರಾಂತಗಳಲ್ಲಿ ಅವರನ್ನು ಎದುರಿಸಿ, ಅವರ ಹುಟ್ಟಡಗಿಸಿ ಹೇಗಾದರೂ ಮಾಡಿ ಗೋದಾವರಿ ನದಿಯನ್ನು ದಾಟಬರದಂತೆ ತಡೆಗಟ್ಟಲಿ. ಇನ್ನೊಂದು ವಿಷಯ–ಪ್ರಭು. ಪರಮಾರ ಮುಂಜ ತಾನು ನೇರದಾಳಿಯ ಗುಂಪಿನೊಡನೆ ಬರುವುದಿಲ್ಲವಂತೆ. ನವಸಾರಿಕದ ಮಾರ್ಗವಾಗಿ ಬಂದು ಹಿಂದಿನಿಂದ ಆಕ್ರಮಣ ಮಾಡಲಿದ್ದಾನಂತೆ.

**ತೈಲಪ** : ಹಾಗಾದರೆ ನಾವು ನಮ್ಮ ಸೈನ್ಯಗಳನ್ನು ಯೋಜಿಸುವಲ್ಲಿ ಸ್ವಲ್ಪ ವ್ಯತ್ಯಾಸಗಳನ್ನು ಮಾಡಿಕೊಳ್ಳಬೇಕಿದೆ. ಅಮ್ಮಗಿಯವರು, ಮಲ್ಲಪರು ನೇರದಾಳಿ ಎದುರಿಸುವ ಸೈನ್ಯ ಘಟಕದ ನೇತೃತ್ವವನ್ನು ವಹಿಸಲಿ. ನಾವು ನಾಸಿಕದತ್ತ ಸಾಗುವ ಘಟಕದ ನೇತೃತ್ವ ವಹಿಸಿಕೊಳ್ಳುತ್ತೇವೆ. ಭಿಲ್ಲಮ, ಪಂಡಿಗರು ನಮ್ಮ ಜೊತೆಗೆ ಇರುತ್ತಾರೆ. ಆಗಬಹುದಲ್ಲ?

**ಕೇಶಿದಂಡನಾಥ**: ಇದು ಸರಿಯಾದ ಯೋಜನೆಯಾಗಿದೆ ಪ್ರಭು.

೧೦

# ದೃಶ್ಯ - ೧೦

[ಯುದ್ಧ ಭೂಮಿಯಲ್ಲಿ]

ತೈಲಪ : ನನ್ನ ನೆಚ್ಚಿನ ವೀರ ಸೈನಿಕರೇ, ಈ ಯುದ್ಧ ನಮ್ಮ ಘನತೆ, ಗೌರವಗಳ ಪ್ರತೀಕ. ನಿಮ್ಮಲ್ಲಿರುವ ಶೌರ್ಯ, ಸಾಹಸ, ಸಾಮರ್ಥ್ಯಗಳನ್ನು ಹುರಿಗೊಳಿಸಿ ಆ ಪರಮಾರರನ್ನು ಎದುರಿಸಿ, ಅವರ ಮೇಲೆ ದಿಗ್ವಿಜಯವನ್ನು ಸಾಧಿಸದೆ ನಾವು ಇಲ್ಲಿಂದ ಕದಲುವಂತೆಯೇ ಇಲ್ಲ. ಪರಮಾರರು ಕುತಂತ್ರಿಗಳೂ, ನಮ್ಮ ದಿಕ್ಕುಗೆಡಿಸಲು ಹಲವು ಹಂಚಿಕೆಗಳನ್ನು ಆಲೋಚಿಸಿರುತ್ತಾರೆ. ಯಾವುದಕ್ಕೂ ಮಣಿಯದೆ ಹೋರಾಡಿ ನಮ್ಮ ರಾಷ್ಟ್ರವನ್ನು ಕಾಪಾಡಿಕೊಳ್ಳೋಣ.

ಭಿಲ್ಲಮ : ಪ್ರಭು, ಶತ್ರುಗಳು ಇತ್ತಲೇ ಧಾವಿಸುವಂತಿದೆ. ದಯವಿಟ್ಟು ತಾವು ಅಣ್ಣಿಗನನ್ನು ಕರೆದುಕೊಂಡು ಉತ್ತರದಿಕ್ಕಿಗೆ ಹೋಗಿ ಬಿಡಿ. ನಾನು ಮುಂದಿನದನ್ನು ಯೋಚಿಸುತ್ತೇನೆ.

ತೈಲಪ : ಭಿಲ್ಲಮ ನಿಮ್ಮೊಬ್ಬರನ್ನೇ ಬಿಟ್ಟು ನಾನು ಪಲಾಯನ ಮಾಡಿ ತಲೆ ಮರೆಸಿಕೊಳ್ಳಲೇ? ಅದು ಸಾಧ್ಯವಿಲ್ಲ. ಇಲ್ಲಿಯೇ ಇದ್ದು ನಮ್ಮ ಮೇಲೆ ಎರಗುವ ಸೈನ್ಯವನ್ನು ಎದುರಿಸೋಣ.

ಭಿಲ್ಲಮ : ಬೇಡ ಪ್ರಭು. ನಾನು ಹೇಳುವ ಮಾತನ್ನು ಕೇಳಿ. ನೀವು ಸುರಕ್ಷಿತವಾಗಿರಬೇಕು. ನೀವೊಬ್ಬರು ಪ್ರಾಣದಿಂದ ಉಳಿದರೆ ಪ್ರಜಾಕೋಟಿ ಅನಾಥವಾಗುವುದು ತಪ್ಪುತ್ತದೆ. ಬೇಗ ಹೊರಡಿ. ನಾನು ಸೈನಿಕರ ಅಶ್ವರೋಹಿ ತಂಡವೊಂದನ್ನು ಈಗಲೇ ಇತ್ತ ಬರುತ್ತಿರುವ ಪರಮಾರ ಸೈನ್ಯವನ್ನು ತಡೆಗಟ್ಟಲು ಆದೇಶಿಸಿ ಕಳಿಸುತ್ತೇನೆ.

"ಚಕ್ರವರ್ತಿಗಳೇ ಎಚ್ಚರ" (ಕೂಗು–ಕುದುರೆ ಖುರಪಾಟ–ಹ್ಹಾಂ, ಚಿರಾಟ)

ಅಶ್ವಾರೋಹಿ : ಏಯ್ ಯಾರು ನೀನು?

ಅಣ್ಣಿಗ : ನಾನು ನಾನು ಪಡೆವಳ ತೈಲ. ನೀನಾರು?

**ತೈಲಪ** : ಅಣ್ಣಿಗ.........ಆ ಅಶ್ವಾರೋಹಿ ಯಾರು? ಯಾಕವನು ತೋಮರ ನನ್ನತ್ತ ಎಸೆದ? ಎಲ್ಲಿಂದ ಬಂದ?

**ಅಣ್ಣಿಗ** : ಪ್ರಭು ಅವನಾರೆಂಬುದು ನನಗೂ ಗೊತ್ತಿಲ್ಲ. ಎಲ್ಲಿಂದ ಬಂದನೋ ಅದೂ ಗೊತ್ತಿಲ್ಲ. ಅವನು ಸವಾರಿ ಮಾಡಿ ಬರುತ್ತಿದ್ದ ರೀತಿ, ಹಿಡಿದ ತೋಮರದ ಗುರಿ ಏನು? ಯಾರ ಕಡೆ ಎಂದು ಹೊಳೆದದ್ದೇ ಅವನು ಎಸೆಯುತ್ತಿದ್ದಂತೆ ಅಡ್ಡ ಬಂದೆ. ನನ್ನ ಕರ್ತವ್ಯ ಮಾಡಿದೆ.

**ತೈಲಪ** : ನಿನಗೇನೂ ಆಗಲಿಲ್ಲ ತಾನೇ? ಹೌಹಾರಿ ಹೋದೆ. ಅಣ್ಣಿಗ ಈ ದಿನ ನಮಗೆ ಮರು ಜನ್ಮಕೊಟ್ಟೆ. ನಿನ್ನ ಸಮಯ ಸ್ಫೂರ್ತಿ, ಮಿಂಚಿನ ಜಿಗಿತಗಳನ್ನು ನೋಡಿ ದಿಗ್ಭ್ರಾಂತನಾಗಿ ಹೋದೆ. ನಿನ್ನಜ್ಜನಿಗೆ ನಿನ್ನ ಸಾಹಸ ಕಾರ್ಯವನ್ನು ವಿವರಿಸಿದರೆ ಎಷ್ಟೊಂದು ಹೆಮ್ಮೆ ಪಟ್ಟಾರು.

**ಪಂಡಿಗ** : ಪ್ರಭು ಕ್ಷೇಮವಾಗಿದ್ದೀರಾ? ನಾನು ನಿಮ್ಮನ್ನೇ ಕಾಣಬೇಕೆಂದು ಹೊರಟು ಬರುತ್ತಿದ್ದೆ. ಅಷ್ಟರಲ್ಲಿ ಇಲ್ಲಿ ನಡೆದ ಆಕಸ್ಮಿಕದ ಸುದ್ದಿ ತಿಳಿಯಿತು. ವೇಗವಾಗಿ ಓಡಿ ಬಂದೆ.

**ತೈಲಪ** : ಪಂಡಿಗರೇ ಭಯಕ್ಕೆ ಕಾರಣವಿಲ್ಲ. ನನ್ನ ಜೊತೆ ಇರುವವರು ಯಾರೆಂದು ತಿಳಿದಿರಿ! ಭಿಲ್ಲಮ ಅಣ್ಣಿಗರಂತಹ ಸ್ವಾಮಿನಿಷ್ಠರು. ತಮ್ಮ ಪ್ರಾಣವನ್ನು ಲೆಕ್ಕಿಸದೆ ನಮ್ಮನ್ನು ಕಾಯುವ ಯೋಧರು! ಬರೀ ಯೋಧರಲ್ಲ ಪರಮ ಯೋಧರು. ಈ ಅಣ್ಣಿಗ ಇಂದು ನಮ್ಮೊಟ್ಟಿಗೆ ಇಲ್ಲದಿದ್ದರೆ ನಾವು ಎಲ್ಲಿರುತ್ತಿದ್ದೆವೋ! ಆ ಕ್ಷಣದ ಅವನ ಕೆಲಸಕ್ಕೆ ನೀವೇನೆನ್ನುತ್ತಿದ್ದರೋ!

**ಪಂಡಿಗ** : ಭಲಾ ಅಣ್ಣಿಗ. ವೀರ ಯೋಧನ ಮಗನೆಂದು ಹೆಸರನ್ನು ಸಾರ್ಥಕ ಪಡಿಸಿಕೊಂಡೆ.

**ಅಣ್ಣಿಗ** : ಪ್ರಭುಗಳ ಮನಸ್ಸು ದೊಡ್ಡದು. ನಾನು ಮಾಡಿದ್ದು ಉಪಕಾರವಲ್ಲ ಕರ್ತವ್ಯ.

**ತೈಲಪ** : ಅಣ್ಣಿಗ ಅದು ನಿನ್ನ ವಿನಯವಂತಿಕೆ!

**ಪಂಡಿಗ** : ಸೈನಿಕರೇ ಈಗ ನೀವೇ ಅಣ್ಣಿಗರ ಸಾಹಸವನ್ನು ನೋಡಿದಿರಲ್ಲ. ಪ್ರಭುಗಳನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಅವರ ರಕ್ಷಣೆ ರಾಷ್ಟ್ರರಕ್ಷಣೆಯಷ್ಟೇ ಗುರುತರವಾದುದು.

**ಭಿಲ್ಲಮ** : ಈಗಿನ ಪ್ರಭುಗಳು ಅಣ್ಣಿಗನ ಸಮಯ ಸ್ಫೂರ್ತಿಯಿಂದ ನಮ್ಮ ಪಾಲಿಗೆ ಬದುಕಿ ಉಳಿಯುವಂತಾಯಿತು. ಇನ್ನು ಮುಂದೆ ಮತ್ತಷ್ಟು ಜಾಗರೂಕತೆಯಿಂದ ಇರಬೇಕು. ಪ್ರಭು ಒಂದು ಮುಖ್ಯ ಬೇಹು

ಬಂದಿದೆ. ಇತ್ತ ಕಡೆ ಸಾಗಿ ಬರುತ್ತಿದ್ದ ಸೈನ್ಯ ಇದ್ದಕ್ಕಿದ್ದಂತೆ ಎತ್ತಲೋ ಮಾಯವಾಗಿದೆ. ಎಲ್ಲವೂ ಅಯೋಮಯವಾಗಿದೆ. ಶತ್ರುಗಳ ಸುಳಿವು ಸಿಗದಿರುವುದರಿಂದ ಪರಿಸ್ಥಿತಿ ಗಂಭೀರವೂ ಅಪಾಯಕಾರಿಯೂ ಆಗಿದೆ.

ಪಂಡಿಗ : ಹಾಗಾದರೆ ಪ್ರಭು ನೀವು ನಿಮ್ಮ ಸೈನ್ಯದೊಂದಿಗೆ ಏಲಾಪುರದ ಕಡೆ ಹೊರಟು ಮಲ್ಲಪರನ್ನು ಸೇರಿಕೊಳ್ಳಿ. ಇನ್ನು ಭಯ, ಆತಂಕಗಳಿಗೆ ಕಾರಣವೇ ಇಲ್ಲ. ಇಲ್ಲಿ ಎಲ್ಲವೂ ಅನುಕೂಲಕರವಾಗಿದೆ.

ತೈಲಪ : ಕೇಶೀ ದಂಡನಾಥರೇ ಏಲಾಪುರ ದೇವಾಲಯಗಳು ಶತ್ರುಗಳ ಕೈಗೆ ಜೀಳದಂತೆ ರಕ್ಷಿಸಿದ್ದಕ್ಕಾಗಿ ನಾವೆಲ್ಲರೂ ನಿಮಗೆ ಕೃತಜ್ಞರಾಗಿದ್ದೇವೆ. ಆ ಜನ್ಮ ಶತ್ರುವಾಗಿ ನಮ್ಮನ್ನು ಕಾಡುತ್ತಿರುವ ಪರಮಾರರನ್ನು ಅದರಲ್ಲೂ ಆ ಮುಂಜನನ್ನು ಸೋಲಿಸಿ ಹಿಮ್ಮೆಟ್ಟಿಸುವಲ್ಲಿ ನೀವು ನೀಡಿದ ಸಹಕಾರ ಎಂದೆಂದಿಗೂ ಮರೆಯಲಾಗದ್ದು. ಅಮ್ಮುಗಿಯವರು, ಪಂಡಿಗರು, ಮಲ್ಲಪರು ಎಲ್ಲರೂ ಒಂದೊಂದು ರೀತಿಯಲ್ಲಿ ನಮಗೆ ಚೆನ್ನಾಗಿ ನಿಂತು ನಮ್ಮ ನೈತಿಕ ಬಲವನ್ನು ಹೆಚ್ಚಿಸಿದಿರಿ. ಇಂದು ಗಳಿಸಿದ ವಿಜಯ ನಮ್ಮೆಲ್ಲರ ವಿಜಯ! ಇದು ವಿಜಯೋತ್ಸವ.

ಪಂಡಿಗ : ಪ್ರಭು ನಾವು ಮಾಡುತ್ತಿರುವುದು ನಮ್ಮ ಕರ್ತವ್ಯ. ಈ ರಾಷ್ಟ್ರದ ಪ್ರಜೆಯಾದ ಪ್ರತಿಯೊಬ್ಬನೂ ರಾಷ್ಟ್ರನಿಷ್ಠೆ, ಸ್ವಾಮಿನಿಷ್ಠೆಯನ್ನು ರಕ್ತಗತವಾಗಿ ರೂಢಿಸಿಕೊಳ್ಳಬೇಕು. 'ನಾವಿಷ್ಣುಃ ಪೃಥಿವೀಪತಿಃ' ಎನ್ನುವಂತೆ ಚಕ್ರವರ್ತಿಗಳಾದ ನೀವು ನಿಮ್ಮ ನಮ್ಮ ಪಾಲಿಗೆ ದೇವರು. ಭಯ ಭಕ್ತಿ ಶ್ರದ್ಧೆಗಳಿಂದ ನಡೆದುಕೊಳ್ಳಬೇಕಾದ್ದು ನಮ್ಮ ಧರ್ಮ!

ತೈಲಪ : ಇಂತಹ ವಿಚಾರಶೀಲರು ಇರುವವರೆಗೆ ಈ ನಾಡಿಗೆ ಸೋಲಿನ ಭಯವಿಲ್ಲ. ಚಾಲುಕ್ಯ ಸಾಮ್ರಾಜ್ಯದ ಉನ್ನತಿಗೆ ಭಂಗವಿಲ್ಲ.

ತೈಲಪ : ಅಮ್ಮುಗಿಯವರೇ.........ಮಲ್ಲಪರೇ, ನಮ್ಮ ಕಡೆಯ ಸಾಮಂತ, ಮಾಂಡಳಿಕರು ಯಾರು ಯಾರು ಇದ್ದಾರೆ ಅವರೆಲ್ಲರಿಗೆ ಆಹ್ವಾನ ಪತ್ರಿಕೆ ಕಳಿಸಿರಿ.

ಮಲ್ಲಪ : ಆಗಬಹುದು ಪ್ರಭು...................ಯುದ್ಧದ ಹಾವಳಿಯೆಲ್ಲ ಮುಗಿದಿದೆ. ನಾನು ಒಂದೆರಡು ದಿನಗಳು ಮಟ್ಟಿಗೆ ಮಾನ್ಯಖೇಟಕ್ಕೆ ಹೋಗಿ ಬರುತ್ತೇನೆ. ಹಾಗೆಯೇ ಅಣ್ಣಿಗನನ್ನೂ ಕರೆದುಕೊಂಡು ಹೋಗುತ್ತೇನೆ.

ತೈಲಪ : ಬಂದ ಹಾಗೆ ಈ ವಿಜಯೋತ್ಸವಕ್ಕೆ ನಿಮ್ಮ ಮಗಳನ್ನೂ ಕರೆತನ್ನಿ. ನಾವೇ ಸ್ವತಃ ಆಮಂತ್ರಿಸಿದ್ದೇವೆಂದು ತಿಳಿಸಿ.

ಮಲ್ಲಪ : ಅಪ್ಪಣೆ ಪ್ರಭು! ಇನ್ನೊಂದು ಬಿನ್ನಹ. ಈ ಮೊದಲೇ ಒಮ್ಮೆ ನಾನು ಮಹಾಕವಿ ರನ್ನಮಯ್ಯನವರ ಬಗ್ಗೆ ಪ್ರಸ್ತಾಪಿಸಿದ್ದೆ.

ತೈಲಪ : ಹೌದು ನೆನಪಿದೆ.

ಮಲ್ಲಪ : ಅವರನ್ನೂ ಆಹ್ವಾನಿಸಿ ಕರೆತರುತ್ತೇನೆ.

ತೈಲಪ : ಈ ವಿಚಾರದಲ್ಲಿ ನನ್ನನ್ನು ಕೇಳಬೇಕೆ? ನಿಮಗೆ ಉಚಿತವೆನಿಸಿದ್ದನ್ನು ಮಾಡಲು ಪೂರ್ಣ ಸ್ವಾತಂತ್ರ್ಯವಿದೆ.

ಮಲ್ಲಪ : ಅಪ್ಪಣೆ.

– – ವಿರಾಮ – –

ಮಲ್ಲಪ : ಬನ್ನಿ ರನ್ನಮಯ್ಯರೇ, ಮನೆಯಲ್ಲಿ ಎಲ್ಲರೂ ಸೌಖ್ಯವೇ?

ರನ್ನಮಯ್ಯ : ದೇವರ ದಯೆ, ಹಿರಿಯರ ಆಶೀರ್ವಾದ, ತಮ್ಮ ಮಗಳು ಅತ್ತಿಮಬ್ಬೆಯವರ ಔದಾರ್ಯ, ಪ್ರೋತ್ಸಾಹಗಳಿಂದ ಎಲ್ಲರೂ ಸೌಖ್ಯ.

ಮಲ್ಲಪ : ನಿಮ್ಮ ಸಾಹಿತ್ಯ ಸೇವೆ ಹೇಗೆ ಸಾಗುತ್ತಿದೆ? ಮತ್ತೇನಾದರು ಹೊಸದನ್ನು ಬರೆಯುತ್ತಿರುವಿರೇನು? ಮಗಳೇ ವಿಜಯೋತ್ಸವಕ್ಕೆ ನಿನ್ನನ್ನೂ, ರನ್ನಮಯ್ಯರನ್ನೂ ಆಹ್ವಾನಿಸಿ ಕರೆದೊಯ್ಯಬೇಕೆಂದೇ ಬಂದೆ.

ಅತ್ತಿಮಬ್ಬೆ : ನಾವು ಬರುವ ವಿಚಾರವಿರಲಿ. ರನ್ನಮಯ್ಯರವರ ವಿಚಾರ ಏನು ಮಾಡಿದಿರಿ?

ಮಲ್ಲಪ : ಅದಕ್ಕಾಗಿ ಎಲ್ಲ ಸಿದ್ಧತೆ ಮಾಡಿ ಬಂದಿದ್ದೇನೆ.

ಅತ್ತಿಮಬ್ಬೆ : ಅದೊಂದಾದರೆ ರನ್ನಮಯ್ಯರ ಬದುಕೇ ಬೇರೆಯಾಗುತ್ತದೆ.

ರನ್ನಮಯ್ಯ : ಚಕ್ರವರ್ತಿಗಳ ದರ್ಶನ ಭಾಗ್ಯಕ್ಕಾಗಿ, ಎಷ್ಟೋ ಕಾಲದಿಂದ ಪರಿತಪಿಸುತ್ತಿದ್ದೇನೆ. ಅವರ ದರ್ಶನವೆಂದರೆ ಸಾಮಾನ್ಯವೇ?

ಮಲ್ಲಪ : ಖಂಡಿತ ನಿಮಗೆ ಅದೆಲ್ಲವೂ ಸಾಧ್ಯವಾಗುತ್ತದೆ. ನಿಮ್ಮ "ಅಜಿತ ಪುರಾಣ' ಕಾವ್ಯ ರಚನೆ ಎಲ್ಲಿವರೆಗೆ ಬಂತು?

ರನ್ನಮಯ್ಯ : ಅರ್ಧಕ್ಕೂ ಹೆಚ್ಚು ಭಾಗ. ಬರೆದಾಗಿವೆ.

ಮಲ್ಲಪ : ನೀವು ರಾಜಧಾನಿಗೆ ಬರುವಾಗ ಆಗಿರುವಷ್ಟನ್ನು ತಂದಿರಿ. ಅದನ್ನು ಚಕ್ರವರ್ತಿಗಳ ಗಮನಕ್ಕೆ ತರಬೇಕು.

ಅತ್ತಿಮಬ್ಬೆ : ಅಪ್ಪಾಜಿ. ಶಾಂತಿಪುರಾಣದ ಸಾಕಷ್ಟು ಪ್ರತಿಗಳು ದಾನಕ್ಕೆ ಸಿದ್ಧವಾಗಿದೆ.

ಮಲ್ಲಪ : ಒಳ್ಳೆಯದಾಯಿತು. ನಾಳಿನ ಪ್ರಯಾಣಕ್ಕೆ ಸಿದ್ಧವಾಗಿ ನನ್ನ ಜೊತೆಗೇ ಬರಬಹುದಲ್ಲ.

ಅತ್ತಿಮಬ್ಬೆ : ಬೇಡ ಅಪ್ಪಾಜಿ. ಇಲ್ಲಿ ಆಶ್ರಯ ಧಾಮದಲ್ಲಿ ಮುಗಿಸಬೇಕಾದ ಕೆಲಸಗಳಿವೆ. ವಿಜಯೋತ್ಸವದ ಸಮಯಕ್ಕೆ ತಪ್ಪದೆ ಅಲ್ಲಿಗೆ ತಲುಪುತ್ತೇವೆ.

ಮಲ್ಲಪ : ಸರಿ. ನೀನು ರನ್ನಮಯ್ಯ ಕುಟುಂಬದೊಂದಿಗೆ ಬಂದು ಬಿಡು.........ಆಗಬಹುದಲ್ಲ ರನ್ನಮಯ್ಯರೇ?

ಅವಶ್ಯವಾಗಿ.

(ಜಯಶಾಲಿಯಾಗಿ ತೈಲಪರ ಪ್ರವೇಶ)

ವಂಧಿ ಮಾಗಧರು : (ಒಬ್ಬೊಬ್ಬರು ಒಂದೊಂದು ಬಿರುದನ್ನು ಹೇಳಬೇಕು)

ಚಾಲುಕ್ಯ ಕಂಠಾಭರಣ, ಆಹವಮಲ್ಲ, ಚಾಲುಕ್ಯ ಕಂಠೀರವ, ನೃಪಸಿಂಹ, ಅಕಲಂಕ ಚರಿತ, ಸಮಸ್ತ ಭುವನಾಶ್ರಯ. ಮಹಾರಾಜಾಧಿರಾಜ, ರಾಜ ಪರಮೇಶ್ವರ, ಕರಹಾಟ ಭಯಂಕರ, ಕೊಂಕಣ ಭಯಂಕರ, ರಣರಂಗ ಭೀಷಣ, ಪರಮ ಭಟ್ಟಾರಕ. ನಿಜಭುಜ ಚಕ್ರವರ್ತಿ, ಶ್ರೀ ಪೃಥ್ವೀ ವಲ್ಲಭ. ತೈಲಪ ಚಕ್ರವರ್ತಿ, ವಿಜಯ ಹಸ್ತರಿಗೆ.......... ಬಹು ಪರಾಕ್.

ತೈಲಪ : ಪೂಜ್ಯರೇ ಹಿರಿಯರೇ, ಮಾಂಡಳೀಕ ಸಾಮಂತರೇ, ಪ್ರಜಾ ಬಂಧುಗಳೇ, ನಮ್ಮನ್ನು ನೀವೆಲ್ಲ ತುಂಬು ಉತ್ಸಾಹ, ಸಂಭ್ರಮಗಳಿಂದ ಸ್ವಾಗತಿಸುತ್ತಿರುವುದಕ್ಕೆ ನಾನು ಕೃತಜ್ಞ. ಈ ಗೆಲುವು ನನ್ನದಲ್ಲ. ನಿಮ್ಮೆಲ್ಲರದು. ನಿಮ್ಮೆಲ್ಲರ ಪ್ರೀತಿ, ವಾತ್ಸಲ್ಯ, ಹಾರೈಕೆಗಳೇ ನಮಗೆ ಶಕ್ತಿ ಶಾಲಿ ಅಸ್ತ್ರಗಳು. ರಾಷ್ಟ್ರಭಕ್ತಿ, ರಾಷ್ಟ್ರಸೇವೆ ನಮ್ಮೆಲ್ಲರ ಕರ್ತವ್ಯ. ಈ ನಾಡು ನುಡಿ, ಸಂಸ್ಕೃತಿಯನ್ನು ಶತ್ರು ಪದಾಕ್ರಾಂತವಾಗದೆ ರಕ್ಷಿಸಿಕೊಳ್ಳಬೇಕಾದ್ದು ನಮ್ಮ ನಿಮ್ಮೆಲ್ಲರ ಕರ್ತವ್ಯ. ಈ ವಿಜಯೋತ್ಸವಕ್ಕೆ ತಮ್ಮೆಲ್ಲರಿಗೂ ನನ್ನ ಹಾರ್ದಿಕ ಸ್ವಾಗತ (ಚಪ್ಪಾಳೆ)

ಧ್ವನಿ– ಒಬ್ಬ : ನೋಡಯ್ಯ ಚಕ್ರವರ್ತಿಗಳ ವಿನಯಾನ!

ಧ್ವನಿ–ಇನ್ನೊಬ್ಬ : ಎಷ್ಟೊಂದು ನಿಗರ್ವಿ.

ಧ್ವನಿ–ಮತ್ತೊಬ್ಬ : ಚಾಲುಕ್ಯ ವಂಶವೇ ಹಗೆ. ಶೌರ್ಯ, ಪರಾಕ್ರಮಗಳಷ್ಟೇ ಅಲ್ಲ. ಪ್ರಜಾ ವಾತ್ಸಲ್ಯ, ಕಲಾಪ್ರೇಮ, ಹೃದಯ ವೈಶಾಲ್ಯ ಇತ್ಯಾದಿಗಳೆಲ್ಲ ರಕ್ತಗತವಾಗಿ ಬಂದಿರುವಂಥಾದ್ದೆ!

ಧ್ವನಿ– ಒಬ್ಬ : ಅರಮನೆಯಲ್ಲಿ ವಿಜಯೋತ್ಸವ ಸಮಾರಂಭಕ್ಕೆ ನಮ್ಮೆಲ್ಲರಿಗೂ ಸ್ವಾಗತವಿದೆ.. ಅರಮನೆ, ರಾಜ ಭೋಜನ, ಭೂರಿ ದಕ್ಷಿಣೆ........ಓಹ್ ಹೇಳುತ್ತಾ ಹೋದರೆ ಕೊನೆಯಿಲ್ಲ.

ಧ್ವನಿ–ಇನ್ನೊಬ್ಬ : ನಡೆಯಿರಿ. ನಡೆಯಿರಿ. ಮೆರವಣಿಗೆ ಅರಮನೆಯ ಕಡೆಯೇ ಹೊರಟಿದೆ.........ಮಹಾ ನಗರವನ್ನೆಲ್ಲ ಹೇಗೆ ಅಲಂಕರಿಸಿದ್ದಾರೆ...... ನೋಡಿದೆಯೇನಯ್ಯಾ!

– – ವಿರಾಮ – –

ತೈಲಪ : ಬನ್ನಿ ಮಲ್ಲಪರೇ, ನಿಮ್ಮನ್ನೇ ಎದುರು ನೋಡುತ್ತಿದ್ದೆ. ಎಲ್ಲವೂ ಸಮರ್ಪಕವಾಗಿ ನೆರವೇರಿತಲ್ಲ? ಬಂದ ಅತಿಥಿ ಅಭ್ಯಾಗತರು ಸಂತೃಪ್ತರಾದರೇನು? ಅವರಿಗೆ ಯಾವುದಕ್ಕೂ ಕೊರತೆಯಾಗಲಿಲ್ಲ ತಾನೇ?

ಮಲ್ಲಪ : ಪ್ರಭು, ನೀವು ಬಹಳ ದಣಿದಿದ್ದೀರಿ. ನಿಮಗೆ ವಿಶ್ರಾಂತಿಯ ಅಗತ್ಯವಿದೆ. ಆದರೂ ನೀವು ಹೇಳಿ ಕಳಿಸಿದಿರಂತೆ.

ತೈಲಪ : ಹೌದು. ನನ್ನನ್ನು ಕಾಣಬಯಸುತ್ತಿದ್ದೀರೆಂದು ನನಗೆ ತಿಳಿಯಿತು. ಏನಾದರೂ ತುರ್ತಿನ ಕೆಲಸವಿರಬಹುದೇನೋ......

ಮಲ್ಲಪ : ಪ್ರಭು, ಚಾಲುಕ್ಯ ವಂಶದ ಪರಂಪರೆಗೆ ಖ್ಯಾತಿ ಇದೆ. ಸಾಹಸ, ಸಮರ ದಿಗ್ವಿಜಯಗಳ ಬಗೆಗೆ ಸಾಕಷ್ಟು ಪ್ರತಿಷ್ಠೆ, ಪ್ರಶಂಸೆಗಳನ್ನು ಗಳಿಸಿಕೊಂಡಿದ್ದೀವಿ. ತಾವು ಸಿಂಹಾಸನಾರೋಹಣ ಮಾಡಿ ಹದಿನೆಂಟು ವರ್ಷಗಳಾದವು. ಶಿಲ್ಪ, ಸಾಹಿತ್ಯ, ನೃತ್ಯಗಳಿಗೆ ಈ ರಾಜ್ಯದಲ್ಲಿ ಮಹತ್ತರ ಸ್ಥಾನವಿದೆ. ಪ್ರೋತ್ಸಾಹವಿದೆ ಎಂದು ಜನಜನಿತವಾಗಿದೆ. ಅವುಗಳ ಬಗ್ಗೆ ನಾವು ಇನ್ನು ಮುಂದೆ ಇನ್ನಷ್ಟು ಯೋಚಿಸಬೇಕಾಗಿದೆ.

ತೈಲಪ : ಮಲ್ಲಪರೇ, ನೀವು ಹೇಳುವ ವಿಚಾರಗಳು ಸಮ್ಮತವಾದ್ದೇ. ನಾವು ಸಿಂಹಾಸನಾರೋಹಣದ ನಂತರ ರಾಷ್ಟ್ರದ ಸುಭದ್ರತೆಯ ಕಡೆ ಹೆಚ್ಚಿನ ಗಮನ ಕೊಡಬೇಕಾಯಿತು. ಈಗ ಎಲ್ಲವೂ ಸರಿಯಾಗಿದೆ. ಇನ್ನು ಮುಂದೆ ನೀವು ಹೇಳಿದಂತೆ ಕಲೆ ಸಾಹಿತ್ಯಗಳ ಕಡೆ ವಿಚಾರ ಮಾಡೋಣ.

ಮಲ್ಲಪ : ಸನ್ನಿಧಾನಕ್ಕೆ ಬಹುಶಃ ನೆನಪಿರಬಹುದು. ಈ ಆಸ್ಥಾನಕ್ಕೆ ಒಬ್ಬ ಮಹಾಕವಿಯನ್ನು ಬರಮಾಡಿಕೊಳ್ಳೋಣ ಎಂದಿದ್ದೆ. ಅವರೇ ಇಲ್ಲಿದ್ದಾರೆ....ಈಗ......ಇವರೇ ಕವಿವರ ರನ್ನಮಯ್ಯನವರು.

ತೈಲಪ : ರನ್ನಮಯ್ಯನವರೇ ಬನ್ನಿ.. ನಮ್ಮ ದಂಡನಾಯಕರಾದ ಮಲ್ಲಪರು ನಿಮ್ಮ ಶ್ರದ್ಧೆ, ಸಾಮರ್ಥ್ಯಗಳನ್ನು ನಮ್ಮರಿವಿಗೆ ತಂದಿದ್ದಾರೆ......ನಿಮ್ಮನ್ನು ಗೌರವಿಸಿ, ನಿಮ್ಮ ಕಾವ್ಯ ಸಾಧನೆಗೆ ಅನುವು ಮಾಡಿ ಕೊಡುವುದು ನಮ್ಮ ಸೌಭಾಗ್ಯ.

ರನ್ನ : ಸನ್ನಿಧಾನಕ್ಕೆ ನನ್ನ ಅನಂತಾನಂತ ಕೃತಜ್ಞತೆಗಳು. ನಾನು ಕೇಳಿದ್ದಕ್ಕಿಂತ, ಹೆಚ್ಚಿನದನ್ನೇ ಕಾಣುತ್ತಿದ್ದೇನೆ. ತಮ್ಮ ಕಲಾ ಪ್ರೀತಿ, ಕವಿ ಕಲಾವಿದರ ಬಗೆಗಿನ ಗೌರವಾದರಗಳನ್ನು ಕಂಡು ಕೃತಾರ್ಥನಾಗಿದ್ದೇನೆ.

ತೈಲಪ : ಅದೆಲ್ಲಾ ಅಗತ್ಯವಿಲ್ಲ. ರಾಜನಾದವನು ಬದುಕಿನ ಎಲ್ಲ ಮುಖಗಳನ್ನು ಕಾಣಬೇಕು. ಎಲ್ಲರ ಅನುಭವ ಸಾಮರ್ಥ್ಯಗಳನ್ನು ಗುರುತಿಸಿ, ರಾಷ್ಟ್ರದ ಬೌದ್ಧಿಕ ಸಂಪತ್ತಿನ ಭಂಡಾರವನ್ನು ವೃದ್ಧಿಸಬೇಕು ಅದು ನಮ್ಮ ಧರ್ಮ.

ರನ್ನಮಯ್ಯ : ಧನ್ಯನಾದೆ......ಪ್ರಭು ಧನ್ಯನಾದೆ.

ತೈಲಪ : ಕವಿಗಳೇ ಒಂದು ವೇಳೆ ನಾನು ನಿಮ್ಮನ್ನು ಇಲ್ಲಿಯೇ ಇರಬೇಕೆಂದು ಹೇಳುವ ಸಂದರ್ಭ ಬಂದರೆ?

ರನ್ನಮಯ್ಯ : ನಾನು, ನಮ್ಮ ಮನೆತನದ ಮುದುವೊಳಲನ್ನು ಬಿಟ್ಟು, ಸಂಸಾರ ಸಮೇತ ಬಂದು ಮಾನ್ಯಖೇಟದಲ್ಲಿರುವ ಆಶ್ರಯಧಾಮದಲ್ಲಿ ಇದ್ದು, ನನ್ನ ಕೈಂಕರ್ಯ ಮಾಡುತ್ತಿದ್ದೇನೆ. ಮಾನ್ಯಖೇಟ ರಾಜಧಾನಿಗೆ ಬಹಳ ದೂರವೇನಿಲ್ಲ. ತಾವು ಬರಬೇಕೆಂದು ಆದೇಶಿಸಿದರೆ, ಬಂದೇ ಬರುತ್ತೇನೆ. ಆದರೆ, ಅತ್ತಿಮಬ್ಬೆಯವರಿಗೆ ನಾನು ಸೇವೆ ಸಲ್ಲಿಸುವುದು ತಪ್ಪುತ್ತದೆ, ಎಂದಷ್ಟೇ ನನ್ನ ಯೋಚನೆ.

ತೈಲಪ : ನೋಡಿ ರನ್ನಮಯ್ಯರೇ, ನಮ್ಮಿಂದ ನಿಮಗೆ ಯಾವುದೇ ರೀತಿಯ ಬಲವಂತವಿಲ್ಲ. ಇನ್ನೂ ಸಾಕಷ್ಟು ಸಮಯವಿದೆ. ನಿಧಾನವಾಗಿ ಯೋಚನೆ ಮಾಡಿ. ಪರಾಮರ್ಶಿಸಿ ನಿರ್ಧಾರಕ್ಕೆ ಬನ್ನಿ. ಆಗಬಹುದಲ್ಲ ಮಲ್ಲಪರೇ.

ಮಲ್ಲಪ : ಆಗಬಹುದು. ಸದ್ಯಕ್ಕೆ ವಿಜಯೋತ್ಸವದಷ್ಟೂ ಕಾಲ ನಮ್ಮರಮನೆಯ ಅತಿಥಿಯಾಗಿರಲಿ. ಈಗಿನ ಗಡಿಬಿಡಿ ಗದ್ದಲ ಕಳೆಯಲಿ. ಆಮೇಲೆ ಅವರ ನಿರ್ಧಾರ ತಿಳಿಸಲಿ.

ತೈಲಪ : ಸರಿ, ನೀವು ಅವರಿಗೆ ಬೇಕಾದ ವ್ಯವಸ್ಥೆ ಮಾಡಿ. ನಿಮ್ಮ ಪುತ್ರಿಯೂ ಬಂದಿರುವ ವಿಚಾರ ತಿಳಿಯಿತು. ಅವರಿಗೆ ಯಾವುದೇ ಅನಾನುಕೂಲವಾಗದಂತೆ ನೋಡಿಕೊಳ್ಳಿ.

ಮಲ್ಲಪ : ನನಗಿನ್ನು ಅಪ್ಪಣೆ ಕೊಡಿಸಿ.

ರನ್ನಮಯ್ಯ : ನಾನೂ ಬರುತ್ತೇನೆ ಪ್ರಭು. ದೈವೇಚ್ಛೆಯೇನಿದೆಯೋ ಅದರಂತೇ ನಡೆಯಲಿ.

**ತೈಲಪ** : ಹೋಗಿ ಬನ್ನಿ ರನ್ನಮಯ್ಯರೇ, ನಿಮಗೆ ಮಂಗಳವಾಗಲಿ.

**ತೈಲಪ** : ಕೇಶಿದಂಡನಾಥರೇ, ರನ್ನಮಯ್ಯರನ್ನು ಆಸ್ಥಾನ ಕವಿಯಾಗಿ ಮಾಡಿಕೊಳ್ಳಬೇಕೆಂಬ ವಿಚಾರದಲ್ಲಿದ್ದೇವೆ. ವಿಜಯೋತ್ಸವದ ಸಂದರ್ಭದಲ್ಲಿಯೇ ಹಾಗೆಂದು ಆದೇಶ ಹೊರಡಿಸಬೇಕೆಂದಿದ್ದೇವೆ. ನಿಮ್ಮ ವಿಚಾರಗಳೇನು?

**ಕೇಶಿದಂಡನಾಥ**: ಮಲ್ಲಪರು ಸಾಹಿತ್ಯಾಸಕ್ತರು, ಪ್ರಚೋದಕರು ಸಹ., ಅವರು ಸನ್ನಿಧಾನಕ್ಕೆ ಕೊಟ್ಟಿರುವ ವಿವರಗಳ ಆಧಾರದ ಮೇಲೆ ನೀವು ಈ ಆದೇಶ ಹೊರಡಿಸುವ ತೀರ್ಮಾನವನ್ನು ತೆಗೆದುಕೊಳ್ಳಬಹುದೆನಿಸುತ್ತದೆ.

**ತೈಲಪ** : ಅದು ಏನೇ ಇರಲಿ. ನೀವೂ ಸಹ ಸಾಹಿತ್ಯ ಅಭ್ಯಾಸ ಮಾಡಿದವರು ರಚಯಿತರು ಕೂಡ. ಸಾಧ್ಯವಾದರೆ ಅವರ ರಚನೆಗಳನ್ನು ಪರಿಶೀಲಿಸಬಹುದು.

**ಕೇಶಿ** : ವಿಜಯೋತ್ಸವ ಕಳೆದ ಮೇಲೆ ಮಾಡಬಹುದೇನೋ ಎನಿಸುತ್ತದೆ. ಸನ್ನಿಧಾನ ಈಗಲೇ ಆಗಬೇಕೆಂದರೆ ನಾನು ಸಿದ್ಧನಾಗಿದ್ದೇನೆ.

**ತೈಲಪ** : ವಿಜಯೋತ್ಸವದ ನಂತರವೇ ಬಿಡುವಾಗಿ ಕೃತಿ ಪರಿಶೀಲನೆ ಮಾಡಬಹುದು. ಮಲ್ಲಪರಿಗೂ ಸಾಕಷ್ಟು ಕೆಲಸಗಳಿವೆ.

**ಕೇಶಿ** : ತುಂಬಾ ಮಹತ್ವಾಕಾಂಕ್ಷೆಯುಳ್ಳವರಂತೆ ಕಾಣುತ್ತದೆ.

**ತೈಲಪ** : ಹೌದು. ಇಂತಹ ಮಹತ್ವಾಕಾಂಕ್ಷೆಯುಳ್ಳ ಪ್ರತಿಭಾವಂತ ಕವಿಗಳಾದರೆ, ಸಾಂಸ್ಕೃತಿಕ ಪರಂಪರೆಯ ಅರಿವೇ ಇಲ್ಲದೆ ಸ್ವ ಪ್ರತಿಷ್ಠೆಯಿಂದ ಬೀಗುತ್ತಿರುವ ವಾಕ್ಪತಿರಾಜ– ಆ ಪರಮಾರ ಮುಂಜನಿಗೆ, ಅವರ ಅನುಯಾಯಿಗಳಿಗೆ ನಮ್ಮ ಉಭಯಭಾಷಾ ಪ್ರವೀಣರನ್ನು ತೋರಿಸಿ ಅವರ ಬಾಯಿ ಮುಚ್ಚಿಸಬಹುದು.

**ಕೇಶಿ** : ಒಬ್ಬರು ಹೇಳಿದ ಮಾತ್ರಕ್ಕೆ ಏನಾಗುವುದು? ಅಷ್ಟಕ್ಕೂ ಮುಂಜನಿಗೆ ಪರಂಪರೆಯ ಅರಿವಿಲ್ಲವೆಂದು ಹೇಳಿದಿರಲ್ಲ. ನಿಮಗೆ ಹೇಗೆ ಗೊತ್ತು?

**ತೈಲಪ** : ಇನ್ನೂ ಯುದ್ಧ ಆರಂಭವಾಗಿರಲಿಲ್ಲ. ಉತ್ತರದ ಕಡೆಯವರು ಯಾರೋ ಧಾರಾ ನಗರದಿಂದ ಎಲಾಪುರಕ್ಕೆ ಶಿವಾಲಯ ನೋಡಲು ಆಶಿಸಿ ಮಾರ್ಗ ಕೇಳಿದರಂತೆ. ಅದಕ್ಕೆ ಮುಂಜನ ಕಡೆಯವರು ವಿಕಟವಾಗಿ ನಕ್ಕು ಅಲ್ಲಿಗೇಕೆ ಹೋಗುತ್ತೀರಿ. ಅಲ್ಲಿ ಏನಿದೆ ನೋಡಲು ಮಣ್ಣು. ತೈಲಪನೆಂಬುವನು ಯಾವನೋ ಒಬ್ಬ ಒರಟು ಅರಸಿಕ ರಾಜನಿರುವಾಗ ಕಲೆ, ಸಂಸ್ಕೃತಿಗಳಿಗೆಲ್ಲಿದೆ ಎಡೆ ಎಂದು ಇನ್ನೂ ಏನೇನೋ ಇಲ್ಲಸಲ್ಲದ್ದನ್ನು ಹೇಳಿ ಕಳಿಸಿಬಿಟ್ಟರಂತೆ.

ಕೇಶಿ : ನಾನೂ ಕೇಳಿದ್ದೇನೆ ಪ್ರಭು. ತಮ್ಮ ವಿಚಾರವಾಗಿ ಇನ್ನೂ ಕಠೋರವಾದ ಮಾತುಗಳನ್ನಾಡಿದ್ದನ್ನೂ ಕೇಳಿಸಿಕೊಂಡಿದ್ದೇವೆ.

ತೈಲಪ : ಹೊಡಿ, ಬಡಿ, ಕಡಿ, ಕೊಲ್ಲು ಎಂದಷ್ಟೇ ಅವರು ಬಲ್ಲರು ಎಂದು ಅಪಪ್ರಚಾರ ಮಾಡಿದ್ದಾರೆ.

ಕೇಶಿ : ಮದಾಂಧರ ಹುಚ್ಚು ಕಲ್ಪನೆ. ಇಂಥಾದ್ದನ್ನು ಪ್ರತಿಪಾದಿಸುವವರು ತಾವೇ ಕಡೆಗೆ ಮಣ್ಣು ಮುಕ್ಕುತ್ತಾರೆ ಇದು ಸತ್ಯ.

ತೈಲಪ : ಅಲ್ಲಿಯವರೆಗೆ ನಮ್ಮ ಬಗ್ಗೆ ಜನ ತಳೆಯುವ ಅಭಿಪ್ರಾಯದ ಬಗೆಗೆ ಏನು ಹೇಳುತ್ತೀರಿ?

ಕೇಶಿ : ನಿಜ. ಜನರಲ್ಲಿ ಬೇರೂರುತ್ತಿರುವ ಇಂತಹ ಅಭಿಪ್ರಾಯಗಳನ್ನು ತೊಡೆದು ಹಾಕಬೇಕಾದರೆ ಲೋಕಕ್ಕೆ ನಾವು ನಮ್ಮ ನಿಜವಾದ ಸ್ವರೂಪವನ್ನು ಮತ್ತು ಕಲೆ, ಸಾಹಿತ್ಯಗಳಿಗೆ ನಾವೇನು ಮಾಡುತ್ತಿದ್ದೇವೆಂಬುದನ್ನು ಪ್ರತ್ಯಕ್ಷವಾಗಿ ತೋರಿಸಬೇಕು.

ತೈಲಪ : ಅದಕ್ಕೆಂದೇ ಈ ನಿರ್ಧಾರ, ದಂಡನಾಥರೇ........ಮುಂಜನಿಗೆ ನಮ್ಮವರ ಸಾಮರ್ಥ್ಯವೇನೆಂಬುದನ್ನು ಸ್ಪಷ್ಟಪಡಿಸಬೇಕು.

ಕೇಶಿ : ಆ ಕಾಲ ಬೇಗ ಬರಲೆಂದು ಹಾರೈಸುತ್ತೇನೆ.

ಊಳಿಗದವನು : ಸನ್ನಿಧಾನ, ದಂಡನಾಥರ ವಿನಹ ಉಳಿದವರೆಲ್ಲರೂ ವಿಜಯೋತ್ಸವ ವ್ಯವಸ್ಥೆಯ ಕೂಡುಹಕ್ಕಾಗಿ ಮಂಥಣ ಸಾಲೆಗೆ ಬಂದು ಸನ್ನಿಧಾನದ ನಿರೀಕ್ಷೆಯಲ್ಲಿ ಇದ್ದಾರೆಂಬುದನ್ನು ಅಮ್ಮುಗಿಯವರು ತಮಗೆ ತಿಳಿಸಿದ್ದಾರೆ.

ತೈಲಪ : ಆಯಿತು.

ಕೇಶಿ : ಸನ್ನಿಧಾನದ ಅಪ್ಪಣೆಯಂತೆಯೇ ಆಗಲಿ.

******

[ರಾಜಸಭೆ–ಜನಸಂದಣಿ..................................]

[ಸಭೆ. ಮಂತ್ರಿ. ಸಾಮಂತ. ದಂಡನಾಥ. ಪ್ರಹಾನೀಕ. ಅಂತಃಪುರ ಸ್ತ್ರೀಯರುಸಮಾವೇಶಗೊಂಡಿದ್ದಾರೆ. ಸಭೆಯಲ್ಲಿ ಗುಜು ಗುಜು]

ಮಲ್ಲಪ : ಚಾಲುಕ್ಯ ನಾಡಿನ ಪ್ರಮುಖರೇ, ತಾಯಂದಿರೇ, ಪೌರರೇ, ಸನ್ನಿಧಾನದ ಅಪ್ಪಣೆಯಂತೆ ತಮ್ಮನ್ನುದ್ದೇಶಿಸಿ ಒಂದೆರಡು ಮಾತನಾಡ ಬಯಸುತ್ತೇನೆ. ಚಕ್ರವರ್ತಿಗಳು ಸಿಂಹಾಸನವೇರಿ ಹದಿನೆಂಟು ಸಂವತ್ಸರಗಳಾಗಿವೆ.

ಸಂಕಟದ ದಿನಗಳು ದೂರವಾಗಿ ರಾಷ್ಟ್ರವು ಉಜ್ವಲ ಭವಿಷ್ಯದತ್ತ ಸಾಗಿದೆ. ಈ ನಾಡಿನ ಏಳ್ಗೆಗಾಗಿ ನಿಷ್ಠಾವಂತ ವ್ಯಕ್ತಿಗಳ ತ್ಯಾಗ. ಬಲಿದಾನ, ನಿರಂತರ ದುಡಿಮೆಗಳು ಕಾರಣವಾಗಿವೆ. ಸರ್ವತೋಮುಖವಾದ ಬೆಳವಣಿಗೆಯನ್ನು ಸಾಧಿಸುವಲ್ಲಿ ಪ್ರಭುಗಳ ದೂರದರ್ಶಿತ್ವ, ಪ್ರೋತ್ಸಾಹ, ಪ್ರಚೋದನೆಗಳು ಕಾರಣವಾಗಿವೆ. ಏನೇ ಆದರೂ ನಾವು ನಮ್ಮ ಒಗ್ಗಟ್ಟನ್ನು ಬಿಡಬಾರದು. ಯುವಕರು ರಾಷ್ಟ್ರ ರಕ್ಷಣೆಯ ಹೊಣೆ ಹೊರಲು ಹುಮ್ಮಸ್ಸಿನಿಂದ ಮುಂದೆ ಬರಬೇಕೆಂದು ಪ್ರಾರ್ಥಿಸುತ್ತೇನೆ.

**ಪಂಡಿಗ** : ಪ್ರಜೆಗಳೇ ಇವರು ಇದೆಲ್ಲವನ್ನು ಹೇಳಿದರು. ಮಹಾದಂಡ ನಾಯಕರಾಗಿದ್ದ ನಾಗದೇವರು ನಾಡಿಗಾಗಿ ಪ್ರಾಣ ತ್ಯಾಗ ಮಾಡಿದರೆ ಅವರ ಮೊಮ್ಮಕ್ಕಳಾದ ಅಣ್ಣಿಗರು ಪ್ರಭುಗಳ ಪ್ರಾಣ ಉಳಿಸಿದರು. ಇದೇ ಆದರ್ಶ ಎಲ್ಲ ಯುವಕರ ಗುರಿಯಾಗಬೇಕು. ನಮ್ಮ ಚಕ್ರವರ್ತಿ ಪುತ್ರರಾದ ಸತ್ಯಾಶ್ರಯರು ಯುವ ಸೈನ್ಯದ ನಾಯಕತ್ವವನ್ನು ವಹಿಸಲಿದ್ದಾರೆ. ಅವರೊಂದಿಗೆ ಸೈನ್ಯ ಸೇರಬಯಸುವ ಯುವಕರೆಲ್ಲರೂ ತಮ್ಮ ಹೆಸರುಗಳನ್ನು ನಮ್ಮಲ್ಲಿ ಕೊಡಬಹುದು. ಈಗ ಸತ್ಯಾಶ್ರಯರಿಗೆ ಕರವಾಳ ಪ್ರಧಾನವಾಗಲಿದೆ.

**ಜನಸ್ತೋಮ** : ಸತ್ಯಾಶ್ರಯ ಕುಮಾರರಿಗೆ ಜಯವಾಗಲಿ, ಜಯವಾಗಲಿ.

**ತೈಲಪ** : ನನ್ನ ಪ್ರೀತಿಯ ಪ್ರಜೆಗಳೇ, ಈ ವಿಜಯೋತ್ಸವ ಸಂದರ್ಭದಲ್ಲಿ ವೀರ ಪುರುಷರನ್ನು, ತ್ಯಾಗ ಜೀವಿಗಳನ್ನು, ವಿದ್ವತ್ ಪೋಷಕರನ್ನು, ಮಹಾದಾನಿಗಳನ್ನು , ಕವಿ ಕಲಾವಿದರನ್ನು ಗುರುತಿಸಿ ಅವರನ್ನು ಗೌರವಿಸಿ ತಮಗೆಲ್ಲರಿಗೂ ಪರಿಚಯಿಸಬೇಕಾದ್ದು ನಮ್ಮ ಧರ್ಮ. ಈಗ ನಾನು ಲೋಕಕ್ಕೆ ಜ್ಞಾನ ಪ್ರಸಾರ ಮಾಡಿ ಸಮಾಜದ ಒಳಿತಿಗೆ ದುಡಿಯುತ್ತಿರುವ ತಾಯಿ ಅತ್ತಿಮಬ್ಬೆಯವರನ್ನು ವೇದಿಕೆಗೆ ಆಹ್ವಾನಿಸುತ್ತಿದ್ದೇನೆ........ಅವರಿಗೆ 'ದಾನ ಚಿಂತಾಮಣಿ' ಬಿರುದಿನೊಂದಿಗೆ ಗೌರವಿಸಬೇಕೆಂಬುದು ನಮ್ಮೆಲ್ಲರ ಆಸೆಯಾಗಿದೆ......ತಾಯಿ ನಮ್ಮ ಆಸೆಯನ್ನು ಒಪ್ಪಿಕೊಳ್ಳಬೇಕು...........(ಚಪ್ಪಾಳೆ).

ಈಗ ಅಣ್ಣಿಗ ಕುಮಾರರು ವೇದಿಕೆಗೆ ಬರಬೇಕು.....ನಮ್ಮ ಪ್ರಾಣ ಉಳಿಸಿ ನಮಗೆ ಪುನರ್ಜನ್ಮ ಕೊಟ್ಟ ಧೀರ ಯುವಕನಿಗೆ, ನಮ್ಮನ್ನು ರಕ್ಷಿಸಿದ ಸಂದರ್ಭದಲ್ಲಿ ಅವನ ಬಾಯಿಂದ ಹೊಮ್ಮಿದ 'ಪಡೆವಳ ತೈಲ' ಎಂಬುದನ್ನೇ ಬಿರುದಾಗಿ ದಯಪಾಲಿಸಿದ್ದೇವೆ. (ಚಪ್ಪಾಳೆ) ಕಡೆಯದಾಗಿ ನಿಮ್ಮೆದುರು ಸಾಂಸ್ಕೃತಿಕ ರಾಯಭಾರಿಗಳಾಗಿರುವ

ಮಹಾವ್ಯಕ್ತಿಯೊಬ್ಬರಿದ್ದಾರೆ. ಅವರು ಯಾರೆಂಬುದನ್ನು ಕೇಶಿ ದಂಡನಾಥರು ಪರಿಚಯಿಸುತ್ತಾರೆ.

**ಕೇಶಿದಂಡನಾಥ**: ಬಂಧುಗಳೇ, ನಾನು ಪರಿಚಯಿಸಲಿರುವ ವ್ಯಕ್ತಿ ಬೇರೆ ಯಾರೂ ಅಲ್ಲ. ಈ ನಾಡಿನ ಕೀರ್ತಿ ಶಿಖರವಾಗಿರುವ, ಸಾಹಿತ್ಯ ಲೋಕದ ಧ್ರುವತಾರೆಯಾಗಿರುವ ಮಹಾಕವಿ ರನ್ನಮಯ್ಯರು. ಇಂದಿನಿಂದ ಇವರು ತೈಲಪ ಚಕ್ರವರ್ತಿಗಳ ಆಸ್ಥಾನ ಕವಿಗಳಾಗಿರುತ್ತಾರೆ. ಪ್ರಭುಗಳು ಈ ವಿಚಾರವಾಗಿ ಆದೇಶವನ್ನಿತ್ತಿದ್ದಾರೆ.

**ರನ್ನಮಯ್ಯ** : ಸನ್ನಿಧಾನದ ಈ ಆದೇಶ, ನನ್ನ ಮೇಲೆ ಗುರುತರವಾದ ಹೊಣೆಯನ್ನು ಹಾಕಿದೆ. ಸತ್ಯ ನಿಷ್ಠೆಯಿಂದ, ನಿರ್ಮಲ ಮನಸ್ಸಿನಿಂದ ನಾನು ನಮ್ಮ ಆಸ್ಥಾನಕ್ಕೆ, ಗೌರವ ತುಂಬಿಕೊಡಲು ಪ್ರಯತ್ನಿಸುತ್ತೇನೆ. ನನಗೆ ಸಂದ ಈ ಗೌರವಕ್ಕೆ ಸನ್ನಿಧಾನಕ್ಕೆ ನಾನು ಚಿರಋಣಿಯಾಗಿರುತ್ತೇನೆ.

**ಕೃಷ್ಣ** : ಸಭಾಸದರಿಗೆ, ಹಿರಿಯರಿಗೆ ನನ್ನ ಗೌರವಪೂರ್ವಕ ನಮಸ್ಕಾರಗಳು. ವಿಜಯೋತ್ಸವದ ಕಾರ್ಯಕ್ರಮಗಳು ಕೊನೆಯ ಹಂತವನ್ನು ತಲುಪಿದೆ. ಕಾರ್ಯಕ್ರಮಗಳ ಯಶಸ್ಸಿಗೆ ಕಾರಣರಾದ ತಮಗೆಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಈ ಸಂದರ್ಭದಲ್ಲಿ ತೈಲಪ ಚಕ್ರವರ್ತಿಗಳು ನನ್ನ ಮನಸ್ಸಿನಾಳದಲ್ಲಿ ಕುಡಿಯಾಡುತ್ತಿರುವ ಒಂದೆರಡು ಮಾತುಗಳನ್ನು ಹೇಳಿಕೊಳ್ಳಲು ಅನುವು ಮಾಡಿಕೊಡಬೇಕು.

**ತೈಲಪ** : ಕೃಷ್ಣರೇ ನಿಮ್ಮಂತರಾಳದಲ್ಲಿನ ಮಾತುಗಳನ್ನು ಹೇಳಿಕೊಳ್ಳಲು ನೀವು ಸ್ವತಂತ್ರರಾಗಿದ್ದೀರಿ. ಆದರೆ ಇಷ್ಟೊಂದು ಬಹಿರಂಗವಾಗಿ ಹೇಳಿಕೊಳ್ಳಬೇಕಾದ ಅನಿವಾರ್ಯತೆ ಇದೆಯೇನು?

**ಕೃಷ್ಣ** : ಹೌದು. ನನ್ನ ವಿಚಾರವಾಗಿ ಜನರಲ್ಲಿ ಅನೇಕ ಊಹಾಪೋಹಗಳಿವೆ. ಅದನ್ನು ಹೋಗಲಾಡಿಸಬೇಕೆಂದಿದ್ದೇನೆ.

**ತೈಲಪ** : ಆಯಿತು. ಮುಂದುವರೆಯಿರಿ.

**ಕೃಷ್ಣ** : ನಾನು ರಾಷ್ಟ್ರಕೂಟ ವಂಶದವನು. ಆದರೆ ಈಗ ಈ ಚಾಲುಕ್ಯ ನಾಡಿನ ಪ್ರಜೆಯಾಗಿ, ಇವರೊಳಗೆ ಒಬ್ಬನಾಗಿ ಬನವಾಸಿ ಹನ್ನೆರಡು ಸಾಸಿರ ಪ್ರಾಂತದ ಮೇಲ್ವಿಚಾರಕನಾಗಿ ಈ ಸಿಂಹಾಸನದಡಿಯಲ್ಲಿ ಶ್ರದ್ಧೆ ನಿಷ್ಠೆಗಳಿಂದ ನಡೆದುಕೊಂಡಿದ್ದೇನೆ. ರಾಷ್ಟ್ರಕೂಟನಾಗಿ ಚಾಲುಕ್ಯರ ಸೇವೆ ಮಾಡುತ್ತಿರುವುದರಿಂದ ನನ್ನನ್ನು ವಂಶದ್ರೋಹಿ ಎನ್ನಬಹುದು. ಆದರೆ ನಾನು ನ್ಯಾಯ ಪಕ್ಷಪಾತಿ. ಮೂಲತಃ ಈ ಸಾಮ್ರಾಜ್ಯ ಚಾಲುಕ್ಯರದೇ. ಅವರಿಂದ ನಾವು ಕಸಿದುಕೊಂಡಿದ್ದೆವು. ಈಗ ಮತ್ತೆ

ಅವರದು ಅವರದಾಗಿದೆ ಅಷ್ಟೆ! ಈಗ ಪರಿಸ್ಥಿತಿ ಪರಸ್ಪರ ದ್ವೇಷಾಸೂಯೆ ಮುಕ್ತವಾಗಿದೆ. ಚಕ್ರವರ್ತಿಗಳ ಪುತ್ರರಾದ ಸತ್ಯಾಶ್ರಯ ಚಾಲುಕ್ಯ-ರಾಷ್ಟ್ರಕೂಟ ವಂಶ ಸಮನ್ವಯದ ಪ್ರತೀಕ. ಎರಡು ರಾಜವಂಶಗಳ ರಕ್ತ ಏಕವಾಹಿನಿಯಾಗಿ ಅವರಲ್ಲಿ ಪ್ರವಹಿಸಿದೆ. ಇನ್ನು ಮುಂದೆ ಈಶಾನ್ಯ ಚಾಲುಕ್ಯ ರಾಷ್ಟ್ರಕೂಟ ಸಂಘಟಿತ ರಾಜ್ಯ ಇದು ಅಭೇದ್ಯ. ಇದರ ರಕ್ಷಣೆ ನನ್ನ ಹೊಣೆಯಾಗಿದೆ. ಜಯ್ ಭುವನೇಶ್ವರಿ ಜೈ!.



# ದೃಶ್ಯ - ೧೧

ಬೊಂತಾ : ಮಗು ತೈಲಪ. ಬಾ ಕಂದ.... ಇಂದು ನಿನ್ನ ಅಪ್ಪಾಜಿ ಇದ್ದಿದ್ದರೆ ಅದೆಷ್ಟು ಸಂತಸಗೊಳ್ಳುತ್ತಿದ್ದರೋ ಏನೋ! ಕಳೆದುಕೊಂಡಿದ್ದ ನಮ್ಮ ಚಾಲುಕ್ಯ ವಂಶ ವೈಭವವನ್ನು ಮರಳಿ ತಂದುಕೊಟ್ಟೆ ಮಗು.

ತೈಲಪ : ಅವ್ವೆ ಇಂದೇಕೆ ಇಷ್ಟು ಭಾವುಕರಾಗಿದ್ದೀರಿ. ಅವ್ವೆ ನೀವು ನನಗೆ ತಾಯಿಯಷ್ಟೇ ಅಲ್ಲ. ನನ್ನ ರಾಜಕೀಯ ಗುರುವೂ ನನ್ನ ಭವಿಷ್ಯವನ್ನು ರೂಪಿಸಿದ ರೂವಾರಿಯೂ ಆಗಿದ್ದೀರಿ, ನಿಮ್ಮನ್ನು ಮರೆಯುವುದುಂಟೆ? ಸದಾ ನನ್ನೆದೆಯಲ್ಲಿ ನಿಮ್ಮ ಮೂರ್ತಿಯೊಂದು ಮೂಡಿನಿಂತು ನಾನು ಸಂಕಟದಲ್ಲಿದ್ದಾಗಲೆಲ್ಲ ಧೈರ್ಯ ಭರವಸೆಗಳನ್ನು ದನಿಗೊಡುತ್ತಿರುತ್ತದೆ.

ಬೊಂತಾ : ನಿನ್ನ ಮಾತುಗಳನ್ನು ಕೇಳಿ ನನಗೆ ಹೆಮ್ಮೆ ಎನಿಸಿದೆ.

ತೈಲಪ : ನಿಮ್ಮಾಸೆಗಳೊಂದನ್ನೂ ನಿರಾಸೆಗೊಳಿಸುವುದಿಲ್ಲ ತಾಯೆ. ಈಗಾಗಲೇ ಸತ್ಯಾಶ್ರಯ ಯುವ ಸೈನ್ಯದ ನಾಯಕನಾಗಿದ್ದಾನೆ.

ಬೊಂತಾ : ಒಳ್ಳೆಯ ಕೆಲಸ ಮಾಡುತ್ತಿರುವೆ ಮಗು. ಭೌತಿಕ ಸುಖ ಸಂತೋಷ, ಯುದ್ಧಗಳು, ದಿಗ್ವಿಜಯ, ಕೀರ್ತಿ ಇವೆಲ್ಲವೂ ಬೇಕಾಗುವುದರೊಂದಿಗೆ. ಇದಕ್ಕೂ ಮೀರಿದ ಆತ್ಮ ಶ್ರೀಮಂತಿಕೆಗೆ ಅನಿವಾರ್ಯವಾದ ಕಲೆ. ಸಾಹಿತ್ಯ, ಧರ್ಮ, ತತ್ವ ಇತ್ಯಾದಿಗಳೂ ಮುಖ್ಯವಾಗಬೇಕು. ಒಬ್ಬ ಚಕ್ರವರ್ತಿ. ಚಕ್ರಾಧಿಪತ್ಯಗಳು ನೆನಪಿನಲ್ಲಿ ಉಳಿಯುವುದು ಕೇವಲ ಬಲಾಬಲ ಸಾಮರ್ಥ್ಯ ಸಾಧನೆಗಳಿಂದಲ್ಲ; ಕಾಲ ದೇಶಗಳನ್ನು ಮೀರಿ ಉಳಿಯುವಂತಹ ಕಲಾಸೇವೆ ಮತ್ತು ನಮ್ಮ ಸೌಂದರ್ಯ ಪ್ರಜ್ಞೆಯ, ಧಾರ್ಮಿಕ ಶ್ರದ್ಧೆಯ ಪ್ರತೀಕಗಳಾಗಿ ಉಳಿಯುವ ಗುಡಿ ಗೋಪುರಗಳು ಮತ್ತು ಕಾವ್ಯ ಗ್ರಂಥಗಳಿಂದ!

**ತೈಲಪ** : ಅವ್ವೆ. ನಿಮ್ಮ ದೃಷ್ಟಿ ವೈಶಾಲ್ಯ, ಅರಿವಿನ ಆಳ, ಅನುಭವದ ಮಾತುಗಳು ನನ್ನನ್ನು ದಿಗ್ಭ್ರಮೆಗೊಳಿಸುತ್ತಿವೆ. ಈ ಅಪಾರ ಜ್ಞಾನವನ್ನು ಗಳಿಸಿಕೊಂಡಿದ್ದು ಹೇಗೆ?

**ಬೊಂತಾ** : ಜೀವನ, ಪರಿಸರ, ಸಂಬಂಧಗಳು. ಹೀಗೆ ನೂರೆಂಟು ರೀತಿಗಳಲ್ಲಿ ಅರಿವು ಸೇರುತ್ತಾ ಹೋಗುತ್ತದೆ ಎಂದು ಹೇಳಿದ್ದರು. ರಾಜಧಾನಿಗೆ ಬರುವುದು ತಡವಾಗಬಹುದೆಂದು ನನ್ನ ಮೂಲಕ ತಿಳಿಸಲು ಹೇಳಿದರು.

– – ವಿರಾಮ – –

**ಮಲ್ಲಪ** : ಪ್ರಭು, ರಾಜ್ಯಾಂದತ ಸುತ್ತಿ ಬಂದ ಪಂಡಿಗರು. ಸನ್ನಿಧಾನದಲ್ಲಿ ನಿವೇದಿಸಿಕೊಳ್ಳಲು ಹಲವು ಗಂಭೀರ ವಿಚಾರಗಳು ಇವೆ.

**ತೈಲಪ** : ಅಂದರೆ ಪಂಡಿಗರು ಈ ಮನ್ತ್ರಣಕ್ಕೆ ಇರುವುದಿಲ್ಲವೇನು?

**ಮಲ್ಲಪ** : ಹಾಗೆಂದು ಕೊಂಡಿದ್ದರು. ಆದರೆ ಅನಿವಾರ್ಯ ಕಾರಣಗಳಿಂದ ನಿರೀಕ್ಷಿತ ಸಮಯಕ್ಕಿಂತ ಮೊದಲೇ ರಾಜಧಾನಿಗೆ ಬಂದು ಬಿಟ್ಟರು. ಇಲ್ಲಿಗೆ ಬರುವಾಗ ಎದುರಾಗಿ, ತಾವೂ ಈ ಮನ್ತ್ರಣಕ್ಕೆ ಬರುವುದಾಗಿ ತಿಳಿಸಿದರು. ಇನ್ನೇನು ಇರಬಹುದು.

**ಪಂಡಿಗ** : (ಪ್ರವೇಶಿಸಿ) ಸನ್ನಿಧಾನ ಕ್ಷಮಿಸಬೇಕು. ಬರುವುದು ತಡವಾಗಿ ತಮ್ಮನ್ನು ಕಾಯಿಸಿಬಿಟ್ಟೆ.... ನಾನು ವಾಯುವ್ಯೋತ್ತರ ಸಂಚಾರದಿಂದ ಸಂಗ್ರಹಿಸಿದ ವಿವರಗಳನ್ನು ನಿವೇದಿಸಲು ಅವಕಾಶಕೊಡಬೇಕು.

**ತೈಲಪ** : ಹೇಳಿ ಪಂಡಿಗರೇ. ಏನಾದರೂ ವಿಶೇಷವಿದೆಯೇನು?

**ಪಂಡಿಗ** : ನಾನು ಹೇಳ ಬಯಸುವ ವಿಚಾರಗಳು ಅಷ್ಟೊಂದು ಹಿತಕರವಾದುದಲ್ಲ.

**ತೈಲಪ** : ಪರವಾಗಿಲ್ಲ. ರಾಷ್ಟ್ರದ ಹೊಣೆಹೊತ್ತವನಿಗೆ ಒಂದೊಂದು ಕ್ಷಣವೂ ಆತಂಕಕಾರಿಯೇ! ಹಿತ ಅಹಿತಗಳೆಲ್ಲವನ್ನೂ ಸಮಾನವಾಗಿ ಸ್ವೀಕರಿಸುತ್ತೇವೆ.

**ಪಂಡಿಗ** : ವಿಲಾಪುರ. ವಿಚಲಾಪುರ ಯುದ್ಧಗಳಲ್ಲಿ ಚಾಲುಕ್ಯರಿಂದ ಹಿಮ್ಮೆಟ್ಟಿಸಿಕೊಂಡು ಓಡಿ ಹೋದ. ಪರಮಾರ ಮುಂಜ ಸೇಡಿನ ಆಲೋಚನೆಯಲ್ಲಿದ್ದಾನೆ. ಅಲ್ಲದೆ ಚಾಲುಕ್ಯರ ನಾಮಾವಶೇಷ ಮಾಡದ ಹೊರತು ನೆಮ್ಮದಿಯಿಂದ ನಿದ್ರಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾನಂತೆ. ಯೋಧ ಬಲವನ್ನೂ ಹೆಚ್ಚಿಸುತ್ತ, ಜನರನ್ನು ಯಾವ

ಯಾವ ರೀತಿಯಿಂದಲೋ ಆಕರ್ಷಿಸಿ ಅವರಿಂದ ನಿಧಿ ಸಂಗ್ರಹಕ್ಕೆ ಬೇರೆ ತೊಡಗಿದ್ದಾನೆ.

ತೈಲಪ : ಅಪಪ್ರಚಾರದ ಹವಣಿಕೆ ಇನ್ನೂ ಮುಂದುವರೆಯುತ್ತಲೇ ಇದೆ ಎಂದಾಯಿತು.

ಪಂಡಿಗ : ಅವನು ಚಾಲುಕ್ಯರ ವಿಚಾರವಾಗಿ ಸಾರುತ್ತಿರುವುದನ್ನು ಸನ್ನಿಧಾನ ಕೇಳಿಸಿಕೊಂಡರೆ ಆಶ್ಚರ್ಯ ಪಡಬಹುದು.

ತೈಲಪ : ಏನೆಂದು ನಮ್ಮ ಬಗ್ಗೆ ಹೇಳುತ್ತಿದ್ದಾನೆ ಪಂಡಿಗರೇ.

ಪಂಡಿಗ : ಅದೇ ಅವನ ಎಂದಿನ ಪರಿ ಇದೆಯಲ್ಲ.... ಚಾಲುಕ್ಯರು ಮೋಸಗಾರರು. ಬೆನ್ನಿಗೆ ಚೂರಿ ಹಾಕುವವರು ಅಸಂಸ್ಕೃತ. ಕುಸಂಸ್ಕೃತ ಮೃಗಗಳು, ಅವರೂ ಅವರ ಪ್ರಜೆಗಳು.

ಅಮ್ಮುಗಿ : ಸಾಲದುದಕ್ಕೆ ಹೆಣ್ಣುಕೊಟ್ಟ ಮಾವನನ್ನೇ ದ್ರೋಹದಿಂದ ಕೊಲ್ಲಿಸಿ ಸಿಂಹಾಸನವನ್ನು ಕಬಳಿಸಿದ ಕಳ್ಳ. ಆದರೂ ತಾನು ಬಹಳ ಒಳ್ಳೆಯವನೆಂದು ಜೊಗಳೆ ಕೊಚ್ಚುತ್ತಿದ್ದಾನೆ ಎಂದೆಲ್ಲ ಹೇಳಿದನಂತೆ. ಅವನನ್ನು ಹೀಗೇ ಬಿಡಬಾರದು ಸರಿಯಾದ ಪಾಠ ಕಲಿಸಬೇಕು. ನಮ್ಮ ಸೈನಿಕರನ್ನು ಈಗಲೇ ಹೊರಡಿಸಿ ನಿಯತವಾದ ರಹಸ್ಯ ತಾಣಗಳಲ್ಲಿ ಗುಂಪು ಗುಂಪಾಗಿ ವಿಂಗಡಿಸಿ ಅಡಗಿಸಿ ಕೂರಿಸಬೇಕು.

ತೈಲಪ : ಇದರಿಂದಾಗುವ ಪ್ರಯೋಜನವೇನು?

ಪಂಡಿಗ : ಮೇಲೇರಿ ಬರುವ ಸೈನ್ಯಕ್ಕೆ ದಾಳಿ ಎದುರಿಸಬೇಕು ಎಂಬ ತಿಳಿವಳಿಕೆ ಬರುವುದಕ್ಕೆ ಮೊದಲೇ ಹಠಾತಾಗಿ ಅವರ ಮೇಲೆ ಎರಗಬೇಕು.

ಮಲ್ಲಪ : ಪಂಡಿಗರೇ ನೀವೇ ಹೇಳಿದಂತೆ ಅವರ ಸಂಖ್ಯಾಬಲ ಅಗಾಧವಾಗಿದ್ದರೆ?

ಪಂಡಿಗ : ಇಲ್ಲಿ ಸಂಖ್ಯೆ ಮುಖ್ಯವಾಗುವುದಿಲ್ಲ. ನಾವು ಮಾಡುವ ಯುದ್ಧದ ರೀತಿ ಮುಖ್ಯವಾಗುತ್ತದೆ. ಕಿರುಕುಳ ಯುದ್ಧ ಅವರಿಗೆ ಹೊಸ ತಂತ್ರವಾಗಿರಬಹುದೇನೋ! ಚಾಲುಕ್ಯರಿಗೆ ಅದು ಸಾಮಾನ್ಯ ತಂತ್ರ. ಆದ್ದರಿಂದ ನಮ್ಮ ಸೈನ್ಯಬಲದ ಸುಳಿವೂ ಕೊಡದಂತೆ ಎಲ್ಲೆಂದರಲ್ಲಿಂದ ಎರಗುತ್ತ ಅವರನ್ನು ಧ್ವಂಸಮಾಡಬೇಕು.

ತೈಲಪ : ಇವೆಲ್ಲದರ ಸೂಚನೆ ಎಂದರೆ ನಾವು ಕಾಲ ವಿಳಂಬ ಮಾಡದೆ ಕಾರ್ಯಪ್ರವೃತ್ತರಾಗಬೇಕು ಎಂದಾಯಿತು.

ಅಣ್ಣಿಗ : ಸನ್ನಿಧಾನ ಕ್ಷಮಿಸಬೇಕು. ನನ್ನದೊಂದು ಸಣ್ಣ ಸಲಹೆಯಿದೆ.

**ತೈಲಪ** : (ನಗುತ್ತ) ಓ ನಮ್ಮ ಪ್ರಾಣರಕ್ಷಕರೂ ಇಲ್ಲಿಯೇ ಇದ್ದಾರೆಯೋ. ಇಲ್ಲಿ ಇದ್ದಮೇಲೆ ಖಂಡಿತ ಅವರಿಂದ ಏನಾದರೂ ಒಂದು ಮಹತ್ವದ ಸಲಹೆಯೋ ಸಹಕಾರವೋ ಬರಲೇಬೇಕು. ಹೇಳಿ..... ಹೇಳಿ..... ಅಣ್ಣಿಗ ಕುಮಾರರೇ.

**ಅಣ್ಣಿಗ** : ಪ್ರಭು ಪಂಡಿಗರು ಹೇಳಿದ ವಿಚಾರಗಳಿಂದ ನನಗೆ ಒಂದು ಉಪಾಯ ಹೊಳೆದಿದೆ. ಈ ಹಿರಿಯರ ಸಮೂಹದಲ್ಲಿ ನಾನು ಏನೂ ಮಾತನಾಡಬಾರದೆಂದಿದ್ದೆ. ಆದರೆ ಈಗ ಆ ಮಾತುಗಳ ಹಿನ್ನೆಲೆಯಲ್ಲಿ ನನ್ನಲ್ಲಿನ ಹೊಳಹಿಗೆ ಅರ್ಥವಿದೆ ಎನಿಸುತ್ತದೆ.

**ತೈಲಪ** : ಇದು ವಿಚಾರ ವಿನಿಮಯದ ಕೂಡುಹ. ವಯಸ್ಸಿಗಿಂತ ಬುದ್ಧಿ, ಆಲೋಚನೆಗಳು ಮುಖ್ಯ. ಯಾರ ಯಾರ ಮನಸ್ಸಿನಲ್ಲಿ ಎಂತೆಂತಹ ಹೊಳಹು ಮೂಡುತ್ತದೆಯೋ ಯಾರು ಬಲ್ಲರು. ಅವರ ಹೊಳಹು ಉಪಯುಕ್ತವೆನಿಸಿದರೆ, ಸ್ವೀಕರಿಸುವುದರಲ್ಲಿ ಯಾವ ತೊಂದರೆಯೂ ಇರಲಾರದಲ್ಲವೆ?

**ಅಮ್ಮುಗಿ** : ಸ್ವೀಕರಿಸಲೂ ಬಹುದು ಇಲ್ಲ ಅದರ ಬೇರೆ ಬೇರೆ ಆಯಾಮಗಳನ್ನೂ ಚರ್ಚಿಸಿ ನಮಗೆ ಹೇಗೆ ಅನುಕೂಲವಾಗಬಲ್ಲದೋ ಅಂತೆಯೇ ಸ್ವಲ್ಪ ಬದಲಾವಣೆ ಮಾಡಿಕೊಳ್ಳಲೂಬಹುದು.

**ಪಂಡಿಗ** : ಅಣ್ಣಿಗ ವಯಸ್ಸಿನಲ್ಲಿ ಕಿರಿಯನಾದರೂ ಬಾಹುಬಲದ ಜೊತೆಗೆ ಬುದ್ಧಿಬಲವನ್ನೂ ಬೆರೆಸಿಕೊಂಡು ತಂದೆಯನ್ನೂ ಮೀರಿಸಿಬಿಟ್ಟಿದ್ದಾರೆ. ದಲ್ಲಪ, ಮಲ್ಲಪರಿಬ್ಬರೂ ಇಂತಹ ಮೊಮ್ಮಗನನ್ನು ಪಡೆದು ಧನ್ಯರಾಗಿದ್ದಾರೆ.

**ತೈಲಪ** : ಹೇಳು ಅಣ್ಣಿಗ ನಿನ್ನ ಮನಸ್ಸಿನಲ್ಲಿ ಹೊಳೆದದ್ದನ್ನು ವಿವರಿಸು. ಅದರ ಸಾಧ್ಯಾಸಾಧ್ಯತೆಗಳ ಬಗ್ಗೆ ಆಲೋಚಿಸೋಣ.

**ಅಣ್ಣಿಗ** : ಈ ಸಂವತ್ಸರದ ಅಂತ್ಯದ ಒಳಗೆ ಅವರು ಆಕ್ರಮಣ ಮಾಡಬಹುದೆಂದಲ್ಲವೆ ಬೇಹು ಬಂದಿರುವುದು. ಅವರು ಆಕ್ರಮಣ ಮಾಡಲು ಬರುವುದನ್ನು, ನಾವು ಗುಂಪು ಗುಂಪಾಗಿ ಕಾಯುವ ಬದಲು ನಮ್ಮ ಇಡೀ ಸೈನ್ಯವನ್ನು ಒಂದೇ ಮೈಯಾಗಿ ಕೂಡಲೇ ಹೊರಡಿಸಿ, ಗೋದಾವರಿ ನದಿಯನ್ನು ದಾಟಿ ಗಿರ್ನಾ ನದಿಯ ತೆಂಕಭಾಗದ ಮಲೆ ಪ್ರದೇಶದಲ್ಲಿ, ಅಚ್ಚುಕಟ್ಟಾದ ಸ್ಥಳದಲ್ಲಿ ನಿಲ್ಲಿಸಿ ಬಿಡೋಣ. ಅವರು ಗೋದಾವರಿ ದಾಟುವ ಸಮಯದಲ್ಲಿ ನಾವು ಸುಳುವು ಕೊಡದೆ, ಅವರ ಮೇಲೆ ಎರಗಿದರೆ ಅವರಿಗೆ ದಿಕ್ಕು ತೋಚದೆ ನಮ್ಮ ವಶರಾಗುವ ಸಾಧ್ಯತೆಯಿದೆ.

ತೈಲಪ : ಹುಂ! ಏನು ಹೇಳುತ್ತೀರಿ ನೀವು ಅಣ್ಣಿಗನ ಈ ಸಲಹೆಗೆ?

ಪಂಡಿಗ : ಅಣ್ಣಿಗದೇವನ ಆಲೋಚನೆಯಲ್ಲಿ ಅರ್ಥವಿದೆ ಎಂದು ಈಗ ನನಗನಿಸುತ್ತದೆ.

ಅಮ್ಮುಗಿ : ಪಂಡಿಗರೇ ಎಷ್ಟೊಂದು ಅನುಭವವಿರುವ ನಿಮಗೇಕೆ ಈ ಆಲೋಚನೆ ಹೊಳೆಯಲಿಲ್ಲ?.... ಆಶ್ಚರ್ಯವೆನಿಸಿದೆ.

ತೈಲಪ : ಹಾಗಾದರೆ ಈ ಆಲೋಚನೆ ನಿಮಗೆಲ್ಲರಿಗೂ ಸಮ್ಮತವೇ?

ಮಲ್ಲಪ : ಸಮ್ಮತವೇನೋ ಸರಿ. ಇದನ್ನು ಹೇಗೆ ಕಾರ್ಯಾಚರಣೆಗೆ ತರಬೇಕು ಎಂಬುದರ ವಿಷಯವನ್ನು ಯೋಚಿಸುವುದು ಯುಕ್ತವೆನಿಸಿದೆ.

ಪಂಡಿಗ : ನಾನು ಈ ವಿಚಾರವನ್ನು ಹಲವು ರೀತಿಯಲ್ಲಿ ಆಲೋಚಿಸಿ ನಿರ್ಧಾರಕ್ಕೆ ಬಂದಿದ್ದೆ. ಈಗ ಅಣ್ಣಿಗದೇವನ ಸಲಹೆಯನ್ನು ಕೇಳಿದ ಮೇಲೆ ಒಂದು ವಿಷಯ ನೆನಪಿಗೆ ಬಂದು ಅಣ್ಣಿಗನ ಸಲಹೆಯನ್ನು ಗಂಭೀರವಾಗಿ ಚರ್ಚಿಸಿದರೆ ಉತ್ತಮ.

ತೈಲಪ : ನಿಮ್ಮ ನೆನಪಿಗೆ ಬಂದ ವಿಷಯವಾದರೂ ಏನೆಂದು ತಿಳಿಸಿ ಪಂಡಿಗರೆ.

ಪಂಡಿಗ : ಆ ನೆನಪಿಗೆ ಬಂದ ವಿಷಯ ಎಷ್ಟರಮಟ್ಟಿಗೆ ನಂಬಲು ಸಾಧ್ಯವೋ ತಿಳಿದಿಲ್ಲ. ನಮ್ಮ ಬೇಹುಗಾರ ನಾಯಕ ಹೊನ್ನಯ್ಯನು ಕೇಳಿಸಿಕೊಂಡು ತಿಳಿಸಿದ ವಿಷಯ.

ಅಮ್ಮುಗಿ : ಏನು ಬೇಹುಗಾರ ಹೊನ್ನಯ್ಯನು ಸ್ವತಃ ಕೇಳಿಸಿಕೊಂಡನೇನು?

ಪಂಡಿಗ : ಹೌದು ಅವನಿಗೆ ಏಲಾಪುರದ ದೇವ ಮಂದಿರದಲ್ಲಿ ಒಬ್ಬ ಯಾತ್ರಿಕ ಸಿಕ್ಕಿ ಎಲ್ಲ ಪ್ರೇಕ್ಷಣೀಯ ಸ್ಥಳಗಳ ವಿಚಾರವಾಗಿ ಅದೂ ಇದೂ ಮಾತನಾಡುವಾಗ ಮಾಳವ ದೇಶದ ವಿಚಾರ ಬಂತಂತೆ. ಅಲ್ಲಿನವರ ಗುಣಗಾನದ ಜೊತೆಗೆ ಅಲ್ಲಿನ ಪರಿಸ್ಥಿತಿ ಬಹಳ ಬಿಗಿಯಾಗಿದೆ. ಬಲವಂತದಿಂದ ಯುವಕರನ್ನು ಸೈನ್ಯಕ್ಕೆ ಸೇರಿಸುತ್ತಿರುವುದರಿಂದ ಬಹಳ ಜನ ಅಸಮಾಧಾನಗೊಂಡಿದ್ದಾರಂತೆ?

ತೈಲಪ : ಓ! ನಮಗೆ ಇದು ಬಹಳ ಕುತೂಹಲಕರ ಮತ್ತು ಪ್ರಯೋಜನಕರ ವಿಷಯವೇ ಆಗಿದೆ. ಇಂತಹ ವಿಷಯಗಳಿಂದ ನಮ್ಮ ಯೋಜನೆಗಳನ್ನು ಸಮರ್ಥವಾಗಿ ರೂಪಿಸಿಕೊಳ್ಳಬಹುದು. ಮತ್ತೇನು ಹೇಳಿದ ಹೊನ್ನಯ್ಯ?

ಪಂಡಿಗ : ಮುಂಜ ಚಾಲುಕ್ಯರ ಮೇಲೆ ದಂಡೆತ್ತಿ ಬರಲು ಹೊರಟೇ ಬಿಟ್ಟಿದ್ದನಂತೆ. ಆದರೆ ಸ್ವಲ್ಪಮಟ್ಟಿಗೆ ವಿವೇಕವಂತನಾದ ಮಂತ್ರಿ ರುದ್ರಾದಿತ್ಯ ದೊರೆ ಮುಂಜನನ್ನು ತಡೆದು ಆತುರಬೇಡವೆಂದು ನಿರೋಧಿಸಿದನಂತೆ.

ಅಮ್ಮಗಿ : ಬಹುಶಃ ನಮ್ಮ ವಿಜಯೋತ್ಸವದಲ್ಲಿ ಕಾಣಿಸಿಕೊಂಡು ನಮ್ಮ ಗಮನ ಸೆಳೆದಿದ್ದ ಆ ಮಾಳವ ದೇಶದವರಿಗೆ ನಮ್ಮ ಸೈನ್ಯಬಲದ ಬಗ್ಗೆ ಮಾಹಿತಿ ಕೊಟ್ಟಿರಬೇಕು.

ಪಂಡಿಗ : ಅವನು ಹೇಳಿರಹುದಾದ ಸಾಧ್ಯತೆ ಒಂದು ಕಡೆ. ಆದರೆ ಇದು ಬೇರೆಯೇ ಕಾರಣಕ್ಕಾಗಿ ಆಗಿದೆ. ಅದು ವೈಯಕ್ತಿಕವಾದ್ದು.

ತೈಲಪ : ವೈಯಕ್ತಿಕವಾದುದು ಎಂದರೆ?

ಪಂಡಿಗ : ರುದ್ರಾದಿತ್ಯ ಮುಂಜನಿಗೆ ಆಪ್ತವಾಗಿ ಹೇಳಿದನಂತೆ. ಸನ್ನಿಧಾನ ನನ್ನ ಮಾತಿಗೆ ಬೆಲೆ ಕೊಡಬೇಕು. ಗೋದಾವರಿ ದಾಟಿದರೆ ಆಪತ್ತು ಇದೆ. ಇದು ನನ್ನ ಭವಿಷ್ಯವಾಣಿ. ದಯವಿಟ್ಟು ತಾತ್ಸಾರ ಮಾಡಬೇಡಿ. ನನಗೆ ಆಲೋಚನೆಗಳನ್ನು ಹಂಚಿಕೊಳ್ಳಲು ನಾನಿರುವುದಿಲ್ಲ. ಚಾಲುಕ್ಯರೇ ಗೋದಾವರಿ ದಾಟಿ ಬಡಗಕ್ಕೆ ಬರಲಿ. ನೀವು ಮಾತ್ರ ದಾಟಿ ತೆಂಕಕ್ಕೆ ಹೋಗಲೇ ಬೇಡಿ ಎಂದು ಹೇಳಿ ಆಗುವ ಅಚಾತುರ್ಯವನ್ನು ತಡೆದನಂತೆ.

ಮಲ್ಲಪ : ಇಂತಹ ಸಂದರ್ಭದಲ್ಲಿ ಅಣ್ಣಿಗನ ಸೂಚನೆ ನಮಗೆ ಅನುಕೂಲವೆನಿಸುತ್ತದೆ. ನಾವು ಗಿರ್ನಾನದಿಯ ತೆಂಕ ತೀರದಲ್ಲಿ ಮಲೆಗಳ ಮರೆಯಲ್ಲಿದ್ದು ಅವರು ಅದನ್ನು ದಾಟುವಂತೆ ನಮ್ಮ ತಂತ್ರವನ್ನು ಹೂಡಬಹುದಲ್ಲವೇ? ಅವರು ಗಿರ್ನಾ ದಾಟಿ ಬಂದರೂ ನಾವು ಎದುರಿಸುವುದೇ ಬೇಡ ಅವರಿಗೆ ಹಾದಿಗಳು ನಿರಾತಂಕವೆನಿಸಿ ಹಾಯಾಗಿ ಮುಂದುವರೆಯಲಿ.

ತೈಲಪ : ಆಲೋಚನೆಗಳು, ಸಲಹೆಗಳು ಬಹಳ ಸಮರ್ಪಕವೆನಿಸಿದರೂ ಅದು ನಿಜವಾಗಿರಬೇಕಲ್ಲವೇ? ನೀವೇ ಹೇಳಿದಿರಿ. ಇದೆಲ್ಲವೂ ಎಷ್ಟು ನಂಬಿಕೆಗೆ ಅರ್ಹವೋ ಎಂದು.

ಪಂಡಿಗ : ಹಾಗೆ ಅಂದದ್ದಂತೂ ನಿಜ. ಆದರೆ ಅಂತಹ ಸಾಧ್ಯತೆಗಳ ಬಗ್ಗೆ ಯೋಚಿಸಿದರೆ ತಪ್ಪೇನೂ ಇಲ್ಲ. ಇದರ ಬಗ್ಗೆಯೂ ಗಮನವಿಟ್ಟುಕೊಳ್ಳೋಣ. ನಮ್ಮ ಯೋಧಬಲ ಸರಿಯಾಗಿ ಸಮರ್ಥವಾಗಿ ಹೋರಾಡುವುದು ಮುಖ್ಯ. ಬೆಳಗವತ್ತಿಯ ಯುದ್ಧವನ್ನು ನೆನಪಿಸಿಕೊಳ್ಳಬಹುದಲ್ಲ.

ತೈಲಪ : ಆಯಿತು. ಇಷ್ಟೆಲ್ಲ ಚರ್ಚೆಯಾಯಿತಲ್ಲ. ಈ ಹಿನ್ನೆಲೆಯಲ್ಲಿ ನೀವು ದಂಡನಾಥರುಗಳು ಕಲೆತು ಆದಷ್ಟು ಬೇಗ ಜಯಭೇರಿ ಮೊಳಗಿಸುವಂತಹ ರೀತಿಯಲ್ಲಿ ಮುಂದಡಿ ಇಡುವಂತೆ ಮಾಡಿ.

ಮಲ್ಲಪ : ಈ ಸಲದ ಯುದ್ಧದಲ್ಲಿಯೂ ಜಯ ನಮ್ಮದೇ. ಸನ್ನಿಧಾನ ನಿಶ್ಚಿಂತೆಯಿಂದ ಇರಬಹುದು.

ತೈಲಪ : ಯುದ್ಧ ಇಂದಲ್ಲ ನಾಳೆ ಅನಿವಾರ್ಯವೆಂಬುದಂತೂ ಖಚಿತವಾಯಿತಲ್ಲ. ಈಗ ನಮ್ಮಲ್ಲಿ ಯಾರು ಯಾರು ಯಾವ ಜವಾಬ್ದಾರಿಗಳನ್ನು ಹಂಚಿಕೊಳ್ಳಬೇಕೆಂಬುದು ತೀರ್ಮಾನವಾದರೆ ಒಳ್ಳೆಯದೆಂದು ನನ್ನ ಭಾವನೆ.

ಮಲ್ಲಪ : ಸನ್ನಿಧಾನವೇ ನಮ್ಮ ನಮ್ಮ ಕೆಲಸಗಳನ್ನು ನಿರ್ಧರಿಸಿದರೆ ಸೂಕ್ತವೆನಿಸುತ್ತದೆ.

ಅಣ್ಣಿಗ : ಪಂಡಿಗರೇ, ಪಂಡಿಗರೇ ನಾವು ಈಗ ಗಿರ್‍ನಾನದಿಯನ್ನು ದಾಟದರೆ, ನೇರಯುದ್ಧ ಮಾಡಬೇಕಾಗುತ್ತದೆ. ನಮ್ಮ ಹಂಚಿಕೆಯಂತೆ ಒಂದು ಸಮಯ ಅವರು ನದಿಯ ಬಡಗದಲ್ಲಿ ಶಿಬಿರ ಹೂಡಿ, ಮುಂದಿನ ಹೆಜ್ಜೆಯ ಸಲುವಾಗಿ, ಅಕ್ಕಪಕ್ಕ ಪರಿವೀಕ್ಷಣೆ ನಡೆಸಬಹುದು. ಆದ್ದರಿಂದ ನಾವೂ ಹೀಗೇಕೆ ಮಾಡಬಾರದು?

ಪಂಡಿಗ : ಹೇಗೆಂದು ಹೇಳು ಅಣ್ಣಿಗ. ನಿನ್ನ ಅಭಿಪ್ರಾಯಗಳು ಏನಿವೆಯೋ ಬೇಗ ಹೇಳು. ಕಾಲವಿಳಂಬಕ್ಕೆ ಅವಕಾಶವಿಲ್ಲ.

ಅಣ್ಣಿಗ : ನಮ್ಮ ಒಂದೆರಡು ಘಟಕಗಳನ್ನು ಅವರ ಮೇಲೇರಿ ಹೋಗುವಂತೆ ಕಳಿಸಿ, ಶತ್ರುಸೈನ್ಯವನ್ನು ಅಡ್ಡದಾರಿಗೆ ಎಳೆಯುವ ಕೆಲಸವನ್ನೇಕೆ ಮಾಡಬಾರದು?

ಪಂಡಿಗ : ಅಡ್ಡದಾರಿ ಎಂದರೆ?

ಅಣ್ಣಿಗ : ಯುದ್ಧ ಆರಂಭಿಸಿ, ಕಿರುಕುಳ ಯುದ್ಧ ಮಾಡುತ್ತಾ, ಆ ಎರಡು ಘಟಕಗಳು ಒಟ್ಟಿಗೆ ಅವರ ಮೇಲೇರುವಂತೆ ಮಾಡಿ, ಅವರಿಂದ ಸಾಕಷ್ಟು ನಷ್ಟ ಅನುಭವಿಸಿ ಹಿಮ್ಮೆಟ್ಟುವವರಂತೆ, ಗೋದಾವರಿಯ ಕಡೆಗೆ ನಮ್ಮ ಪಲಾಯನವಾಗುತ್ತಿದೆ ಎಂಬ ಭ್ರಮೆ ಹುಟ್ಟಿಸಿ, ಅವರು ಸುಸೂತ್ರವಾಗಿ ಗೋದಾವರಿ ದಾಟ ಬರುವಂತೆ ಮಾಡಿ, ನಂತರ ಹಠಾತ್ತಾಗಿ ಉಳಿದ ಸೈನ್ಯದೊಂದಿಗೆ ಅವರನ್ನು ಸುತ್ತುಗಟ್ಟಿದರೆ ಹೇಗೆ?

ಪಂಡಿಗ : ಆಲೋಚನೆಯೇನೋ ಸಾಧುವಾಗಿದೆ. ಆದರೆ ಉಳಿದವರೊಂದಿಗೂ ಚರ್ಚೆ ಮಾಡಿ ನಿಶ್ಚಯಿಸೋಣ. ಆಮೇಲೆ ಇನ್ನೊಂದು ವಿಷಯದಲ್ಲಿ ನಾವು ಬಹಳ ಎಚ್ಚರಿಕೆಯಿಂದ ಇರಬೇಕಾದೀತು.

ಅಣ್ಣಿಗ : ಹೇಳಿ ಪಂಡಿಗರೇ ನೀವು ಏನನ್ನು ಆದೇಶಿಸಿದರೆ ಅದನ್ನು ಶಿರಸಾವಹಿಸಿ ಮಾಡುತ್ತೇನೆ.

ಪಂಡಿಗ : ಅಣ್ಣಿಗ ಪ್ರಭುಗಳ ರಕ್ಷಣೆಯು ನಿನ್ನ ಮೇಲಿದೆ. ಒಮ್ಮೆ ನೀನು ಅವರ ಪ್ರಾಣರಕ್ಷಣೆ ಮಾಡಿ ನಿನ್ನ ಅದ್ಭುತ ಸಾಹಸ, ನಿಷ್ಠೆಗಳನ್ನು ತೋರಿಸಿಕೊಂಡೆ. ಅದಕ್ಕೇ ನಾವು ಪ್ರಭುಗಳ ರಕ್ಷಣೆಯ ಹೊಣೆಯನ್ನು ನಿನ್ನ ಮೇಲೆ ಹೆಚ್ಚಾಗಿ ಹಾಕಿದ್ದೇವೆ.

ಅಣ್ಣಿಗ : ಪ್ರಾಣವನ್ನೇನೋ ರಕ್ಷಿಸಿದೆ. ಆದರೆ ಅದು ಆಕಸ್ಮಿಕ. ಮತ್ತೊಮ್ಮೆ ಅಂತಹ ಅಚಾತುರ್ಯಕ್ಕೆ ಎಡೆಯಾಗಬಾರದು. ಪ್ರಭುಗಳ ಪ್ರಾಣಕ್ಕೆ ಎರಗಿದ ಆ ನೀಚ ಹದ್ದು ಯಾರೆಂದು ತಿಳಿಯಲಿಲ್ಲ. ಅದೇ ನನಗೆ ಚಿಂತೆ.

ಪಂಡಿಗ : ಅವನಾರೆಂದು ಗುರುತಾಗಲಿಲ್ಲವೇ?

ಅಣ್ಣಿಗ : ಇಲ್ಲ ಪಂಡಿಗರೇ, ಅವನು ನನ್ನ ಕೈಗೆ ಸಿಕ್ಕಿದ್ದರೆ ಆ ನೀಚನನ್ನು ಮುಗಿಸಿಬಿಡುತ್ತಿದ್ದೆ. ನಾನು ನನ್ನ ಕುದುರೆಯನ್ನು ನಾಗ ನೆಗೆತಕ್ಕೆ ಚಾಲನೆ ಕೊಟ್ಟರು. ಛೇ!! ಅವನನ್ನು ಹಿಡಿಯದಾದೆ. ನನ್ನ ತೋಮರದ ಗುರಿ ತಪ್ಪಿತು. ಅವನು ಪಾರಾದ; ಕುದುರೆಯ ಜಠರಕ್ಕೆ ತೋಮರ ನುಗ್ಗಿತು.

ಪಂಡಿಗ : ಅದೆಲ್ಲ ಸರಿ. ಈಗ ಚಕ್ರವರ್ತಿಗೆ ನೀನು ಭದ್ರ ಕೋಟೆಯಾಗಿರಬೇಕು.

ಅಣ್ಣಿಗ : ಅವನು ಮತ್ತೆ ಕಾಣಿಸಿಕೊಂಡರೆ ಮಾತ್ರ ನಾನು ನನ್ನ ಸ್ಥಳ ಬಿಟ್ಟು ಕದಲುತ್ತೇನೆ. ಇಲ್ಲವಾದಲ್ಲಿ ಪ್ರಭುಗಳ ವಿಚಾರದಲ್ಲಿ ನೀವು ಹಾಕಿದ ಗೆರೆ ದಾಟುವುದಿಲ್ಲ.

ಪಂಡಿಗ : ಅಣ್ಣಿಗ ನೀನು ತೋಮರ ಎಸೆಯುತ್ತಿದ್ದಂತೆ ಮಿಂಚಿನಂತೆ ಅವನ ಕಡೆಯವರು ಯಾರೋ ನಾಲ್ಕು ಮಂದಿ ಬಂದು ಅವನನ್ನು ಎತ್ತಿಕೊಂಡು ಹೋದರೆಂದು ಹೇಳಿದೆಯಲ್ಲವೇ?

ಅಣ್ಣಿಗ : ಹೌದು.

ಪಂಡಿಗ : ಅಂದರೆ ನನ್ನ ಅನುಮಾನ ಸರಿಯೇನೋ ಎನಿಸುತ್ತಿದೆ.

ಅಣ್ಣಿಗ : ಏನದು ನಿಮ್ಮ ಅನುಮಾನ?

ಪಂಡಿಗ : ಆ ವ್ಯಕ್ತಿ ಅಂದರೆ ಚಕ್ರವರ್ತಿಗಳ ಮೇಲೆ ಆಕ್ರಮಣ ಮಾಡಿದವನು ಯಾರೋ ಸಾಮಾನ್ಯ ಯೋಧನೋ, ಅಧಿಕಾರಿಯೋ ಆಗಿರಲಾರ. ಅವನೇ ಪರಮಾರ ದೊರೆ ಮುಂಜನಿರಬೇಕು ಎನಿಸಿದೆ.

ಅಣ್ಣಿಗ : ಓಹ್ ಮುಂಜನೇ! ದೊರೆಯಾದವನು ಹೀಗೆ ಹೇಡಿಯಂತೆ ಹಿಂದಿನಿಂದ ಆಕ್ರಮಿಸಬಹುದೆ.

ಪಂಡಿಗ : ಸ್ವಾರ್ಥ, ಪ್ರತಿಷ್ಠೆಗಳೇ ಮುಖ್ಯವೆನಿಸಿದಾಗ ಎಂತಹ ನೈಚ್ಯಕ್ಕೂ ಜನ ಹೇಸುವುದಿಲ್ಲ.

ತೈಲಪ : ಮಲ್ಲಪರೇ ಕೇಶಿದಂಡನಾಥರ ಪರಿಸ್ಥಿತಿ ಹೇಗಿದೆ ಪ್ರಾಣಾಪಾಯ ಇಲ್ಲ ತಾನೇ?

ಮಲ್ಲಪ : ಪ್ರಾಣಾಪಾಯ ಇದೆಯೋ ಇಲ್ಲವೋ ದಂಡನಾಥರಿಗೆ ಮಾತ್ರ ತೀವ್ರ ಗಾಯಗಳಾಗಿದೆ. ಸದ್ಯದಲ್ಲಿ ಚೇತರಿಸಿಕೊಳ್ಳುವುದು ಕಷ್ಟವೇ.

ತೈಲಪ : ನಾವೆಷ್ಟೊಂದು ಎಚ್ಚರಿಕೆಯಿಂದ ನಮ್ಮ ಯುದ್ಧದ ಕಾರ್ಯಾಚರಣೆ ಆರಂಭಿಸಿದೆವು. ಆದರೂ ಪರಮಾರರಿಂದ ನಮಗೆ ಸಂಭವಿಸುತ್ತಿರುವ ನಷ್ಟದ ಬಗ್ಗೆ ಬಹಳ ಗಾಭರಿಯಾಗಿದೆ.

ಮಲ್ಲಪ : ನಾವು ಸಂಗ್ರಹಿಸಿದ ಸುದ್ದಿಯ ಮೇರೆಗೆ ಇರಬಹುದಾದ ಸೈನ್ಯಬಲಕ್ಕಿಂತ ಹೆಚ್ಚಾಗಿಯೇ ಇದೆ ಎಂಬುದು ಸನ್ನಿಧಾನದ ಅರಿವಿಗೂ ಬಂದಿರಬೇಕು.

ತೈಲಪ : ಹೌದು. ಯುದ್ಧ ಹೀಗೆ ಜಯಾಪಜಯಗಳ ತೀರ್ಮಾನವಿಲ್ಲದೆ ಮುಂದುವರೆದರೆ ನಮ್ಮ ಸ್ಥಿತಿಯೇನು?

ಮಲ್ಲಪ : ಚಾಲುಕ್ಯರ ಗುರಿ ಮುಟ್ಟಿಸುವಲ್ಲಿ ನಾವೆಲ್ಲರೂ ಮತ್ತೊಮ್ಮೆ ಸಾಧ್ಯಾ ಸಾಧ್ಯತೆಗಳ ಬಗ್ಗೆ ಚಿಂತೆ ಮಾಡಬೇಕು. ಪರಮಾರ ಮುಂಜನನ್ನು ತಲೆ ಎತ್ತದಂತೆ ಮುಗಿಸಿ ಬಿಡಬೇಕು.

ತೈಲಪ : ನಮ್ಮ ಕೇಶಿದಂಡನಾಥರಂತಹವರೇ ಹೀಗೆ ಅಪಾಯಕ್ಕೆ ಒಳಗಾದದ್ದು ಬಹಳ ಕಳವಳಕಾರಿಯಾಗಿದೆ.....ಅವರಿದ್ದಿದ್ದರೆ ಈ ಸಮಯದಲ್ಲಿ ನಮಗಿನ್ನಷ್ಟು ಬಲ ಬರುತ್ತಿತ್ತು.

ಮಲ್ಲಪ : ಸನ್ನಿಧಾನದ ಮನಸ್ಸಿನ ಚಿಂತೆಯನ್ನು ಪರಿಸ್ಥಿತಿಯ ಅಸಹಾಯಕತೆಯನ್ನೂ ಅರ್ಥ ಮಾಡಿಕೊಳ್ಳಬಲ್ಲೆ. ಅದಕ್ಕೇ ರಾಜಧಾನಿಗೇ ಒಂದಿಬ್ಬರು ಅಶ್ವಾರೋಹಿಗಳನ್ನಟ್ಟಿ ನೀಲಕಂಠ ಪಂಡಿತರಿಗೆ ಹೇಳಿ ಕಳಿಸಿದ್ದೇನೆ. ಅವರು ಬಂದು ಚಿಕಿತ್ಸೆ ನೀಡಿದಲ್ಲಿ ಬೇಗ ಗುಣಮುಖರಾಗಬಹುದು ಎಂಬುದು ನನ್ನ ಭಾವನೆ.

ತೈಲಪ : ಅಷ್ಟಾದರೆ ಸಾಕು. ...............ಈಗ ತುರ್ತಾಗಿ!

ಪಂಡಿಗ : ಪ್ರಭು ಶತ್ರುಗಳನ್ನು ಒಂದು ಇಕ್ಕಟ್ಟಿಗೆ ಸಿಲುಕಿಸಿ ಯುದ್ಧ ಮಾಡಿದರೆ ಒಳಿತೆನಿಸುತ್ತದೆ ಅವರಿಗೆ ಗೊತ್ತಿಲ್ಲದಂತೆ ನಮ್ಮ ಸೈನ್ಯದ ಒಂದು ಭಾಗವನ್ನು ಗೋದಾವರಿ ದಾಟಿಸಿ ಮರೆಯಾಗಿಸಿರಿ. ಶತ್ರು ಸೈನ್ಯ ಮುಂದಡಿ ಇಟ್ಟ ಮೇಲೆ ಹಿಂದಿನಿಂದ ದಾಳಿ ಮಾಡುವುದು ಸೂಕ್ತ. ನಮ್ಮ ಮುಖ್ಯ ಬೇಹುಗಾರನಿಂದ ಶತ್ರು ಪಾಳೆಯದ ಸಮಾಚಾರ ಬಂದಿದೆ.

ಕನ್ನಯ್ಯ : ಪರಮಾರರು ತಮ್ಮ ಸೈನ್ಯದ ಪ್ರಮುಖ ಭಾಗವನ್ನು ನಮ್ಮರಿಪಿಗೆ ಬಾರದಂತೆ ಗೋದಾವರಿ ದಾಟಿಸಿ, ಪೂರ್ವದಿಶೆಯಿಂದ ನಮ್ಮ

ಬೆನ್ನ ಹಿಂದೆ ದಾಳಿ ಮಾಡುವುದೆಂದೂ, ಪರಮಾರ ದೊರೆ ಸಂಚಿಕಷ್ಟ ಸೈನ್ಯದೊಂದಿಗೆ, ಧಾರಾ ನಗರದ ಕಡೆ ಪಲಾಯನ ಮಾಡುವುದೆಂದೂ ಯೋಚನೆ ನಡೆದಿದೆ. ನಮ್ಮ ಸೈನ್ಯಗಳ ದಾಳಿಗಳಿಗೆ ಸಾಕಷ್ಟು ತತ್ತರಿಸಿದಂತೆ ಕಾಣುತ್ತದೆ.

**ಮಲ್ಲಪ** : ಹಾಗಾದರೆ ಈ ಕೂಡಲೇ ಅಮ್ಮುಗಿಯವರ ನೇತೃತ್ವದಲ್ಲಿ ಅಣ್ಣಿಗನ ಜೊತೆಯಾಗಿ ಪರಮಾರ ಮುಂಜನ ಮಾರ್ಗವನ್ನು ತಡೆಗಟ್ಟಲಿ.

**ತೈಲಪ** : ನಿಮ್ಮೆಲ್ಲರಿಗೂ ಇದು ಒಪ್ಪಿಗೆಯಾದರೆ ಹಾಗೆಯೇ ಮಾಡೋಣ. ಇಷ್ಟರಲ್ಲೇ ಆ ಮುಂಜನನ್ನು ಹಿಡಿಯಲೇಬೇಕು. ನಮ್ಮ ಶಕ್ತಿ, ಸಾಮರ್ಥ್ಯಗಳ ಅಗ್ನಿ ಪರೀಕ್ಷೆಯಾಗಿದೆ ಈ ಯುದ್ಧ.

**ತೈಲಪ** : ಅಣ್ಣಿಗನ ಆಸೆ ಕೈಗೂಡಲು ಬಹಳ ದಿನ ಬೇಕಿಲ್ಲ.

**ಭಟ** : (ಪ್ರವೇಶಿಸಿ) ಸನ್ನಿಧಾನಕ್ಕೆ ಜಯವಾಗಲಿ.

**ತೈಲಪ** : ಏನದು? ಮನ್ತಣ ಸಮಯದಲ್ಲಿ ಬಂದುದರ ಕಾರಣ?

**ಭಟ** : ಪ್ರಭು ಸಂತೋಷದ ಸುದ್ದಿ. ಪರಮಾರ ಸೈನ್ಯ ನದಿ ದಾಟುವ ಕೆಲಸದಲ್ಲಿ ತೊಡಗಿದ್ದಾಗ ನಮ್ಮ ಸೈನ್ಯದ ಭಾಗವೊಂದು ಅವರ ಮೇಲೆ ಮಿಂಚಿನಂತೆ ಎರಗಿ ಗೆಲುವನ್ನು ಸಾಧಿಸಿದ್ದಾರೆ. ನಮ್ಮ ಸೈನ್ಯದ ಹೊಡೆತಕ್ಕೆ ದಿಕ್ಕು ತೋಚದೆ ಉಳಿದ ಸೈನ್ಯವೆಲ್ಲ ದಿಕ್ಕಾಪಾಲಾಗಿದೆ. ಪಲಾಯನ ಮಾಡುತ್ತಿದ್ದ ಒಂದು ಸೈನ್ಯ ಘಟಕದ ಜೊತೆ ಮುಂಜ ದೊರೆಗಳು ಇದ್ದಾರೆಂಬ ವದಂತಿಯಿದೆ.

**ಅಮ್ಮುಗಿ** : ಅಂತಾದರೆ ನಾನು ಈ ಕೂಡಲೇ ಅವರು ಪಲಾಯನ ಮಾಡುತ್ತಿರುವ ಮಾರ್ಗವನ್ನು ಬೇರೆ ದಾರಿಯಿಂದ ಸಾಗಿ ಅಡ್ಡಗಟ್ಟುತ್ತೇನೆ.

**ಅಣ್ಣಿಗ** : ಅಮ್ಮುಗಿಯವರೇ ನಾನೂ ನಿಮ್ಮ ಜೊತರೆಗೇ ಬರುತ್ತೇನೆ. ಆ ಪರಮಾರ ಮುಂಜನನ್ನು ಸಾಧ್ಯವಾದರೆ ನಾನು ಗುರುತಿಸಬಲ್ಲೆ.

**ಅಮ್ಮುಗಿ** : ಪ್ರಭುಗಳು ನಮಗೆ ಅಪ್ಪಣೆ ಕೊಡಿಸಬೇಕು.

**ತೈಲಪ** : ವಿಜಯಶಾಲಿಗಳಾಗಿ ಬನ್ನಿ ಅಮ್ಮುಗಿಯವರೇ. ಇನ್ನು ನಾವು ಅಂದುಕೊಂಡಂತೆ ನಮ್ಮ ನಮ್ಮ ಸೈನ್ಯಗಳೊಂದಿಗೆ ಆಯಕಟ್ಟಿನ ಸ್ಥಳಗಳಲ್ಲಿ ಕಾದಿರೋಣ.

[ಗುಜು ಗುಜು ಅಶ್ವಾರೋಹಿಗಳ ಸದ್ದು. ಯುದ್ಧದ ಸದ್ದು ಕೇಳಿಸಬೇಕು. ಮೌನ................ಅದೋ ಅದೋ ಅಮ್ಮುಗಿಯವರೇ ಅವನೇ................ಅವನೇ ಪರಮಾರ ದೊರೆ ಮುಂಜ. ಹಿಡಿಯಿರಿ................ಹಿಡಿಯಿರಿ ತಪ್ಪಿಸಿಕೊಳ್ಳುವುದಕ್ಕೆ ಬಿಡಬೇಡಿ ಎಂಬ ಮಾತುಗಳು]

ಮುಂಜ : ಓ ನೀನಾ ಅದೇ ಪಡೆವಳ ತೈಲ?

ಅಣ್ಣಿಗ : ಹೌದು ನಾನೇ ಪಡೆವಳ ತೈಲ. ನೀವು ಯಾರೆಂದು ಆಗ ಬಾಯಿ ಬಿಡದಿದ್ದರೂ ಯಾರೆಂದು ನಮಗೆ ಗೊತ್ತು.

ಮುಂಜ : ಗೊತ್ತಾದರೇನು. ನಾನು ಯಾವುದಕ್ಕೂ ಹೆದರುವುದಿಲ್ಲ.

ಅಣ್ಣಿಗ : ನೀವು ಹೆದರುವುದೂ ಇಲ್ಲ, ಹೇಸುವುದೂ ಇಲ್ಲ. ಅದು ನಮಗೂ ಗೊತ್ತು.

ಮುಂಜ : ಏ ಹುಡುಗ ನೀನು ಯಾರೆಂದು ಸರಿಯಾಗಿ ಪರಿಚಯವಿಲ್ಲ. ಆದರೆ ತಲೆ ಹಿಡುಕನಂತೆ ಮಾತಾಡುತ್ತೀ?

ಅಣ್ಣಿಗ : ತಲೆ ತಿರುಕತನದ ಸಂಸ್ಕಾರ ನಮ್ಮ ಚಕ್ರವರ್ತಿಗಳ ರಾಜ್ಯದಲ್ಲಿ ಯಾರಿಗೂ ಇಲ್ಲ.

ಅಮ್ಮುಗಿ : ಅಣ್ಣಿಗ ಅವನೊಂದಿಗೇನು ಮಾತು?.............ಈಗ ಹೇಳು. ಈತನನ್ನು ಏನು ಮಾಡೋಣ?

ಅಣ್ಣಿಗ : ಇಲ್ಲಿನ ನಮ್ಮ ಪಾಳೆಯಕ್ಕೆ ಭದ್ರ ಕಾವಲಿನಲ್ಲಿ ಕರೆದುಕೊಂಡು ಹೋಗೋಣ. ಚಕ್ರವರ್ತಿಗಳಿಗೆ ಮುಂಜನು ಸೆರೆಯಾಗಿರುವ ವಿಚಾರವಾಗಿ ಶೀಘ್ರಬೇಕು ಕಳಿಸೋಣ.

ತೈಲಪ : ಭಲಾ ಅಮ್ಮುಗಿಯವರೇ, ನಾವು ಮಾಡಬೇಕಾದ್ದನ್ನು ನೀವೇ ಮಾಡಿದಿರಿ. ಈ ಮಹತ್ವದ ಸಾಧನೆಯ ಶ್ರೇಯಸ್ಸು ನಿಮ್ಮಿಬ್ಬರದೇ!

ಅಮ್ಮುಗಿ : ಹಾಗೆನ್ನಬೇಡಿ. ಇದು ಚಾಲುಕ್ಯರ ಗೆಲುವು. ಈ ನಾಡಿನ ಗೆಲುವು. ಇನ್ನು ಪ್ರಭುಗಳು ಶತ್ರುವನ್ನು ಹೇಗೆ ನಡೆಸಿಕೊಳ್ಳುತ್ತೀರೋ ನಿಮಗೆ ಸೇರಿದ್ದು.

ತೈಲಪ : ಬಂಧಿತನಾಗಿರುವ ಮುಂಜ ನನ್ನ ಶತ್ರುವೇ ಇರಬಹುದು. ಆದರೆ ಸಿಂಹಾಸನವೇರಿ ರಾಜ್ಯಭಾರ ಮಾಡಿದ ರಾಜವಂಶೀಯ. ಆದ್ದರಿಂದ ಅವನ ಗೌರವಕ್ಕೆ ಚ್ಯುತಿ ಬಾರದಂತೆ ನಡೆದುಕೊಳ್ಳಿ.

ಅಣ್ಣಿಗ : ಸನ್ನಿಧಾನಕ್ಕೆ ನನ್ನ ಮೇಲೆ ಇರುವ ಭರವಸೆ ನಂಬಿಕೆಗಳಿಗೆ ನಾನು ಕೃತಜ್ಞ. ಈ ದೇಹ, ಈ ಜೀವ ನಿಮ್ಮ ಸೇವೆಗೆ.

ತೈಲಪ : ಪ್ರತಿಸಲವೂ ನೀನು ನಿನ್ನ ನಡೆ ನುಡಿಯಿಂದ ನಮ್ಮನ್ನು ಮೂಕ ವಿಸ್ಮಿತನನ್ನಾಗಿ ಮಾಡಿ ಬಿಡುತ್ತಿರುವೆ ಅಣ್ಣಿಗ. ನನಗೆ ಇಬ್ಬರು ಮಕ್ಕಳಲ್ಲ. ಮೂವರು. ಸತ್ಯಾಶ್ರಯ. ದಶವರ್ಮರೊಟ್ಟಿಗೆ ನೀನೂ ನನ್ನ ಮಗನೇ.

ಅಣ್ಣಿಗ : ಧನ್ಯ ಪ್ರಭುಗಳೇ ಧನ್ಯ.

## ದೃಶ್ಯ - ೧೨

**ಕಾಳಲದೇವಿ** : ನಿಜವಾಗಿಯೂ ತೈಲಪ ಚಕ್ರವರ್ತಿಗಳು ಪರಾಕ್ರಮಿಗಳು. ಕೊನೆಗೂ ಮುಂಜರನ್ನು ಸೆರೆ ಹಿಡಿದು ದೊಡ್ಡ ದಿಗ್ವಿಜಯವನ್ನೇ ಸಾಧಿಸಿದರು...

**ಚಟ್ಟಯ್ಯ** : ವಿಜಯೋತ್ಸವ ಸಮಾರಂಭ ಪೂರ್ತಿಯಾಗಿ ಮುಗಿಯಬೇಕು. ಆನಂತರವೇ ವಿಚಾರಣೆಯ ಮಾತು. ಸದ್ಯಕ್ಕೆ ಮುಂಜರು ಅತಿಥಿ ಗೃಹದಲ್ಲಿ ಬಂಧನದಲ್ಲಿದ್ದಾರೆ. ರಕ್ಷಣೆಗೆ ಅಣ್ಣಿಗದೇವರಿದ್ದಾರೆ. ಆದರೆ ಅವರ ನಡೆ-ನುಡಿ ಪ್ರತಿಭೆ, ಮಾತುಗಾರಿಕೆ ನನ್ನನ್ನು ನಡೆಸಿಕೊಳ್ಳುವ ರೀತಿಯನ್ನು ನೋಡಿದರೆ ವ್ಯಕ್ತಿ ಬಹಳ ಒಳ್ಳೆಯವರೆನಿಸುತ್ತದೆ.

**ಕಾಳಲೇವಿ** : ಅವರೊಂದಿಗೆ ವ್ಯವಹರಿಸುವಾಗ ಎಚ್ಚರಿಕೆಯಿಂದಿರಿ.

**ಚಟ್ಟಯ್ಯ** : ಪ್ರಜೆಗಳು ಸೈನ್ಯ ಪಡೆಯುವರು ವಿಜಯೋತ್ಸವದ ಮತ್ತಿನಲ್ಲಿ ಇರುವುದಲ್ಲದೆ, ಪರಮಾರಯುದ್ಧದಲ್ಲಿ ಸಾಕಷ್ಟು ಸೈನ್ಯವನ್ನು ಕಳೆದುಕೊಂಡು ಅಸಹಾಯಕರಾಗಿ ಇರುತ್ತಾರೆಂಬ ತಪ್ಪು ಲೆಕ್ಕಾಚಾರದಿಂದ, ಚಾಲುಕ್ಯರ ಹೆಸರು ಎತ್ತಿದರೇ ನಡುಗುತ್ತಿದ್ದ ಚೋಳರು, ಶಿಲಹಾರರು ಚಿಗುರಿಕೊಂಡು ದಾಳಿಯ ಪ್ರಯತ್ನ ನಡೆಸಿದ್ದಾರೆ.

**ಕಾಳಲ** : ಅಯ್ಯೋ ಹಾಗಾದರೆ ಮುಂದೆ?

**ಚಟ್ಟಯ್ಯ** : ಬೇಹಿನ ಮೂಲಕ ಅವರ ಆಕ್ರಮಣದ ಸೂಚನೆ ದೊರೆತದ್ದರಿಂದ ನಮ್ಮ ಸೈನ್ಯಗಳು ಎರಡು ತುಕಡಿಗಳಾಗಿ ಒಂದು ಸತ್ಯಾಶ್ರಯನ ನೇತೃತ್ವದಲ್ಲಿ ಮತ್ತೊಂದು ಸ್ವತಃ ತೈಲಪರ ನೇತೃತ್ವದಲ್ಲಿ ಸಾಗಿವೆ.

**ಕಾಳಲ** : ಇದೇನು ವಿಪರೀತಕ್ಕೆ ಇಟ್ಟುಕೊಂಡಿದೆ. ವಿಜಯೋತ್ಸವ ಸಂಭ್ರಮ ಒಂದು ಕಡೆಗಾದರೆ ಶತ್ರು ಬಾಧೆ ಮತ್ತೊಂದು ಕಡೆಗೆ.

ಚಟ್ಟಯ್ಯ : ರಾಜರಿಗೆ, ರಾಜಮನೆತನಗಳಿಗೆ ಯುದ್ಧ, ಸೋಲು, ಗೆಲುವು, ಮಿತ್ರರು, ಶತ್ರುಗಳು - ಎನ್ನುವುದು ಸಾಮಾನ್ಯವೇ, ಶಾಶ್ವತ ಶತ್ರುಗಳಾಗಲೀ, ಶಾಶ್ವತ ಮಿತ್ರರಾಗಲಿ ಇಂತಹವರಿಗೆ ಇರುವುದು ಸಾಧ್ಯವೇ ಇಲ್ಲ.

ಕಾಳಲದೇವಿ : ನೀವೂ ತೈಲಪ ಚಕ್ರವರ್ತಿಗಳ ಜೊತೆ ಯುದ್ಧಕ್ಕೆ ಹೊರಡಬೇಕೆಂದಿರುವಿರೇನು?

ಚಟ್ಟಯ್ಯ : ಇಲ್ಲ. ಇಲ್ಲಿ ಪರಮಾರ ದೊರೆಗಳನ್ನು ಕಾದುಕೊಳ್ಳಬೇಕಿದೆ. ನೀನು ಭಾವಿಸಿರುವಂತೆ ಮುಂಜರು ಮಹಾ ವಿದ್ವಾಂಸರು. ಅವರು ಮಾತನಾಡುತ್ತಿದ್ದರೆ ಮೂಕ ವಿಸ್ಮಿತನಾಗಿ ನಿಂತು ಬಿಡುತ್ತೇನೆ.

ಚಟ್ಟಯ್ಯ : ಅವರ ಸಮಯ ನೋಡಿ. ನೀನೂ ವಿನಯಾ ಇಬ್ಬರೂ ಒಮ್ಮೆ ಹೋಗಿ ಬನ್ನಿ. ಆದರೆ ಅರಮನೆಯಲ್ಲಿ ನೀವು ಸಲುಗೆಯಿಂದ ಹೋಗಿಬರುವುದು ಯಾರಿಗೂ ತಿಳಿಯಬಾರದು. ಅಣ್ಣಿಗನಂತೂ ಮೈಯೆಲ್ಲ ಕಣ್ಣಾಗಿ ಅವರ ಮೇಲೆ ಕಣ್ಣಿಟ್ಟಿರುವನು.

ಚಟ್ಟಯ್ಯ : ಹೇಗೂ ಅಳಿಯಂದಿರು ತೈಲಪರ ಜೊತೆಗೆ ಕೊಂಕಣದ ಯುದ್ಧಕ್ಕೆ ಹೊರಟಿದ್ದಾರೆ. ನೀನೂ ವಿನಯಾ ಇಂದೇ ಹೋಗಿ ಮಾತನಾಡಿಸಿಕೊಂಡು ಬನ್ನಿ.

ಕಾಳಲ : ಅವರು ಹೊರಡುವುದು ಯಾವಾಗ?

ಚಟ್ಟಯ್ಯ : ನೆನ್ನೆಯೇ ಬ್ರಾಹ್ಮೀ ಮುಹೂರ್ತದಲ್ಲಿ ಸೈನ್ಯಗಳು ರಾಜಧಾನಿಯಿಂದ ಹೊರಟಿವೆ.... ನಾನಿನ್ನು ಬರುತ್ತೇನೆ ಮುಂಜರನ್ನು ವಿಚಾರಿಸಿಕೊಂಡು ಅರಮನೆಯ ಕಡೆ ಹೊರಡುತ್ತೇನೆ.

– – ವಿರಾಮ – –

ಮುಂಜ : (ಸ್ವಗತ) ಬೋನಿನಲ್ಲಿ ಬಂಧಿಯಾದ ಸಿಂಹದ ಸ್ಥಿತಿಯಾಗಿದೆ ನನ್ನದು. ತೈಲಪರ ಕೈವಶವಾಗಿ ನನ್ನೆಲ್ಲ ಗೌರವ ಪ್ರತಿಷ್ಠೆಗಳು ಮಣ್ಣು ಪಾಲಾದವು... ಹೇಗಾದರೂ ನಾನು ಇಲ್ಲಿಂದ ಪಾರಾಗುವ ತಂತ್ರವನ್ನು ಯೋಚಿಸಲೇಬೇಕು. ಯೋಚಿಸುತ್ತ ಸುಮ್ಮನೆ ಕೈಕಟ್ಟಿ ಕುಳಿತುಕೊಳ್ಳಬಾರದು. ಏನಾದರೂ ಉಪಾಯ ಮಾಡಲೇಬೇಕು. ತೈಲಪನಿಗೆ ಮಣ್ಣು ಮುಕ್ಕಿಸದೆ ನನಗೆ ನೆಮ್ಮದಿ ಇರಲಾಗದು. ಎಲ್ಲರ ಎದೆಗಳಲ್ಲಿ ಭಯಹುಟ್ಟಿಸುತ್ತಿದ್ದ ನಾನು ಭಯಗೊಂಡು ಹೀಗೆ ಉಳಿಯಬೇಕೇ? ಇಲ್ಲ.... ಇಲ್ಲ.... ಖಂಡಿತ ಸಾಧ್ಯವಿಲ್ಲ..... (ನಿಟ್ಟುಸಿರು)

ಚಟ್ಟಯ್ಯ : (ಪ್ರವೇಶಿಸಿ) ಮುಂಜದೊರೆಗಳು ಆರಾಮವೇ?

ಮುಂಜ : (ಎಚ್ಚೆತ್ತು) ಓಹ್ ಬನ್ನಿ ಬನ್ನಿ.... ಕ್ಷಮಿಸಬೇಕು ನೀವು ಬಂದದ್ದು ತಿಳಿಯಲಿಲ್ಲ. ಪಸಾಯಿತರು ಇಲ್ಲಿಗೆ ಬರುವ ತೊಂದರೆ.....?

ಚಟ್ಟಯ್ಯ : ಇದರಲ್ಲಿ ತೊಂದರೆ ಏನಿದೆ? ತಮ್ಮ ಸೇವೆಯಲ್ಲಿದ್ದು ತಮ್ಮ ಸೌಕರ್ಯಗಳನ್ನು ಗಮನಿಸಬೇಕೆಂಬುದು ಚಕ್ರವರ್ತಿಗಳ ಆಜ್ಞೆಯಾಗಿದೆ.

ಮುಂಜ : ಈ ಅತಿಥಿಗೃಹದ ಬಂಧಿಯಾಗಿ ಬಾಳುತ್ತಿರುವುದು ನಮಗೆ ಭರಿಸಲಾಗದ ಬೇಸರ ತಂದಿದೆ. ಈ ಒಂಟಿತನದ ಹಿಂಸೆ. ನೋವುಗಳನ್ನು ನೀವು ಊಹಿಸಲಾರಿರಿ.

ಚಟ್ಟಯ್ಯ : ನೀವು ರಾಜಬಂದಿ. ಆದರೂ ಚಕ್ರವರ್ತಿಗಳು ನಿಮ್ಮನ್ನು ಕಾರಾಗೃಹದಲ್ಲಿ ಇರಿಸದೆ ಇಷ್ಟು ದೊಡ್ಡ ಅತಿಥಿ ಗೃಹದಲ್ಲಿ ಇರುವ ಅನುಕೂಲವನ್ನು ಕಲ್ಪಿಸಿದ್ದಾರೆ. ದಯವಿಟ್ಟು ನಮ್ಮನ್ನೇ ನಿಮ್ಮ ಸ್ನೇಹಿತರನ್ನಾಗಿ ತಿಳಿದುಕೊಳ್ಳಿ. ಸಾಧ್ಯವಾದಾಗಲೆಲ್ಲ ನಾನು, ನಮ್ಮ ಕುಟುಂಬದವರು ಬರುತ್ತಿರುತ್ತೇವೆ.

ಮುಂಜ : ನಿಮ್ಮ ಈ ಔದಾರ್ಯಕ್ಕೆ ನಾನು ಸಂತೋಷಿಸುತ್ತೇನೆ.

ವಿನಯಾ : (ಪ್ರವೇಶಿಸಿ) ನಮ್ಮ ತಾಯಿಯವರು ಬಂದಿರುವರೇ!

ಮುಂಜ : ಓ ವಿನಯಾವತಿಯವರು! ಅಲ್ಲಿಯೇ ದಯವಿಟ್ಟು ನೀವು ಸ್ವಲ್ಪ ಸಮಾಧಾನವಾಗಿ ಕುಳಿತುಕೊಂಡರೆ ನಿಮ್ಮಲ್ಲಿ ಒಂದೆರಡು ವಿಚಾರಗಳನ್ನು ಮಾತನಾಡಬೇಕೆಂದಿದ್ದೇನೆ.

ವಿನಯಾ : ಸರಿ ನಿಮಗೆ ಹೇಳಬೇಕೆಂದಿರುವುದನ್ನು ಬೇಗ ಹೇಳಿ ಮುಗಿಸಿ. ನನಗೆ ಹೋಗಬೇಕಿದೆ.

ಮುಂಜ : ವಿನಯಾವತಿಯವರೇ ನಾನಾಡುವ ಮಾತುಗಳು ಅಂತರಂಗ ಮಾತುಗಳು. ಯಾರಿಗೂ ತಿಳಿಯಬಾರದು. ಮುಖ್ಯವಾಗಿ ನಾನು ಮಾತನಾಡಲಿರುವುದು ನಿಮ್ಮ ಭವಿಷ್ಯಕ್ಕೆ ಸಂಬಂಧಿಸಿದ್ದು.

ವಿನಯಾ : ಏನು! ನನ್ನ ಭವಿಷ್ಯ ಕುರಿತು ನೀವು ಮಾತನಾಡುವಿರಾ?....

ಮುಂಜ : ವಿನಯಾವತಿಯವರೇ, ನೋಡಿ ನಾನು ಚಕ್ರವರ್ತಿಗಳ ಶತ್ರುವೇ ಇರಬಹುದು. ಆದರೆ ನಿಮ್ಮನ್ನು ನೋಡಿದಾಗಲೆಲ್ಲ ನನಗೆ ಬಹಳ ದುಃಖವಾಗುತ್ತದೆ. ನಿಮ್ಮ ಸ್ಥಿತಿಗೆ ಮರುಗುತ್ತಿದ್ದೇನೆ.

ವಿನಯಾ : ನಾನೇನೂ ನಿಮ್ಮ ಮಗಳಲ್ಲ; ಸೋದರಿಯಲ್ಲ ದಾಯಾದಿ ಅಲ್ಲ; ಕಡೆಗೆ ಏನೇನೂ ಅಲ್ಲ. ಆದರೂ ನನಗೆ ನೀವೇಕೆ ಮರುಗಬೇಕು? ಮರುಗುವಂತಹ ಸ್ಥಿತಿಗೆ ನಾನೇನೂ ಬಂದಿಲ್ಲವಲ್ಲ!

ಮುಂಜ : ಅದೇ ದುರದೃಷ್ಟವೆನ್ನುವುದು. ನಿಮ್ಮ ಸ್ಥಿತಿಯ ಬಗ್ಗೆ ನೀವು ಯೋಚಿಸದಿರುವುದೇ ದೊಡ್ಡ ದುರಂತ. ಮತ್ತು ವಿಷಾದದ ಸಂಗತಿ.

ವಿನಯಾ : ನನಗೇನೂ ಹಾಗೆನಿಸುತ್ತಿಲ್ಲ. ನಾನು ಸಂತೋಷವಾಗಿದ್ದೀನಿ.

ಮುಂಜ : ನಿಮಗೆ ನನ್ನ ಮಾತುಗಳ ಅಂತರ್ಯವೇ ಅರ್ಥವಾಗುತ್ತಿಲ್ಲ. ನೀವು ಸಂತೋಷವಾಗಿದ್ದೀರಿ. ಆದರೆ ನಾನು..... ನಾನು.... ನಿಮ್ಮ ಶ್ರೇಯೋಭಿಲಾಷಿ. ನಿಮಗೆ, ನಿಮ್ಮ ಕೈಹಿಡಿದವರಿಗೆ ಆಗಿರುವ ಅನ್ಯಾಯವನ್ನು ಕಂಡು ಉರಿಯುತ್ತಿದ್ದೇನೆ. ನಿಮ್ಮ ಮತ್ತು ಕೃಷ್ಣರ ವಿಚಾರ, ಕರ್ಕದೇವರ ಜೊತೆಗೆ ನಿಮ್ಮ ವಿಚಾರ ನಡೆದ ಮಾತುಕತೆ, ಕರ್ಕರ ಸಾವು. ಪಿತೂರಿ. ತೈಲಪರ ಸಿಂಹಾಸನ ಹರಣ ಎಲ್ಲವೂ ನನಗೆ ಗೊತ್ತಿದೆ.

ವಿನಯಾ : ನಿಮಗೆ ಗೊತ್ತಿದ್ದರೆ ಸಂತೋಷ. ಈಗ ನಮಗೆ ಲಭ್ಯವಾಗಿರುವುದಕ್ಕೆ ಸಂತೋಷಪಡುವುದಷ್ಟೇ ನಮ್ಮ ಭಾಗ್ಯ.

ಮುಂಜ : ನೋಡಿದಿರಾ. ನೀವು ಬೇಡವೆಂದರೂ ನಿಮ್ಮೆದೆಯಾಳದ ನೋವು ಹೇಗೆ ಹರಿದು ಬಂತು!..... ನಿಮ್ಮ ಪರಿಸ್ಥಿತಿಯಿಂದಾಗಿ ನಾವೇ ಉರಿಯುವಂತಾದರೆ ನಿಮಗೆ ಹೇಗೆನಿಸಿರಬಹುದು.

ವಿನಯಾ : ಅದೆಲ್ಲವನ್ನು ಈಗ ಮಾತಾಡಿ ಪ್ರಯೋಜನವೇನು?

ಮುಂಜ : ದಯವಿಟ್ಟು ಹೇಳಿ ನ್ಯಾಯವಾಗಿ ಈ ರಾಜ್ಯದ ಹಕ್ಕುದಾರ ಯಾರಾಗಬೇಕು?

ವಿನಯಾ : ನನಗೆ ತಿಳಿದಿಲ್ಲ.

ಮುಂಜ : ನಿಮ್ಮನ್ನು ನೀವೇ ವಂಚಿಸಿಕೊಳ್ಳುತ್ತಿದ್ದೀರಿ. ಹೇಳಿ... ನಿಮ್ಮ ಕೈಹಿಡಿದ ಕೃಷ್ಣರಿಗೆ ತಾನೇ ಈ ಸಾಮ್ರಾಜ್ಯ ಸೇರಬೇಕು.

ವಿನಯಾ : ಇರಬಹುದು.

ಮುಂಜ : ತಂದೆಯಿಂದ ಮಗನಿಗೆ ನ್ಯಾಯಬದ್ಧವಾಗಿ ಬರಬೇಕಿದ್ದ ಸಿಂಹಾಸನವನ್ನು ಚಿಕ್ಕಪ್ಪನ ಮಗನಾದವನು ಅನ್ಯಾಯವಾಗಿ ಕಸಿದುಕೊಂಡ.

ವಿನಯಾ : ಕಸಿದುಕೊಂಡರೇನು. ದೇವರು ಅದನ್ನು ಉಳಿಸಲಿಲ್ಲವಲ್ಲ. ಅನ್ಯಾಯಕ್ಕೆ ತಕ್ಕ ಶಿಕ್ಷೆಯನ್ನೂ ಅನುಭವಿಸಿದರಲ್ಲವೇ?

ಮುಂಜ : ಆ ಅನ್ಯಾಯವೂ ಸಾಲದೆಂಬಂತೆ ಅದನ್ನೇ ಚಾಲುಕ್ಯರು ಕಸಿದುಕೊಂಡರು. ರಾಷ್ಟ್ರಕೂಟ ಸಾಮ್ರಾಜ್ಯ ವೈಭವದ ವಿನಾಶ ಹೀಗಾಗಬೇಕೆ? ಮರಳಿ ರಾಷ್ಟ್ರಕೂಟ ರಾಷ್ಟ್ರಧ್ವಜ ದಿಗ್ದಿಗಂತದಲ್ಲಿ ಹಾರಾಡುವಂತೆ ಮಾಡಬೇಡವೇ?

ವಿನಯಾ : ನಿಮಗೆ ನಮ್ಮ ವಿಷಯಗಳೆಲ್ಲ ಹೇಗೆ ತಿಳಿಯಿತು?

ಮುಂಜ : ಸಹಾನುಭೂತಿ. ಸ್ನೇಹಗಳನ್ನು ಇಟ್ಟುಕೊಂಡವರು ತಮ್ಮ ಆಪ್ತರ ವಿಚಾರವಾಗಿ ಯಾವಾಗಲೂ ಎಚ್ಚರಿರುತ್ತಾರೆ.

ವಿನಯಾ : ಅಂದರೆ ನಾವು ನಿಮ್ಮ ಆಪ್ತರೆಂದೇ?

ಮುಂಜ : ಖಂಡಿತವಾಗಿಯೂ ನನಗೆ ತೀರಾ ಬೇಕಾದವರೇ! ಅದಕ್ಕೆಂದೇ ಈಗಲೂ ರಾಷ್ಟ್ರಕೂಟ ಸಿಂಹಾಸನವನ್ನು ಮರಳಿ ಪಡೆಯುವ ಪ್ರಯತ್ನದಲ್ಲಿ ನನ್ನ ತನು ಮನ ಧನವನ್ನೆಲ್ಲ ಅರ್ಪಿಸಿ ಹೋರಾಡಲು ಸಿದ್ಧನಿದ್ದೇನೆ.

ವಿನಯಾ : ನಿಮ್ಮ ಈ ಔದಾರ್ಯಕ್ಕೆ ನಾನು ಋಣಿಯಾಗಿರುವೆನಾದರೂ ಏನೂ ಸಂಬಂಧವಿಲ್ಲದ ನಮ್ಮ ಬಗ್ಗೆ ಇಷ್ಟೊಂದು ಆಸಕ್ತಿ ಬರಿಸುವಲ್ಲಿ ಯಾರ ಪ್ರಯತ್ನವಿದೆಯೆಂದು ಕೇಳಬಹುದೇ?

ಮುಂಜ : ಪ್ರಯತ್ನ ಯಾರದಾದರೇನಂತೆ ಮುಖ್ಯವಾಗಿ ಫಲ ದೊರೆಯಬೇಕು.

ವಿನಯಾ : ನಮ್ಮ ತಂದೆಯವರಿಂದಲೇನಾದರೂ ಈ ರೀತಿಯ ಪ್ರಯತ್ನಕ್ಕೆ ಸೂಚನೆ ಬಂತೇನು?

ಮುಂಜ : ನನಗೇ ನಿಮ್ಮ ಬಗ್ಗೆ ಆತ್ಮೀಯ ಭಾವನೆ ಮೂಡಿದ್ದರಿಂದ ಸಹಾಯ ಮಾಡಿ ನಿಮ್ಮನ್ನು ರಾಷ್ಟ್ರಕೂಟ ಮಹಾರಾಣಿಯನ್ನಾಗಿ ನೋಡಬೇಕೆನಿಸಿತು. ಅದಕ್ಕೆಂದೇ ಹೇಳುತ್ತಿದ್ದೇನೆ.

ವಿನಯಾ : (ಸ್ವಗತ) ಈ ವ್ಯಕ್ತಿಯ ನಾಟಕ ಅರ್ಥವಾಗುತ್ತಿಲ್ಲ. ಮುಂಜರ ಮಾತುಗಳ ಹಿನ್ನೆಲೆಯಲ್ಲಿ ಏನೇನು ಕುತಂತ್ರಗಳು ಅಡಗಿವೆಯೋ!..... ನಾನು ಇವರ ಮಾತಿಗೆ ಸಿಲುಕಿಕೊಳ್ಳದಂತೆ ಎಚ್ಚರಿಕೆ ವಹಿಸಬೇಕು?

ಮುಂಜ : ಅದೇನು ಹಾಗೆ ನಿಬ್ಬೆರಗಾಗಿ ನಿಂತು ಬಿಟ್ಟಿರಿ? ಏನನ್ನು ಆಲೋಚಿಸುತ್ತಿದ್ದೀರಿ? ನಾನು ನಿಮ್ಮನ್ನು ಮೋಸಮಾಡುತ್ತಿರುವೆನೆಂದೇ?

ವಿನಯಾ : ಹಾಗೇನೂ ಅಲ್ಲ. ನೀವಾಡಿದ ಮಾತುಗಳನ್ನು ಗಂಭೀರವಾಗಿ ಆಲೋಚಿಸುತ್ತಿದ್ದೆ.

ಮುಂಜ : ನಿಮಗೆ ನನ್ನ ಮಾತುಗಳು ಸರಿತೋರಿವೆಯೇ?

ವಿನಯಾ : ಹೂಂ!

ಮುಂಜ : ಹಾಗಾದರೆ ನಿಮ್ಮ ಸಮ್ಮತಿ ಇದೆ ಎಂದಾಯಿತು! ಓ ಹಾಗೇಕೆ ಹೆದರಿ ನಿಲ್ಲುತ್ತೀರಿ. ನಾನೇನೂ ಹೆಬ್ಬುಲಿಯಲ್ಲ.... ನಿಮ್ಮ ಈ ಕಣ್ಣುಕುಕ್ಕುವ ಸೌಂದರ್ಯ ನಮ್ಮನ್ನು ತಡವರಿಸುವಂತೆ ಮಾಡುತ್ತಿದೆ. ಆ ಸತ್ವ ಹೀನನಾದ ನಿಮ್ಮ ಪತಿದೇವರಿಗಿಂತ ನಾನು ಸಮನಲ್ಲವೇ?....

ವಿನಯಾ : ಮುಂಜದೊರೆಗಳೇ ನೀವೇನು ಮಾಡಲು ಹೊರಟಿದ್ದೀರಿ. ನಾನಾರೆಂಬುದು ನಿಮಗೆ ತಿಳಿದಿರಬೇಕಲ್ಲ!

ಮುಂಜ : ತಿಳಿದಿದೆ ಕಾಮಿನಿಯೇ. ತಿಂಗಳುಗಳಿಂದ ವಿರಹಾತಪ್ತರಾದ ನನ್ನ ಮನಸ್ಸಿಗೆ ನಿಮ್ಮ ಸೌಂದರ್ಯ ಸುಧೆಯಿಂದ, ಶೀತಲಸ್ಪರ್ಶದಿಂದ ಕೃತಾರ್ಥನನ್ನಾಗಿ ಮಾಡಬಾರದೇ?

ವಿನಯಾ : ಛೆ! ದುಷ್ಟ! ವಿದ್ವಾಂಸನೆಂದು, ಸಜ್ಜನನೆಂದು ಸಲುಗೆಯಿಂದಿದ್ದರೆ, ಸ್ನೇಹ ಸಲುಗೆಗಳಿಗೆ ಕೊಡುವ ಮರ್ಯಾದೆ ಇದೇ ಏನು? ನಿನ್ನ ಈ ದುಷ್ಟ ವರ್ತನೆಯ ಪರಿಣಾಮ ಏನಾಗಬಹುದೆಂಬ ಕಲ್ಪನೆ ಇದೆಯೇನು?..... ದಯವಿಟ್ಟು ಅಡ್ಡಗಟ್ಟದೆ ನನ್ನನ್ನು ಹೋಗಲು ಬಿಡು..... (ಓಡುವ ಹೆಜ್ಜೆಯ ಸದ್ದು)

ಕಾಳಲ : ವಿನಯಾ.... ಮಗಳೇ.... ಇದೇಕೆ ಏದುಸಿರು ಬಿಡುತ್ತಿರುವೆ? ಏನಾಯಿತು ಮಗಳೆ? ಮುಂಜರು ನಿನಗೆ ಸಿಕ್ಕಿದ್ದರೇನು?

ವಿನಯಾ : ಜಕ್ಕಲೆಯವರನ್ನು ಮಾತನಾಡಿಸಿ ಇಲ್ಲಿಗೆ ಬಂದೆ ನೀನು ಇರಲಿಲ್ಲವಾಗಿ, ಅತಿಥಿಗೃಹಕ್ಕೆ ನಿನ್ನನ್ನು ಹುಡುಕಿಕೊಂಡು ಹೋದೆ. ಎಷ್ಟೇ ಬೇಡವೆಂದರೂ ಆ ನೀಚ ಅದೂ ಇದೂ ಮಾತನಾಡುತ್ತ ನಯವಾಗಿ ನಟಿಸುತ್ತ ನನ್ನೊಡನೆ ಅಸಭ್ಯವಾಗಿ ವರ್ತಿಸಿದ.

– – ವಿರಾಮ – –

ಕೃಷ್ಣ : ಪ್ರಿಯೆ ಇದೇಕೆ ಇಷ್ಟೊಂದು ಕಾತರ, ಕಳವಳ ಕ್ರೋಧಗಳು? ಕಾರಣ? ನಮ್ಮಿಂದೇನಾದರೂ ಅಪರಾಧವಾಗಿದೆಯೇ?

ವಿನಯಾ : ನಿಮ್ಮ ಮೇಲೆ ಕ್ರೋಧಗೊಳ್ಳಲು ಕಾರಣವೇನಾದರೂ ಇದ್ದರಲ್ಲವೇ?

ಕೃಷ್ಣ : ಮತ್ತೇಕೆ ಎಂದು ಕೇಳಬಹುದಲ್ಲವೇ?

ವಿನಯಾ : ಸ್ವಾಮಿ ನೀವು ನನ್ನನ್ನು ಅಪಾರ್ಥ ಮಾಡಿಕೊಳ್ಳುವುದಿಲ್ಲವೆಂದರೆ ಹೇಳುತ್ತೇನೆ. ನನ್ನನ್ನು ಯಾವ ರೀತಿಯಿಂದಲೂ ಸಂದೇಹಿಸಬಾರದು.

ಕೃಷ್ಣ : ಸಮರ್ಥಿಸಿಕೊಳ್ಳುವುದಕ್ಕೆ ಮೊದಲೇ ಷರತ್ತುಗಳನ್ನು ಹಾಕಿದರೆ ಹೇಗೆ?

ವಿನಯಾ : ಸ್ವಲ್ಪ ತಾಳ್ಮೆಯಿರಲಿ..... ಒಂದು ದಿನ ಅಪ್ಪಯನ್ನು ಹುಡುಕಿಕೊಂಡು ಆ ಮುಂಜರಲ್ಲಿಗೆ ಹೋದೆ. ಎಷ್ಟು ಪ್ರಯತ್ನಿಸಿದರೂ ಹಿಂತಿರುಗಿ ಬರಲು ಬಿಡಲೇ ಇಲ್ಲ. ಅದೂ ಇದೂ ಮಾತನಾಡುತ್ತಾ ಏನೇನೋ ಕವನಗಳನ್ನು ಒಪ್ಪಿದರು. ಕಡೆಗೆ ಎದ್ದು ಬರಲು ಅಣಿಯಾದಾಗ ನನ್ನೊಡನೆ ತೀರ ಅಸಭ್ಯವಾಗಿ ವರ್ತಿಸಿದರು. ಆಗಲೇ ಅವರ ವ್ಯಕ್ತಿತ್ವ ಬಯಲಿಗೆ ಬಂದದ್ದು.

ಕೃಷ್ಣ : ಹುಂ! ಕತೆ ಈಗೆಲ್ಲ ತಿರುವು ಪಡೆಯುತ್ತಿದೆ! ಇರಲಿ. ಅವನಿಗೆ ಸರಿಯಾಗಿ ಪಾಠ ಕಲಿಸಬೇಕಾಗಿದೆ . ವಿನಯಾ ಒಂದು ಮಾತು..... ನೀನು ಇನ್ನೆಂದೂ ಅವನ ಬಳಿ ಸುಳಿಯಬೇಡ. ನಿನ್ನ ತಂದೆ ತಾಯಿಗಳು ಅವನೊಂದಿಗೆ ಎಂದಿನಂತೆ ನಡೆದುಕೊಳ್ಳಲಿ. ನೀನು ಮಾತ್ರ ಎಚ್ಚರದಿಂದಿರು.

ಕೃಷ್ಣ : ನಿನ್ನ ತಂದೆಯವರು ಅವನ ವಿಚಾರವಾಗಿ ಹೊಸ ವಿಚಾರಗಳನ್ನು ಏನಾದರೂ ಹೇಳಿದನೆಂದು ತಿಳಿಸಿದರೇನು?

ವಿನಯಾ : ಚಕ್ರವರ್ತಿಗಳಿಗೆ ವಿಷಯ ತಿಳಿಯುವವರೆಗೆ ಬೇರೆ ಯಾರಿಗೂ ಸುದ್ದಿಯ ಸುಳಿವು ದೊರೆಯಬಾರದೆಂದರು.

ಕೃಷ್ಣ : ಅಂದರೆ ಎಲ್ಲವನ್ನೂ ಚಕ್ರವರ್ತಿಗಳಿಗೆ ನಿವೇದಿಸುವರೇನು?

ವಿನಯಾ : ಹಾಗೆಂದೇ ಕಾಣುತ್ತದೆ.

ಕೃಷ್ಣ : ಸರಿ. ನಾನೂ ಒಮ್ಮೆ ಮುಂಜನನ್ನು ಕಂಡು ಅವನ ಅಂತರಂಗದ ಜಾಡು ಏನೆಂಬುದನ್ನು ತಿಳಿಯುತ್ತೇನೆ. ನಾವೂ ಕೂಡಾ ಅವನ ಪಕ್ಷವೇ ಎಂಬ ಭಾವನೆಯನ್ನು ಬಲಿಯಿಸೋಣ. ನೀನು ಈ ಕೂಡಲೇ ನಿನ್ನ ತಂದೆಯನ್ನು ಕಂಡು ನಾನು ಹೇಳಿರುವುದನ್ನು ವಿವರಿಸು. ಈಗಲೇ ಮುಂಜನನ್ನು ಕಂಡು ಬರುತ್ತೇನೆ. (ಹೊರಡುತ್ತಾನೆ)

– – ವಿರಾಮ – –

ಕೃಷ್ಣ : (ವ್ಯಂಗ್ಯ) ಮುಂಜ ಪ್ರಭುಗಳು ಹೇಗಿದ್ದಾರೆ? ..... ಯುದ್ಧದಿಂದ ಈಗ ತಾನೇ ಬಂದೆ. ಆದರೂ ಅತಿಥಿಗಳಿಗೆ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವುದು ನಮ್ಮ ಪ್ರಥಮ ಕರ್ತವ್ಯವೆಂದು ತಿಳಿದ ಚಕ್ರವರ್ತಿಗಳ ಆದೇಶದಂತೆ ಹೊರಟು ಬಂದೆ. ಇಲ್ಲಿ ನಿಮಗೆ ಯಾವ ತೊಂದರೆ. ಕಿರುಕುಳ, ಅವಮಾನಗಳು ಆಗಲಿಲ್ಲ ತಾನೇ?..... ನಮ್ಮ ಮಾವನವರು ಮನೆಯವರು ನಿಮ್ಮನ್ನು ಗೌರವದಿಂದಲೇ ಕಂಡಿರಬೇಕಲ್ಲ!

ಮುಂಜ : ಇಲ್ಲ.... ಇಲ್ಲ.... ಎಲ್ಲವೂ ಸಕ್ರಮವಾಗಿದೆ. ವಾಸ್ತವವಾಗಿ ಹೇಳಬೇಕೆಂದರೆ ಇಲ್ಲಿನ ಜನರ ಸಜ್ಜನಿಕೆಗೆ ನಾನು ಮಾರುಹೋಗಿದ್ದೇನೆ......

ಕೃಷ್ಣ : ನಿಮ್ಮ ಆ ಭಾವನೆಗೆ ಕೃತಜ್ಞನಾದೆ. ಮತ್ತು ನಿಮ್ಮ ಮಾತುಗಳನ್ನು ಕೇಳಿಯೂ ಸಂತೋಷಗೊಂಡೆ. ಲೋಕದಲ್ಲಿ ಒಳಗೊಂದು

ಹೊರಗೊಂದು ಕಾಣಿಸುವವರೇ ತುಂಬಿರುವಾಗ ನಿಮ್ಮಿಂದ ಬಂದ ಈ ಅಭಿಪ್ರಾಯ ಭಾವನೆಗಳಿಂದ ನನಗೊಂದು ರೀತಿ ಸಮಾಧಾನವೆನಿಸಿದೆ. ಅರಸುಮನೆತನಕ್ಕೆ ಸೇರಿದ ನನಗೆ ಇದಕ್ಕಿಂತ ಮೌಲಿಕವಾದ್ದು ಇನ್ನೇನು ಬೇಕಿದೆ.

ಮುಂಜ : ಅರಸು ಮನೆತನಕ್ಕೆ ಸೇರಿದ್ದರೇನು? ಈಗ ನೀವು ಕೇವಲ ಅಧೀನಾಧಿಕಾರಿಯಾಗಿದ್ದೀರಷ್ಟೇ! ಗಜ್ಜೇಂದ್ರದ ಜಾಗವನ್ನಷ್ಟೇ ನಿಮಗೆ ಕೊಟ್ಟಿದ್ದಾರೆ. ನಾಳೆ ಏನಾದರೂ ಹೆಚ್ಚು ಕಡಿಮೆಯಾದರೂ ನಿಮ್ಮನ್ನು ಯಾವುದೋ ಕುತಂತ್ರದಿಂದ ತೆರವು ಮಾಡಿಸಿ ಆ ಜಾಗವನ್ನು ಮತ್ತೊಬ್ಬರಿಗೆ ನೀಡುತ್ತಾರೆ.

ಕೃಷ್ಣ : ಅವೆಲ್ಲವನ್ನೂ ಈಗ ಯೋಚಿಸುವುದರಿಂದ ಬರುವ ಪ್ರಯೋಜನವೇನೂ ಮುಂದೇನಾಗಬೇಕೆಂಬುದನ್ನು ಯೋಚಿಸುವುದು ಮುಖ್ಯವಲ್ಲವೇ?

ಮುಂಜ : ನಿಜ. ನಿಜ!...... ನೀವೀಗ ಜಯಮಾಲೆ ಧರಿಸಿ ಬಂದವರು. ನಿಮಗೆ ಹಾಗನ್ನಿಸುವುದೇ ಸರಿಯೆನಿಸುತ್ತದೆ.

ಕೃಷ್ಣ : ಜಯಮಾಲೆ ಧರಿಸಿದವರು ನಾವಲ್ಲ; ನಮ್ಮ ಚಕ್ರವರ್ತಿ ತೈಲಪರು. ಅದರಿಂದ ನಮಗೇನಾಗಬೇಕು ಹೇಳಿ?

ಮುಂಜ : ಸ್ವಲ್ಪ ಪ್ರಯತ್ನಿಸಿದಲ್ಲಿ ನಮ್ಮ ರೇಖೆಗಳನ್ನು ನಾವೇ ತಿದ್ದಿ ಬರೆದುಕೊಳ್ಳಬಹುದಲ್ಲವೇ?

ಕೃಷ್ಣ : ಅಂದರೆ?

ಮುಂಜ : ನಿಮ್ಮ ಶ್ರೀಮತಿಯವರು ನಿಮಗೆ ಏನನ್ನೂ ತಿಳಿಸಲಿಲ್ಲವೇ?

ಕೃಷ್ಣ : ತಿಳಿಸಿದರು. ಆದರೆ ಅದರಿಂದಾಗುವುದಾದರೂ ಏನು? ಮಾತುಗಳು ಆಲೋಚನೆಗಳು ಆಕರ್ಷಕವಾಗಿದ್ದರೆ ಸಾಲದು. ಸಾಧಿಸಲು ಸರಿಯಾದ ವಿಧಿ ವಿಧಾನಗಳು ತಿಳಿದಿರಬೇಕಲ್ಲವೇ?

ಮುಂಜ : ಸಾಧಿಸಲೇಬೇಕೆಂಬ ಛಲದಿಂದ ಹೊರಟಾಗ ವಿಧಾನಗಳು ತಮಗೆ ತಾವೇ ರೂಪುಗೊಳ್ಳುತ್ತವೆ.

ಕೃಷ್ಣ : ಅದು ನಿಮ್ಮಂಥವರಿಗೆ ಸಾಧ್ಯ. ನಾವೋ.....

ಮುಂಜ : ನಿಮ್ಮ ಸಮ್ಮತಿ ಇದ್ದಲ್ಲಿ ಉಭಯರ ಅನುಕೂಲಕ್ಕೆ ಕೂಡಲೇ ಕೈ ಹಾಕಬಹುದು.

ಕೃಷ್ಣ : ಕೈ ಹಾಕಬಹುದೆಂಬುದು ಸರಿ. ಆದರೆ ನಮ್ಮ ಕಾರ್ಯವಿಧಾನದ ಸ್ವರೂಪ ಸ್ಪಷ್ಟವಾಗದೆ ಮುಂದಿನ ಹೆಜ್ಜೆಯಿಟ್ಟರೆ ಅಪಾಯಕಾರಿಯಾಗಿ ಪರಿಣಮಿಸಬಹುದು. ಸಾಕಷ್ಟು ಪೂರ್ವಸಿದ್ಧತೆಗಳಿಲ್ಲದೆ ದಿಢೀರನೆ ಹೊರಡುವುದು ಸರಿಯಲ್ಲವೆನಿಸುತ್ತದೆ.

ಮುಂಜ : ಅದರ ಯೋಜನೆ, ಹೊಣೆಗಾರಿಕೆಗಳನ್ನು ನನಗೆ ವಹಿಸಿಬಿಡಿ. ನೀವು ತೈಲಪರ ಅಂತರಂಗ ವ್ಯಕ್ತಿ. ನಿಮ್ಮಿಂದ ಅರಮನೆಯ ರಹಸ್ಯಗಳು ಹೊರ ಬೀಳುತ್ತಿದ್ದರೆ ಸಾಕು. ನಾವೇ ಪ್ರತಿಯೊಂದು ವಿದ್ರೋಹದ ಹೆಜ್ಜೆಗಳನ್ನು ರೂಪಿಸುತ್ತೇವೆ.

ಕೃಷ್ಣ : ನೀವು ಬಂಧನದಲ್ಲಿ ಇರುವವರು ನಿಮಗೆ ಬೇಕಾದ ವ್ಯಕ್ತಿಗಳನ್ನು ಭೇಟಿಯಾಗುವುದು. ಮಂಥಣ ನಡೆಸುವುದು ಹೇಗೆ ಸಾಧ್ಯವಾದೀತು? ಅರಮನೆಯ ಒಳ ಹೊರಗೆಲ್ಲ ಬಿಗಿ ಕಾವಲಿದೆ. ಸೆರೆಯಾಳುಗಳು ಒಬ್ಬರನ್ನೊಬ್ಬರು ನೋಡುವಂತೆಯೇ ಇಲ್ಲ.

ಮುಂಜ : ಕೃಷ್ಣರೇ ನಿಜವಾಗಿಯೂ ನೀವು ಮುಗ್ಧರೋ ಅಥವಾ ಮುಗ್ಧರಂತೆ ತೋರಿಸಿಕೊಳ್ಳುತ್ತಿದ್ದೀರೋ ನನಗಂತೂ ಅರ್ಥವಾಗುವುದಿಲ್ಲ. ರಾಜಕೀಯ ಕಣ್ಣಾಮುಚ್ಚಾಲೆಯಲ್ಲಿ ಏನೆಲ್ಲ ನಡೆಯಬಹುದು! ಸ್ವರ್ಣಮುದ್ರ, ರಜತ ಮುದ್ರೆಗಳ ಕಣ್ಣು ಕುಕ್ಕುವ ಹೊಳಪಿಗೆ ಒಳಗಾಗದವರು ಯಾರಾದರೂ ಇರುವರೇನು?

ಕೃಷ್ಣ : ನಿಮ್ಮ ಮಾತಿನ ಅರ್ಥ, ಹಣದ ಆಮಿಷದ ಬಲೆಯೊಳಗೆ ಕೆಲವರನ್ನಾದರೂ ಕೆಡವಿಕೊಂಡಿದ್ದೀರಿ ಎಂದು!

ಮುಂಜ : ವಿಧಿಯಿಲ್ಲ. ನನ್ನ ಗುರಿ ಮುಟ್ಟಬೇಕಾದರೆ ನೀತಿ ಅನೀತಿಗಳ ಬಗ್ಗೆ ತಲೆಕೆಡಿಸಿಕೊಳ್ಳಬಾರದಲ್ಲ!

ಕೃಷ್ಣ : ಅಂತಹ ಮಹಾನುಭಾವರು ಯಾರಿರಬಹುದು?

ಮುಂಜ : ಅವರೆಲ್ಲ ಸಣ್ಣವರು. ಇವರೆಲ್ಲರನ್ನೂ ಮೀರಿಸುವ ರಾಜಕೀಯ ಕುತಂತ್ರಗಳಲ್ಲಿ ಶಕುನಿಯಾಗಿರಬಲ್ಲ ಇನ್ನೊಬ್ಬ ವ್ಯಕ್ತಿ ಇದ್ದಾರೆ.

ಕೃಷ್ಣ : ಯಾರೆಂದು ಸ್ಪಷ್ಟವಾಗಿ ಹೇಳದಿದ್ದಲ್ಲಿ ನಿಮ್ಮ ಮಾತುಗಳಲ್ಲಿ ನನಗೆ ನಂಬಿಕೆ ಬರುವುದಾದರೂ ಹೇಗೆ?

ಮುಂಜ : ಅವರೇ ಗಜ್ಜೇಂದ್ರರು.

ಕೃಷ್ಣ : ಏನು ಗಜ್ಜೇಂದ್ರರೇ!......

ಗಜ್ಜೇಂದ್ರರಿಗೂ ನಿಮಗೂ ಭೇಟಿಯಾದದ್ದಾದರೂ ಹೇಗೆ? ಅಲ್ಲದೆ ಅವರೂ ಕೂಡಾ ನಿಮ್ಮ ಹಾಗೆಯೇ ಸೆರೆಯಾಳು. ಬಂಧನದಲ್ಲಿರುವವರಿಂದ ಏನು ಮಾಡಲು ಸಾಧ್ಯ?.... ಸುಮ್ಮನೆ ಕನಸಿನರಮನೆಯ ಕನಸು ಕಾಣಿಸಬೇಡಿ.

ಮುಂಜ : ಬಂಧನದಲ್ಲಿದ್ದುಕೊಂಡು ಏನೂ ಮಾಡಲು ಸಾಧ್ಯವಿಲ್ಲವೆಂಬ ನಿಮ್ಮ ಮಾತನ್ನು ಒಪ್ಪುತ್ತೇನೆ. ಅದಕ್ಕೆಂದೇ ನಿಮ್ಮ ಸಹಾಯ ಇಂತಹ ಪರಿಸ್ಥಿತಿಯಲ್ಲಿ ಅತಿಮುಖ್ಯವೆಂದದ್ದು.

ಕೃಷ್ಣ : ಗಜ್ಜೇಂದ್ರರನ್ನು ಎಂದಾದರೂ ನೀವು ಪ್ರತ್ಯಕ್ಷವಾಗಿ ನಿಮ್ಮ ಜಾಣತನದ ಪ್ರಯತ್ನದಿಂದ ಸಂಪರ್ಕಿಸಿದ್ದಿರೇನು?

ಮುಂಜ : ಗಜ್ಜೇಂದ್ರರನ್ನು ನಮ್ಮ ಜನರನ್ನೂ ಒಂದೇ ಸೆರೆ ವಿಭಾಗದಲ್ಲಿ ಇರಿಸಿದ್ದಾರೆ. ತನ್ನನ್ನೂ ಒಬ್ಬ ಸಾಮಾನ್ಯ ಸೆರೆಯಾಳಿನಂತೆ ನಡೆಸಿಕೊಳ್ಳುತ್ತಿದ್ದಾರೆಂಬ ಕೋಪ ಅವರಿಗಿದೆ. ತೈಲಪರ ಮೇಲೆ ಸೇಡು ತೀರಿಸಿಕೊಳ್ಳಲು ತುದಿಗಾಲಿನ ಮೇಲೆ ನಿಂತು ಅವಕಾಶಕ್ಕಾಗಿ ಕಾಯುತ್ತಿದ್ದಾರೆ.

ಕೃಷ್ಣ : ಕೋಪ ತೀರಿಸಿಕೊಳ್ಳಲು ಅವರಲ್ಲಿ ಯಾವ ಸಾಮರ್ಥ್ಯ. ಸಾಮಗ್ರಿಗಳಿವೆ. ಬಡವನ ಕೋಪ ದವಡೆಗೆ ಊನವೆಂದಂತಾಗುತ್ತದೆ. ಸೈನ್ಯವಿಲ್ಲ. ಅಧಿಕಾರವಿಲ್ಲ. ಯಾವ ಭರವಸೆಯ ಮೇಲೆ ಹರಿಹಾಯುತ್ತಾರೆ.

ಮುಂಜ : ನೀವು ಮಾಡಬೇಕಾದ್ದಿಷ್ಟೇ! ಗಜ್ಜೇಂದ್ರರನ್ನು ಹೇಗಾದರೂ ಸೆರೆಮನೆಯಿಂದ ತಪ್ಪಿಸಿಬಿಡಿ.

ಕೃಷ್ಣ : ಆ ಕೆಲಸ ಅಷ್ಟು ಸುಲಭವಲ್ಲ.

ಮುಂಜ : ಸುಲಭವಾಗಿಲ್ಲವೆಂದೇ ನಿಮ್ಮಲ್ಲಿ ಯಾಚನೆ. ಇಲ್ಲದಿದ್ದ ಪಕ್ಷದಲ್ಲಿ ಎಂದೋ ಸೆರೆಮನೆಯ ಗೋಡೆಗಳನ್ನು ಲಂಘಿಸಿ ಪಾರಾಗುತ್ತಿದ್ದರು.

ಕೃಷ್ಣ : ಆಯಿತು. ನಾನು ಸೆರೆಯಿಂದ ತಪ್ಪಿಸಲು ಯತ್ನಿಸುತ್ತೇನೆ. ಆದರೆ ಮುಂದೆ ಅವರು ಏನು ಮಾಡುತ್ತಾರೆ?

ಮುಂಜ : ಅವರು ಏನು ಮಾಡುತ್ತಾರೆ. ಹೇಗೆ ಮಾಡುತ್ತಾರೆ – ಎಂಬುದು ನಮಗೆ ಬೇಡ. ಏನಿದ್ದರೂ ನಮ್ಮ ಗುರಿಗಳು ಸಾಧ್ಯವಾದರೆ ಆಯಿತಲ್ಲ?

ಕೃಷ್ಣ : ನಮ್ಮ ಗುರಿಗಳು ಏನು? ನನಗೆ ವ್ಯಯಕ್ತಿಕವಾಗಿ ಇದರಿಂದ ಬರುವ ಲಾಭದ ಸ್ವರೂಪವೇನು ತಿಳಿಸಿ ಬಿಡಿ. ಏಕೆಂದರೆ ಕಾರ್ಯ ಪ್ರವೃತ್ತರಾಗುವುದಕ್ಕೆ ಮೊದಲು ಪ್ರತಿಯೊಂದೂ ಸ್ಪಷ್ಟವಾಗಿರಬೇಕಲ್ಲ!

**ಮುಂಜ** : ಸ್ಪಷ್ಟವಾಗಿಯೇ ಇದೆಯಲ್ಲ! ನೀವೇ ಸಿಂಹಾಸನಾಧಿಪತಿ. ಗಜೇಂದ್ರರೇ ಮಹಾಮಾತ್ಯರು. ನನಗೆ ಮಾತ್ರ ಯಾವ ಆಸೆ ಸ್ವಾರ್ಥಗಳೂ ಇಲ್ಲ. ನಮ್ಮ ನಿಮ್ಮ ಆತ್ಮೀಯ ಸ್ನೇಹವೊಂದೇ ಸಾಕು.

**ಕೃಷ್ಣ** : ನಿಮ್ಮ ಆಲೋಚನೆ. ಲೆಕ್ಕಾಚಾರಗಳು ಅದ್ಭುತವಾಗಿವೆ. ಈ ದಿಕ್ಕಿನಲ್ಲಿಯೇ ಮುಂದುವರೆದರೆ ಯಶಸ್ಸನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಯೋಚಿಸುತ್ತೇನೆ.

೦೦

# ದೃಶ್ಯ – ೧೩

ಓಲೆಕಾರ : ಮುಂಜ ಪ್ರಭುಗಳೇ ತೈಲಪ ಚಕ್ರವರ್ತಿಗಳಿಂದ ತಮಗೊಂದು ಸಂದೇಶವಿದೆ.

ಮುಂಜ : ಏನು ಸಂದೇಶವೇ? ಹುಂ! ಕೊಡು ನಾನೇ ಓದುತ್ತೇನೆ.

'ಮಾನ್ಯ ಮುಂಜರಿಗೆ ತಿಳಿಸುವುದೇನೆಂದರೆ. ಬಂಧನಕ್ಕೆ ಒಳಗಾದ ಶತ್ರುಗಳಿಗೆ ಶಿಕ್ಷೆಯ ತೀರ್ಮಾನವಾಗದೆ ಉಳಿದಿರುವ ಸಂಗತಿ ತಮಗೆ ತಿಳಿದೇ ಇದೆ. ಕಾರಣಾಂತರಗಳಿಂದ ಕಾರ್ಯಾಚರಣೆ ಈಗಾಗಲೇ ತಡವಾಗಿದೆ. ಇನ್ನೂ ಇದು ವಿಳಂಬವಾಗಬಾರದೆಂಬ ಉದ್ದೇಶದಿಂದ ಸಾರ್ವಜನಿಕ ವಿಚಾರಣೆಯನ್ನು ತೈಲಪ ಚಕ್ರವರ್ತಿಗಳ ನೇತೃತ್ವದಲ್ಲಿ ನಡೆಯಲು ವ್ಯವಸ್ಥೆಯಾಗಿದೆ. ಆ ವಿಚಾರಣೆಯಲ್ಲಿ ಯುದ್ಧದಲ್ಲಿನ ಸೆರೆಯಾಳುಗಳಿಗೆ ಯಾವ ಯಾವ ಶಿಕ್ಷೆಯಾಗಬೇಕೆಂಬುದನ್ನು ನಿರ್ಧರಿಸಲಾಗುವುದು'

ಹುಂ! ಇದು ಸಂದೇಶವಲ್ಲ; ಆದೇಶ! ಆದೇಶ.....

ಭಟ : ಸದ್ದು.... ಸದ್ದು.... ಈಗ ವಿಚಾರಣೆ ನಡೆಯಲಿದೆ.....

ಪಂಡಿಗ : ಪ್ರತಿಷ್ಠಿತ ಪೌರ ಮಹಾಜನಂಗಳೇ ಕೆಟ್ಟವರಲ್ಲಿಯೂ ಒಳ್ಳೆಯದನ್ನು ಗುರುತಿಸುವ ಚಕ್ರವರ್ತಿಗಳು ಮೇಲಿಂದ ಮೇಲೆ ನಮ್ಮ ಸಾಮ್ರಾಜ್ಯ ಕಂಟಕರಾದ ಪರಮಾರರ ದೊರೆಯಾದ ಮುಂಜರನ್ನು ಬಂಧಿಯಂತೆ ನಡೆಸಿಕೊಳ್ಳದೆ ಗೌರವದಿಂದ ನಡೆಸಿಕೊಂಡದ್ದು ಅವರ ದೊಡ್ಡಗುಣ. ಆದರೆ ಮುಂಜರು ಅದನ್ನು ಲೆಕ್ಕಿಸದೆ ತಮ್ಮ ಪ್ರತಿಷ್ಠೆ, ಹಿರಿತನಕ್ಕೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು ಶೋಚನೀಯ. ಹುಟ್ಟುಗುಣ ಸುಟ್ಟರೂ ಹೋಗದೆಂಬಂತೆ ದ್ರೋಹದ ಹೆಜ್ಜೆಗಳನ್ನೇ ಆಲೋಚಿಸಿದ್ದಾರೆ. ಇದರ ಬಗ್ಗೆ ಅಣ್ಣಿಗದೇವ, ಕೃಷ್ಣರೆಲ್ಲರೂ ತಮ್ಮ ಅನುಭವಗಳನ್ನು ನಿಮ್ಮೆಲ್ಲರ ಮುಂದೆ ನಿವೇದಿಸಲಿದ್ದಾರೆ..... ಅಣ್ಣಿಗದೇವ ನೀವು ದೊರೆ ಮುಂಜರನ್ನು ಕಂಡದ್ದು ಯಾವಾಗ?

ಅಣ್ಣಿಗ : ಗೋದಾವರಿ ನದಿಯನ್ನು ದಾಟಿ, ತೆಂಕಕ್ಕೆ ಬಂದಿದ್ದ ಅವರು, ಸೋತು ಪಲಾಯನ ಪ್ರಯತ್ನದಲ್ಲಿ ಇದ್ದಾಗ, ನಾವು ಅವರನ್ನು ಬಂಧನಕ್ಕೆ ಒಳಪಡಿಸಿದಾಗ.

ಪಂಡಿಗ : ನೀವು ಅವರನ್ನು ನೋಡಿದ್ದು ಅದೇ ಮೊದಲ ಸಲವೇನು?

ಅಣ್ಣಿಗ : ನೋಡಿದ್ದು ಎರಡನೇ ಬಾರಿಯಾದರೂ, ಮುಂಜರೆಂದು ಅರಿತದ್ದು ಇದೇ ಮೊದಲು.

ಪಂಡಿಗ : ಅಂದರೆ ಅದಕ್ಕೂ ಮೊದಲು ಅವರನ್ನು ಕಂಡಿದ್ದಿರಿ ಎಂದಾಯಿತು.

ಅಣ್ಣಿಗ : ಹುಂ. ಸನ್ನಿಧಾನದ ಮೇಲೆ ಅವರು ಬೆನ್ನ ಹಿಂದಿನಿಂದ ಆಕ್ರಮಣ ಮಾಡಲು ಯತ್ನಿಸಿದಾಗ ನೋಡಿದ್ದೆ ಅವರ ಆ ಕೃತ್ಯ ನೋಡಿದಾಗ. ರೋಸಿಗೆ ಸಿಟ್ಟುಗಳು ಮೂಡಿ, ಆಗಲೇ ಅವರನ್ನು ಕೊಲ್ಲಲು ಯತ್ನಿಸಿದೆ. ಆದರೆ ಅದೃಷ್ಟವಶಾತ್ ಅವರ ಸಹಚರರ ನೆರವಿನಿಂದ, ಅಪಾಯ ತಪ್ಪಿ ಬದುಕಿ ಉಳಿದರು.

ಪಂಡಿಗ : ಅವರೇ ಮುಂಜರೆಂದು ಹೇಗೆ ತಿಳಿದಿರಿ?

ಅಣ್ಣಿಗ : ಸನ್ನಿಧಾನವನ್ನು ಕೊಲ್ಲುವ ಪ್ರಯತ್ನದ ಸಂದರ್ಭದಲ್ಲಿ, ನಾನು ನನ್ನನ್ನು ಪಡೆವಳ ತೈಲನೆಂದು ಪರಿಚಯಿಸಿದ್ದೆ. ನಾವು ಅವರನ್ನು ಬಂಧನಕ್ಕೆ ಒಳಗಾಗಿರುವಾಗ ನನ್ನನ್ನು ನೋಡಿ 'ಓ ಪಡೆವಳ ತೈಲ!' ಎಂದು ಉದ್ಗರಿಸಿದರು.

ಪಂಡಿಗ : ಅಂದರೆ ಅವರ ಜ್ಞಾಪಕಶಕ್ತಿ ಅದ್ಭುತವಾಗಿದೆ ಎಂದಾಯ್ತು..... ಅವರ ನಡೆವಳಿಕೆ ಬಗ್ಗೆ ಇನ್ನೇನಾದರೂ ಹೇಳುವುದಿದೆಯೆ?

ಅಣ್ಣಿಗ : ಏನೂ ಇಲ್ಲ.

ತೈಲಪ : ಬೇಡ ಪಂಡಿಗರೇ. ಇನ್ನೂ ವಿಚಾರಣೆಗೆ ಒಳಪಡಿಸಬಹುದಾದ ಅಂಶಗಳಿವೆ. ಎಲ್ಲವೂ ಮುಗಿಯಲಿ. ನಂತರವೇ ಅವರಿಂದ ಸಮರ್ಥನೆ ಕೇಳೋಣ. ಆದರೆ ಭೋಜರ ಅಪ್ರತಿಮ ಪ್ರತಿಭೆ ಸಾಮರ್ಥ್ಯಗಳು ಅವರ ಗಮನಕ್ಕೆ ಬಂದಾಗ ಅಸ್ವಸ್ಥಗೊಂಡರು. ಸ್ವಾರ್ಥ ಹೆಡೆ ಬಿಚ್ಚಿತು. ಭೋಜರನ್ನು ಯಾರಿಗೂ ಕಾಣದಂತೆ ಮುಗಿಸಿಬಿಡಲು ನನಗೆ ಆದೇಶಿಸಿದರು. ಆದರೆ ನನ್ನಲ್ಲಿ ಇನ್ನೂ ಮನುಷ್ಯತ್ವ ಇತ್ತು. ಅದಕ್ಕೆ ಅವರನ್ನು ಉಳಿಸಿ ಕೊಂದೆನೆಂದು ಸುಳ್ಳು ಹೇಳಿದೆ.

ಪಂಡಿಗ : ಮುಂಜರು ಭ್ರಾತೃದ್ರೋಹಿ, ದೇಶ ದ್ರೋಹಿ. ಮಾಡಿದ ಕಾರ್ಯ ನ್ಯಾಯಬಾಹಿರವೆಂದು ನೀವೂ ಒಪ್ಪಿಕೊಳ್ಳುತ್ತಿರಲ್ಲವೇ?

ವತ್ಸರಾಜ : ನಾನು ಒಪ್ಪಿಕೊಳ್ಳುವುದು. ಬಿಡುವುದು ಮುಖ್ಯವಲ್ಲ. ಅವರ ಕೃತಿಗಳು ಲೋಕದ ಮುಂದಿವೆ ಅವರೇನೆಂಬುದು ಈ ಲೋಕ. ಈ ಪ್ರಜಾಬಂಧುಗಳು, ನ್ಯಾಯಮೂರ್ತಿಗಳು ನಿರ್ಣಯಿಸಲಿ.

ದಂಡಿಗ : ಧನ್ಯವಾದಗಳು ವತ್ಸರಾಜರೇ..... ಬನವಾಸಿಯ ಆಡಳಿತಾಧಿಕಾರಿಗಳಾದ ಕೃಷ್ಣರು ವೇದಿಕೆಗೆ ಬರಬೇಕು. ...... ಆಡಳಿತಾಧಿಕಾರಿಗಳೇ ಯುದ್ಧಭೂಮಿಯಿಂದ ಬಂದಮೇಲೆ ನೀವು ಮುಂಜರನ್ನು ಸಂದರ್ಶಿಸಿದ್ದಿರಾ?

ಕೃಷ್ಣ : ಹೌದು ಸಂದರ್ಶಿಸಿದ್ದೆ.

ದಂಡಿಗ : ಈ ಸಂದರ್ಶನ ಸ್ವಯಂಪ್ರೇರಿತವೋ ಅಥವಾ ಅವರಿಂದ ಅಪೇಕ್ಷಿತವೋ?

ಕೃಷ್ಣ : ಸ್ವಪ್ರೇರಣೆಯಿಂದ ಕಾಣಬೇಕಾದ ಅಗತ್ಯವೇನೂ ಇರಲಿಲ್ಲವಾದರೂ. ನನ್ನನ್ನು ಕಾಣಬೇಕೆಂಬ ಬಯಕೆಯನ್ನು ವ್ಯಕ್ತಪಡಿಸಿದ್ದು ಪರೋಕ್ಷವಾಗಿ ನನಗೆ ತಿಳಿದು ಬಂತು. ಕುತೂಹಲಗೊಂಡು ನಾನೇ ಹೋದೆ.

ದಂಡಿಗ : ನಿಮ್ಮನ್ನು ಕಾಣಬೇಕೆಂದು ಆಶಿಸಿದ್ದು ಯಾಕೆಂದು ತಿಳಿದು ಬಂತೇ?

ಕೃಷ್ಣ : ಯಾಕೇನು? ರಾಜಕೀಯ ಆಮಿಷವನ್ನು ಒಡ್ಡಲು!

ದಂಡಿಗ : ಈ ವಿಷಯ ತಿಳಿಸಿದವರು ಯಾರು?

ಕೃಷ್ಣ : ನನ್ನ ಪತ್ನಿ. ಅವಳಿಂದ ಇನ್ನೂ ಅನೇಕ ವಿಷಯಗಳನ್ನು ಕೇಳಿದ ಮೇಲೆ ಈ ನೀಚನ ಸಂಚಿನ ಒಳಗುಟ್ಟುಗಳು. ಇದರ ಹಿನ್ನೆಲೆಯಲ್ಲಿರುವ ಗಬ್ಬೀಂದ್ರರ ವಿಚಾರವೆಲ್ಲ ನನಗೆ ತಿಳಿದು ಬಂತು.

ದಂಡಿಗ : ಸಂಚಿನ ಸ್ವರೂಪ. ವಿವರಗಳನ್ನು ಹೇಳಬಲ್ಲಿರಾ?

ಕೃಷ್ಣ : ಮೊದಲಿಗೆ ನನ್ನನ್ನು. ನನ್ನ ಮಾವನವರನ್ನು ನನ್ನ ಮಡದಿಯನ್ನು ಆಮಿಷದ ಕೂಪದೊಳಕ್ಕೆ ಸೆಳೆದುಕೊಳ್ಳುವುದು. ನನ್ನ ನೆರವಿನಿಂದ ಅವರು ತಪ್ಪಿಸಿಕೊಂಡು ಪಲಾಯನ ಮಾಡುವುದು.

ದಂಡಿಗ : ಅದನ್ನು ಕೇಳಿದ ನಿಮಗೆ ಆ ಕ್ಷಣ ಏನೆನ್ನಿಸಿತು?

ಕೃಷ್ಣ : ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕೆನಿಸಿ ನಾವೂ ರಾಜ ದ್ರೋಹದ ದಾರಿಯಲ್ಲಿದ್ದೇವೆಂಬ ಭ್ರಮೆ ಬರಿಸಿ, ಸಂಚಿನ ವಿವರಗಳನ್ನೆಲ್ಲ ದಕ್ಕಿಸಿಕೊಂಡೆವು. ಆದರೆ ನಾವು ಯಾರೂ ನಮ್ಮ ಒಗ್ಗಟ್ಟನ್ನು, ನಾಟಕವಾಡುತ್ತಿರುವ ಗುಟ್ಟನ್ನು ಬಿಟ್ಟು ಕೊಡಲಿಲ್ಲ.

ದಂಡಿಗ : ಅವರ ಪಲಾಯನದ ಯೋಜನೆಯ ಸ್ವರೂಪ ಹೇಗಿತ್ತು?

**ಕೃಷ್ಣ** : ಗಜ್ಜೇಂದ್ರ ಪರಮಾರ ಬಂಧಿತರ ನೆರವಿನಿಂದ ತಾವು ಬಂಧನವಲ್ಲಿದ್ದ ಕೊಠಡಿಯಲ್ಲಿ ಸುರಂಗ ಮಾರ್ಗ ತೋಡುವುದರಲ್ಲಿದ್ದ. ನಮ್ಮ ಕಾವಲುಗಾರರನ್ನು ವಂಚಿಸಿ, ಆಮಿಷ ತೋರಿಸಿ ಅಗೆಯುವ ಸಾಧನಗಳನ್ನು ದೊರಕಿಸಿಕೊಂಡಿದ್ದರು.

**ಪಂಡಿಗ** : ಹೂಂ!...... ಅವರ ಬಗ್ಗೆ ಇನ್ನೂ ಹೇಳುವುದಿದೆಯೇನು?

**ಕೃಷ್ಣ** : ಇವರ ಹೇಸಿಗೆಯ ಕೃತ್ಯಗಳನ್ನು ವಿವರಿಸುವುದಕ್ಕೆ ಗಂಟೆಗಳು ಸಾಲವು. ದಿನಗಳೇ ಬೇಕಾದೀತು. ಮುಂಜರಿಗೆ ಗಾಂಭೀರ್ಯ. ಮರ್ಯಾದೆಗಳಿಂದ ನಡೆದುಕೊಳ್ಳುವುದು ಗೊತ್ತಿಲ್ಲ. ಸಲಿಗೆ ಕಂಡಲ್ಲಿ ಸ್ವೇಚ್ಛೆಯಾಗಿ ವರ್ತಿಸುತ್ತಾರೆ. ಅವರ ವಾಕ್ಚಾತುರ್ಯಕ್ಕೆ ಮರುಳಾಗಿ ಬರುವ ಹೆಂಗಸರನ್ನು ಅವರ ಭಾವನೆಗೆ ವಿರುದ್ಧವಾಗಿ ಅವರೊಂದಿಗೆ ಅಶ್ಲೀಲವಾಗಿ ವರ್ತಿಸುವುದರ ಮೂಲಕ ಸ್ತ್ರೀ ಜಾತಿಗೇ ಅವಮಾನ ಮಾಡಿದ್ದಾರೆ. ಆ ಸ್ತ್ರೀಯರೆಲ್ಲ ಬಹುವಾಗಿ ನೊಂದಿದ್ದಾರೆ.

**ಪಂಡಿಗ** : ಕೃಷ್ಣರೇ. ನೀವು ಆರೋಪಿಸುತ್ತಿರುವ ಅಪರಾಧಗಳನ್ನು ಅವರೂ ಒಪ್ಪಿಕೊಳ್ಳಬೇಕಲ್ಲವೇ?

**ಕೃಷ್ಣ** : ನಿಜ. ಆದರೆ ತಪ್ಪು ಮಾಡಿದವರು ಯಾರೂ ತಮ್ಮ ತಪ್ಪನ್ನು ಒಪ್ಪಿಕೊಳ್ಳುವುದಿಲ್ಲ.

**ಪಂಡಿಗ** : ವಿಚಾರಣೆಯ ಹಿನ್ನೆಲೆಯಲ್ಲಿ ಎಲ್ಲ ಸತ್ಯಸಂಗತಿಗಳೂ ಹೊರಬೀಳಬೇಕೆಂಬುದು ಸನ್ನಿಧಾನದ ಇಚ್ಛೆ. ಆದ್ದರಿಂದ ನಿಮ್ಮ ಶ್ರೀಮತಿಯವರನ್ನೂ ಕರೆಸಿ ಅವರ ಹೇಳಿಕೆ ಪಡೆಯಲು ಪ್ರಯತ್ನಿಸಿದರೆ ತಮ್ಮ ಅಭ್ಯಂತರವಿಲ್ಲವೇ?

**ಕೃಷ್ಣ** : ಖಂಡಿತ ಇಲ್ಲ. ತನು ಮನ ಶುದ್ಧಳಾದ ಹೆಣ್ಣು ಸತ್ಯವನ್ನು ಸತ್ಯವೆಂದು ಹೇಳುವಲ್ಲಿ ಹಿಂಜರಿಯುವುದಿಲ್ಲ. ನ್ಯಾಯ ನಿರ್ಣಯ ಸಂಬಂಧದಲ್ಲಿ ಅವಳ ಹೇಳಿಕೆಯಿಂದ ಇನ್ನಷ್ಟು ಮಾನ್ಯತೆ ದೊರೆಯುತ್ತದೆ. ತನ್ನ ಸ್ವಾರ್ಥಕ್ಕಾಗಿ ಮುಗ್ಧ ಬಾಲಕನನ್ನೇ ಬಲಿಗೊಡಲು ಹೇಸದ ಕರ್ಕಶ ಹೃದಯಿಯಾದ ಈ ಚಂಡಾಲ ಯಾವ ಕೃತ್ಯಕ್ಕೂ ಹಿಂಜರಿಯುವುದಿಲ್ಲ.

**ಪಂಡಿಗ** : ಆಯಿತು ಧನ್ಯವಾದಗಳು. ನಮ್ಮ ಬೇಹುಗಾರ ನಾಯಕರಾದ ಹೊನ್ನಯ್ಯ ನಾಯಕರು ವೇದಿಕೆಗೆ ಬರಬೇಕು. ..... ಹೇಳಿ ಹೊನ್ನಯ್ಯನವರೇ. ಕೃಷ್ಣರು ಪ್ರಸ್ತಾಪಿಸಿದ ಸುರಂಗ ಮಾರ್ಗದ ಬಗ್ಗೆ ನಿಮ್ಮ ಗಮನಕ್ಕೆ ಬಂದ ವಿಚಾರಗಳು ಯಾವುವು?

ಪಂಡಿಗ : ಪ್ರಜೆಗಳೇ ಇಲ್ಲಿಯವರೆಗೆ ನಡೆದ ವಿದ್ಯಮಾನಗಳನ್ನು ನೋಡಿದಿರಿ. ಆರೋಪಿ ಮುಂಜರ ನಡವಳಿಕೆ ಇಷ್ಟು ಹೊತ್ತು ಮಾತನಾಡಿದ ಇವರೆಲ್ಲರ ಮಾತುಗಳಿಂದ ನಿಮಗೆ ಸ್ಪಷ್ಟವಾಗಿರಬೇಕು. ಸಾರ್ವಜನಿಕವಾಗಿ ವಿಚಾರಣೆ ನಡೆಸುತ್ತಿರುವುದರ ಉದ್ದೇಶ ಯಾವುದೇ ಭಿನ್ನಾಭಿಪ್ರಾಯಗಳು ಬಾರದಿರಲಿ ಎಂದು. ಮುಂಜರು ತಮ್ಮ ಮೇಲಿನ ಆರೋಪಗಳ ವಿಚಾರವಾಗಿ ಏನಾದರೂ ಹೇಳುವುದಿದ್ದರೆ. ಮುಂದೆ ಬರಲಿ.

ಮುಂಜ : ಇಲ್ಲಿನ ಎಲ್ಲ ಮಾತುಗಳೂ ಏಕಪಕ್ಷೀಯವಾಗಿ ನನ್ನನ್ನು ಅಪರಾಧಿಯೆಂದೇ ತೋರುತ್ತಿವೆ. ನನ್ನ ಅಣ್ಣ. ಅಧಿಕಾರ ಲಾಲಸೆ ಇತ್ಯಾದಿಗಳ ಚರ್ಚೆ ಇಲ್ಲಿ ಜೋರಾಗಿತ್ತು.

ಪಂಡಿಗ : ಯಾಕೆ?

ಮುಂಜ : ಯಾಕೆಂದರೆ ತೈಲಪರು, ಅಂದರೆ ಚಾಲುಕ್ಯರು ಮಾತ್ರವೇ ನ್ಯಾಯ ನಿಷ್ಠುರರು. ಅಧಿಕಾರ ಲಾಲಸೆ ಇಲ್ಲದವರು ಎಂದು ಡಂಗುರ ಹೊಡೆಯುವಂತಿತ್ತು. ನಿಮ್ಮ ವಂಶದ ಇತಿಹಾಸವನ್ನು ತೆರೆದು ನೋಡಿ. ಸತ್ಯಾಶ್ರಯ ಪುಲಿಕೇಶಿಯನ್ನು ಮೋಸಮಾಡಿ ಮಂಗಳೇಶರು ಸಿಂಹಾಸನ ಕಸಿದುಕೊಳ್ಳಲಿಲ್ಲವೇ?

ಪಂಡಿಗ : ಸತ್ಯಾಶ್ರಯರು ನಂತರ ಅವರಿಗೆ ಬುದ್ಧಿ ಕಲಿಸಿ ಮತ್ತೆ ಸಿಂಹಾಸನ ಹಿಂದೆ ಪಡೆದುಕೊಂಡರಲ್ಲವೆ!

ಮುಂಜ : ಈಗ ನಿಮ್ಮ ಚಕ್ರವರ್ತಿಗಳು ಸಿಂಹಾಸನವೇರಿ ರಾಜ್ಯಭಾರ ಮಾಡುತ್ತಿರುವುದು ನಿಮಗೆ ನ್ಯಾಯವೆನಿಸಿದರೆ ನಾನು ಮಾಡಿದ್ದೂ ನ್ಯಾಯವೇ.

ಪಂಡಿಗ : ಚಾಲುಕ್ಯ ಇತಿಹಾಸಕ್ಕೆ ಒಂದು ದೀರ್ಘ ಪರಂಪರೆ ಇದೆ. ನೂರಾರು ವರ್ಷಗಳ ಹಿಂದೆ ವೈಭವದಿಂದ ಮೆರೆದ ಚಾಲುಕ್ಯ ಸಾಮ್ರಾಜ್ಯವನ್ನು ರಾಷ್ಟ್ರಕೂಟರು ಕಸಿದುಕೊಂಡರು. ಈಗ ತೈಲಪರು ತಮ್ಮ ತಾತ ಮುತ್ತಾತಂದಿರು ಕಳೆದುಕೊಂಡಿದ್ದನ್ನು ಮರಳಿ ಪಡೆದರು, ಅಷ್ಟೆ!

ಮುಂಜ : ನಿಮಗದು ನ್ಯಾಯವೆನಿಸಿರಬಹುದು. ಹೊಟ್ಟಿಗ ದೇವರ ನಿಷ್ಠಾವಂತ ಸೇವಕರಾದ ಗಜ್ಜೇಂದ್ರರು ತಮ್ಮ ಪ್ರಭುವಿನ ರಾಜ್ಯವನ್ನು ಮರಳಿ ಪಡೆಯಲು ನಿಂತಾಗ, ನನಗದು ನ್ಯಾಯವೆನಿಸಿ ಬೆಂಬಲಕ್ಕೆ ನಿಂತೆ.

ಪಂಡಿಗ : ಕೃಷ್ಣ, ವಿನಯಾವತಿಯರನ್ನು ನಿಮ್ಮ ಗಾಳಕ್ಕೆ ಸೆಳೆದುಕೊಳ್ಳಲು ಯತ್ನಿಸಿದ್ದೇ ಅಲ್ಲದೆ. ಗರತಿಯೊಬ್ಬರ ಶೀಲಹರಣಕ್ಕೆ ಪ್ರಯತ್ನಿಸಿದಿರಲ್ಲ.

ಮುಂಜ : ನಿಮ್ಮ ಕೃಷ್ಣರೇ ನನ್ನನ್ನು ವಂಚಿಸಿದರೆಂದು ಘೋಷಿಸಿದ ಮೇಲೆ ಇನ್ನೇನು ಉಳಿದಿದೆ? ಮಾನಹಾನಿ ಶೀಲ ಹಾನಿ ಕೇವಲ ಭ್ರಮೆ. ನಾನು ಮಾಡಿದ್ದು ಅಪರಾಧವೆಂದು ನನಗನಿಸುತ್ತಿಲ್ಲ.

ಪಂಡಿಗ : ನೀವು ಹೋಗಬಹುದು..... ಈಗ ಗಬ್ಬೀಂದ್ರರು ವೇದಿಕೆಗೆ ಬರಬೇಕು.....

ಗಬ್ಬೀಂದ್ರ : ರಾಜಕೀಯ ಚದುರಂಗದಾಟದಲ್ಲಿ ಯಾರನ್ನೂ ನಂಬುವಂತಿಲ್ಲ. ಯಾರಿಗಾಗಿ ದುಡಿಯುತ್ತೇವೆಯೋ ಅವರೇ ಮೋಸಮಾಡುತ್ತಾರೆ. ಇಲ್ಲಿ ನಡೆದ ರೀತಿಯೇ ಇದಕ್ಕೆ ಸಾಕ್ಷಿ. ನಾನು ಎಷ್ಟೆಲ್ಲ ಕಷ್ಟಪಟ್ಟು ಪಡೆದದ್ದೇನು? ಕಾರಾವಾಸ. ಆದರೆ ನಾನು ಅದರ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಈ ಬದುಕಿಗೆ ಒಗ್ಗಿಕೊಂಡು ಬಿಟ್ಟಿದ್ದೆ. ಆದರೆ ಈ ಮುಂಜರ ಪ್ರವೇಶದಿಂದ ಏನೆಲ್ಲ ಬದಲಾವಣೆಯಾಯಿತು.

ಪಂಡಿಗ : ನೀವೇಕೆ ಅವರ ಸಂಚಿಗೆ ಬಿದ್ದಿರಿ?

ಗಬ್ಬೀಂದ್ರ : ನನ್ನನ್ನು ಮಹಾಮಾತ್ಯ ಮಾಡುವ ಆಸೆ ತೋರಿಸಿದರು. ನಾನೂ ಮನುಷ್ಯ! ಆಸೆ ಸಹಜವೇ!..... ಏನೆಲ್ಲ ಆಯಿತು ಎಂಬುದನ್ನು ಮತ್ತೆ ಮತ್ತೆ ಕೆದಕಿ ಕೇಳಬೇಡಿ. ನನಗೆ ಬದುಕುವ ಆಸೆಯೂ ಇಲ್ಲ. ನಿಮಗಿಷ್ಟ ಬಂದ ಶಿಕ್ಷೆಯನ್ನು ವಿಧಿಸಿ.

ಪಂಡಿಗ : ಆಯಿತು. ನಿಮ್ಮ ನೋವಿಗೆ ಮರ್ಯಾದೆ ತೋರುತ್ತೇನೆ. ನಿಮ್ಮ ಸ್ಥಳಕ್ಕೆ ಹಿಂತಿರುಗಿ.

ತೈಲಪ : ಕಲ್ಯಾಣ ನಗರದ ಮಹಾಜನಗಳೇ. ಚಾಲುಕ್ಯ ಚಕ್ರಾಧಿಪತ್ಯದ ಅಧಿಕಾರಿ ವರ್ಗದ ಮಹನೀಯರೇ. ಈವರೆಗೆ ಇಲ್ಲಿ ನಡೆದುದೆಲ್ಲವನ್ನೂ ತಮ್ಮ ಹಾಗೆ ನಾವೂ ನೋಡಿದ್ದೇವೆ. ಇದರಲ್ಲಿ ಸರಿ ತಪ್ಪುಗಳೇನು? ತಪ್ಪಿತಸ್ಥರು ಯಾರು ಎಂಬ ವಿಚಾರವಾಗಿ ನಿಮ್ಮ ಮನಸ್ಸಿನಲ್ಲಿ ಸ್ಪಷ್ಟ ಕಲ್ಪನೆಗಳು ಮೂಡಿರಬೇಕು. ಮುಂಜರ ನೀಚ ಕೃತ್ಯಗಳೆಲ್ಲ ಬೆಳಕಿಗೆ ಬಂದಿವೆ. ಅವರು ಎಸಗಿರುವ ಅಪರಾಧಗಳಿಗೆ ಮರಣದಂಡನೆಯೇ ಸರಿಯಾದ ತೀರ್ಪು. ಆದರೆ ಅದನ್ನು ಯಾವ ರೀತಿಯಲ್ಲಿ ವಿಧಿಸಬೇಕೆಂಬುದನ್ನು ಅವರೊಂದಿಗೇ ಚರ್ಚಿಸಿ ನಿರ್ಧರಿಸೋಣ.

ಪಂಡಿಗ : ಯುದ್ಧ ಸೈನಿಕರ ವಿಚಾರವಾಗಿ ಏನು ಮಾಡಬೇಕೆಂಬುದನ್ನೂ ಸನ್ನಿಧಾನ ತೀರ್ಮಾನಿಸಬೇಕು.

ತೈಲಪ : ಇವರೆಲ್ಲ ಪರಮಾರರ ಕಡೆಯ ಸೈನಿಕರಲ್ಲವೇ? ಯುದ್ಧ ಸಮಯದಲ್ಲಿ ಬಂಧನಕ್ಕೊಳಗಾದರೇ ಹೊರತು ಇವರಿಂದ ಬೇರೆ ಯಾವ ಅಪರಾಧಗಳೂ ಆಗಿಲ್ಲ. ಆದ್ದರಿಂದ ಅವರ ವಿಚಾರಣೆ ಅನಗತ್ಯ.....

ಪ್ರೀತಿಯ ಪ್ರಜೆಗಳೇ ನಾಳೆಯೇ ಇವರೆಲ್ಲರ ಬಗ್ಗೆ ತೀರ್ಪನ್ನು ನೀಡಲಾಗುವುದು. ಮುಂಜರೊಡನೆ, ಅಧಿಕಾರಿ ವರ್ಗದೊಡನೆ ಸಮಾವೇಶ ನಡೆಸಿ. ಇಲ್ಲಿಯೇ ಬಹಿರಂಗವಾಗಿ. ಸಾರ್ವಜನಿಕವಾಗಿ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಇಂದಿಗೆ ಈ ವಿಚಾರಣೆ ಮುಗಿದಿದೆ.

-- - ವಿರಾಮ - -

[ವಿಚಾರಣೆಯು ಮುಂದುವರೆದಿದೆ]

ತೈಲಪ : ನಿನ್ನೆ ನಾವು ಮುಂಜನಿಗೆ ಮರಣ ದಂಡನೆ ಎಂದು ಘೋಷಿಸಿದೆವೇ ಹೊರತು ಯಾವ ರೀತಿ ಎಂದು ಹೇಳಲಿಲ್ಲ. ಮುಂಜ ಏನೇ ಅಪರಾಧವೆಸಗಿದ್ದರೂ ಮೂರ್ಧಾಭಿಷಿಕ್ತನಾಗಿದ್ದವನು. ಅವನ ಯೋಗ್ಯತೆ. ಸ್ಥಾನ ಮರ್ಯಾದೆಗೆ ಅಪಚಾರವಾಗಬಾರದು.

ಕೃಷ್ಣ : ನನ್ನದೊಂದು ಮಾತು...... ನನ್ನ ಮಡದಿಯೊಂದಿಗೆ ಮಾತನಾಡುವ ಸಂದರ್ಭದಲ್ಲಿ. ಹೇಡಿಯಂತೆ ಸಾವನ್ನಪ್ಪುವುದಕ್ಕಿಂತ ರಣರಂಗದಲ್ಲಿ ರಕ್ತ ಚೆಲ್ಲಿ ಸಾಯುವುದು ಗೌರವವೆಂದು ಭಾವಿಸುತ್ತಿರುವ ವಿಷಯ ತಿಳಿದು ಬಂತು. ಆದ್ದರಿಂದ ವೀರನಾದವನು ಬಯಸುವ ರೀತಿಯಲ್ಲಿ ಅವನಿಯನ್ನೇಕೆ ಏರ್ಪಡಿಸಬಾರದು?

ತೈಲಪ : ಕೃಷ್ಣರ ಸಲಹೆ ಸ್ವಾಗತಾರ್ಹವೆನಿಸುತ್ತದೆ. ನಾವು ಯಾರನ್ನೂ ಬಲವಂತ ಪಡಿಸುವುದು ಬೇಡ. ಯಾರಾದರೂ ಅವರಾಗಿಯೇ ಮುಂದೆ ಬಂದಾರು. ಇಲ್ಲವಾದಲ್ಲಿ ನಾವೇ ಇದಕ್ಕೆ ಸಿದ್ಧರಾಗುತ್ತೇವೆ.

ಮಲ್ಲಪ : ಸನ್ನಿಧಾನ ಇಂತಹ ಸಂದಿಗ್ಧಗಳಿಗೆ ಒಳಗಾಗಬಾರದು.

ಕೃಷ್ಣ : ನಾನೇ ಇದಕ್ಕೆ ಸಿದ್ಧ.

ಸತ್ಯಾಶ್ರಯ : ಖಂಡಿತ ನಿಮಗ್ಯಾರಿಗೂ ಈ ಅವಕಾಶ ದಕ್ಕುವುದಿಲ್ಲ. ನಮ್ಮ ಅಪ್ಪಾಜಿ ಅವರಿಗೆ ನನ್ನ ಅಸಿಯ ಸಾಮರ್ಥ್ಯವನ್ನು ಪ್ರದರ್ಶಿಸುವುದಕ್ಕೆ ಒದಗಿಬರುತ್ತಿರುವ ಈ ಅವಕಾಶವನ್ನು ಯಾರಿಗೂ ಬಿಟ್ಟು ಕೊಡುವುದಿಲ್ಲ. ಕ್ಷಮಿಸಿ.

ತೈಲಪ : ಭಲಾ ಕುಮಾರ. ನಿಮ್ಮ ಶೌರ್ಯದ ಮಾತುಗಳು ನಮಗೆ ಹೆಮ್ಮೆ ಎನಿಸಿದೆ. ಆದರೆ ನಿಮ್ಮಲ್ಲಿ ಯಾರನ್ನು ಬಯಸುತ್ತಾರೋ. ಮುಂಜರನ್ನು ಕೇಳಬೇಕು.

ಸತ್ಯಾಶ್ರಯ : ಅಪ್ಪಾಜಿ ನಾನೇ ಹೋಗಿ ಮುಂಜರನ್ನು ಕಂಡು ಕರವಾಳದಾನ ಮಾಡಿ. ತಮಗೆ ಅಸಿಯ ಮೂಲಕ ಶಿಕ್ಷೆ ಎಂದು ತಿಳಿಸಿ ಬರುತ್ತೇನೆ.

**ವಂದಿ ಮಾಗಧರು** : 'ಚಾಳುಕ್ಯ ಮಾರ್ತಾಂಡಗೆ
ಚಾಳುಕ್ಯ ಕಂಠಾಭರಣರಿಗೆ
ಸತ್ಯಾಶ್ರಯ ಕುಲತಿಲಕರಿಗೆ
ಮಹಾರಾಜಾಧಿರಾಜಂಗೆ
ಶ್ರೀ ಪೃಥ್ವೀವಲ್ಲಭಂಗೆ'
ಜಯಮಕ್ಕೆ. ಜಯಮಕ್ಕೆ'. [ಜಯಘೋಷಣೆ.]

**ಪಂಡಿಗ** : ಮುಹೂರ್ತ ಸನ್ನಿಹಿತವಾಗುತ್ತಿದೆ. ಇಬ್ಬರೂ ಸಿದ್ಧವಾಗಬೇಕು.

**ತೈಲಪ** : ಜಯಶಾಲಿಯಾಗು ಕುಮಾರ. ಹೋಗಿ ಬಾ. ಮುಂಜರು ನಿನ್ನ ನಿರೀಕ್ಷೆಯಲ್ಲಿ ಇದ್ದಾರೆ.

– – ವಿರಾಮ – –

**ಹಿನ್ನೆಲೆಯಲ್ಲಿ** : [ಖಣಿಲ್ ಖಣಿಲ್ ಶಬ್ದ...... ಹೂಂ..... ಹಿಡಿದುಕೋ! ಆಂ ಹಾಗೆ.... ಭಲಾ.... ಭಲಾ.... ರಾಜಕುಮಾರ...... ಯುವರಾಜರೇ ಬಿಡಬೇಡಿ.... ಹಾಂ! ಅಲ್ಲಿ ಅಲ್ಲಿ ಹೊಡೆಯಿರಿ..... ಅದ್ಭುತ.... ರೋಮಾಂಚಕಾರಿ.... ಇಂತಹ ವೀರಕಾಳಗ ನಮ್ಮ ಜನ್ಮದಲ್ಲಿ ನೋಡಲು ಇನ್ನು ಸಾಧ್ಯವಿಲ್ಲ..... (ಇದ್ದಕ್ಕಿದ್ದಂತೆ) ಅಯ್ಯೋ ಸತ್ಯಾಶ್ರಯರ ತೊಡೆಗೆ ತಾಗಿತಲ್ಲ..... ಹಾ.... ಅದೋ ಸತ್ಯಾಶ್ರಯರ ಕರವಾಳ ಮುಂಜನ ಬಸಿರನ್ನೇ ಬಗೆದಿದೆ.]

**ಮುಂಜ** : (ನೋವಿನಿಂದ) ಹಾ..... ಸತ್ಯಾಶ್ರಯರೇ ನಾನು ಧನ್ಯ. ವೀರಸ್ವರ್ಗವನ್ನು ಕಾಣಿಸಿದಿರಿ.... ನನ್ನ ಅಪರಾಧಗಳಿಗೆ ಕ್ಷಮೆಯಿರಲಿ.

**ಹಿನ್ನೆಲೆಯಲ್ಲಿ** : 'ಸತ್ಯಾಶ್ರಯ ಯುವರಾಜರಿಗ ಜಯವಾಗಲಿ.' [ಜಯಘೋಷ ಕ್ರಮೇಣ ಕ್ಷೀಣಿಸುತ್ತದೆ.]

– – ವಿರಾಮ – –

**ತೈಲಪ** : ಪ್ರಜೆಗಳೇ ತಾವು ಸ್ವಲ್ಪ ತಾಳ್ಮೆಯಿಂದಿರಬೇಕು. ಪರಮಾರರೊಂದಿಗೆ ನಮ್ಮ ವೈರ ಮುಗಿಯಿತು. ನಮ್ಮ ಗೆಲುವಿಗೆ ಆನಂದಿಸುವುದಕ್ಕಿಂತ ಮುಖ್ಯ ಕರ್ತವ್ಯವೊಂದಿದೆ. ನಮಗ್ಯಾರಿಗೂ ಪರಿಚಯವಿರದ ಆದರೆ ಪರಮಾರ ಸಿಂಹಾಸನಕ್ಕೆ ಹಕ್ಕುದಾರರಾದ ಭೋಜರು ಈ ಮುಂಜರ ವಾರಸುದಾರರು. ಅವರು ರಾಜ ಮರ್ಯಾದೆಗಳೊಡನೆ ಮುಂಜರ ಸಂಸ್ಕಾರ ವಿಧಿಗಳನ್ನು ನೆರವೇರಿಸುತ್ತಾರೆ. ನಾವೆಲ್ಲರೂ ಮುಂಜರ ಸಾವಿನಿಂದ ಸಂತೋಷಿಸದೆ ಆತ್ಮಕ್ಕೆ ಶಾಂತಿ ಸಿಗಲೆಂದು ಪ್ರಾರ್ಥಿಸೋಣ.

ಮಲ್ಲಪ್ಪ : ನಮ್ಮ ಯುವರಾಜರಾದ ಸತ್ಯಾಶ್ರಯರು ಗಂಭೀರವಾಗಿ ಗಾಯಗೊಂಡಿದ್ದಾರೆ. ಸನ್ನಿಧಾನ ತಮ್ಮಿಂದ ಅಪ್ಪಣೆ ಪಡೆಯಲು ಇಚ್ಛಿಸುತ್ತಾರೆ. ಅವರಿಗೆ ಅನುವು ಮಾಡಿಕೊಟ್ಟು ತಮ್ಮ ತಮ್ಮ ಸ್ಥಳಗಳಿಗೆ ಹಿಂತಿರುಗಬೇಕೆಂದು ನಮ್ಮ ಪ್ರಾರ್ಥನೆ.

– – ವಿರಾಮ – –

ಕಾಲನೇಮಿ : ಕಾಲ ಸರಿಯುತ್ತಿದೆ. ರಾಜ್ಯಗಳು, ರಾಜವಂಶಗಳು, ರಾಜರು ಕಾಲ ಪ್ರವಾಹದಲ್ಲಿ ಸಾಗಿಹೋಗುತ್ತದೆ. ಕಲ್ಯಾಣಿ ಚಾಲುಕ್ಯ ವೈಭವದ ಪ್ರತೀಕವಾಗಿದ್ದ ಶ್ರೀ ಪೃಥ್ವೀವಲ್ಲಭ ತೈಲಪನೂ ಕಾಲನ ಕ್ರೂರ ದೃಷ್ಟಿಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಸಮರಗಳ ಮೇಲೆ ಸಮರಗಳನ್ನು ಗೆದ್ದ ಧೀರ, ವೀರ ಕೇವಲ ಕಾಲುಜಾರಿ ಬಿದ್ದು ಮೂಳೆ ಮುರಿದುಕೊಂಡು ಬಿದ್ದ. ಸಾವಿಗೆ ಇದೊಂದು ಸಣ್ಣ ನೆಪ. ಇತಿಹಾಸದ ಪುಟಗಳಲ್ಲಿ ನೆನಪ ನಕ್ಷತ್ರಗಳಾಗಿ ಉಳಿದುಹೋದ. ಯುವರಾಜಕುಮಾರ ಇರಿವ ಬೆಡಂಗ, ಸಾಹಸಭೀಮ ಶ್ರೀ ಪೃಥ್ವೀವಲ್ಲಭ ಸತ್ಯಾಶ್ರಯದೇವ ಚಾಲುಕ್ಯವಂಶದ ಜ್ಯೋತಿಯನ್ನು ಹೊತ್ತು ಮುಂದುವರೆದ..... ಇತಿಹಾಸದಲ್ಲಿ ಸ್ಥಿತ್ಯಂತರಗಳು ಗತಿಶೀಲವಾಗಿವೆ. ಇದೇ ಕಲ್ಯಾಣದ ಇತಿಹಾಸದಲ್ಲಿ ಮುಂದೆ ಹೊಸಯುಗ, ಹೊಸ ಬದುಕು, ಹೊಸ ಆಲೋಚನೆಗಳನ್ನು ಗರ್ಭದಲ್ಲಿರಿಸಿಕೊಂಡು ಕ್ರಾಂತಿಯ ಕೆಂಪನ್ನು ಕಂಡಿತು. ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕವಾದ ಹೊಸ ನಕ್ಷೆಯೊಂದು ರೂಪುಗೊಂಡಿತು.

OO



ಕಾಲ ಸರಿಯುತ್ತಿದೆ. ರಾಜ್ಯಗಳು, ರಾಜವಂಶಗಳು, ರಾಜರು - ಎಲ್ಲವೂ ಕಾಲ ಪ್ರವಾಹದಲ್ಲಿ ಸಾಗಿಹೋಗುತ್ತದೆ. ಕಲ್ಯಾಣಿ ಚಾಲುಕ್ಯ ವೈಭವದ ಪ್ರತೀಕವಾಗಿದ್ದ ಶ್ರೀ ಪೃಥ್ವೀವಲ್ಲಭ ತೈಲಪನೂ ಕಾಲನ ಕ್ರೂರ ದೃಷ್ಟಿಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ.

ಸಮರಗಳ ಮೇಲೆ ಸಮರಗಳನ್ನು ಗೆದ್ದ ಧೀರ, ವೀರ ಕೇವಲ ಕಾಲುಜಾರಿ ಬಿದ್ದು ಮೂಳೆ ಮುರಿದುಕೊಂಡು ಬಿದ್ದ. ಸಾವಿಗೆ ಇದೊಂದು ಸಣ್ಣ ನೆಪ. ಇತಿಹಾಸದ ಪುಟಗಳಲ್ಲಿ ನೆನಪ ನಕ್ಷತ್ರವಾಗಿ ಉಳಿದುಹೋದ. ಯುವರಾಜಕುಮಾರ ಇರಿವ ಬೆಡಂಗ, ಸಾಹಸಭೀಮ ಶ್ರೀ ಪೃಥ್ವೀವಲ್ಲಭ ಸತ್ಯಾಶ್ರಯದೇವ ಚಾಲುಕ್ಯವಂಶದ ಜ್ಯೋತಿಯನ್ನು ಹೊತ್ತು ಮುಂದುವರೆದ.....

ಇತಿಹಾಸದಲ್ಲಿ ಸ್ಥಿತ್ಯಂತರಗಳು ಗತಿಶೀಲವಾಗಿವೆ. ಇದೇ ಕಲ್ಯಾಣದ ಇತಿಹಾಸದಲ್ಲಿ ಮುಂದೆ ಹೊಸಯುಗ, ಹೊಸ ಬದುಕು, ಹೊಸ ಆಲೋಚನೆಗಳನ್ನು ಗರ್ಭದಲ್ಲಿರಿಸಿಕೊಂಡು ಕ್ರಾಂತಿಯ ಕೆಂಪನ್ನು ಕಂಡಿತು. ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕವಾದ ಹೊಸ ನಕ್ಷೆಯೊಂದು ರೂಪುಗೊಂಡಿತು.

ಬೆಲೆ ರೂ.120/-



ISBN : 978-93-81071-02-1

